ಈ ಲೇಖಕರ ಕೃತಿಗಳು :

೧. ಮಾಡಿದ್ದುಣ್ಣೋ ಮಹಾರಾಯ
೨. ನೀತಿಚಿಂತಾಮಣಿ (ಮೂರು ಭಾಗಗಳು)
೩. ಕುಣಿಗಲ್ ರಾಮಾಶಾಸ್ತ್ರಿಗಳ ಚರಿತ್ರೆ
೪. ಮುಸುಗ ತೆಗೆಯೇ ಮಾಯಾಂಗನೆ

ಎಂ. ಎಸ್. ಪುಟ್ಟಣ್ಣ

# ಸುಮತಿ ಮದನಕುಮಾರರ ಚರಿತ್ರೆ

'SANDFORD AND MERTON' ಎಂಬ ಕೃತಿಯ
ಮಾದರಿಯಲ್ಲಿ ಬರೆದದ್ದು

ಪ್ರಕಾಶಕರು
ಕಾವ್ಯಾಲಯ
ಮೈಸೂರು

ಮೊದಲನೆಯ ಮುದ್ರಣ : ೧೯೧೩

ನಾಲ್ಕನೆಯ ಮುದ್ರಣ :

ಕಾವ್ಯಾಲಯದಿಂದ ಮೊದಲನೆಯ ಮುದ್ರಣ : ೧೯೪೯



ಪ್ರಕಾಶಕರು :

ಕೂಡಲಿ ಚಿದಂಬರಂ, ಕಾವ್ಯಾಲಯ, ಮೈಸೂರು.

ಮುದ್ರಣಕಾರರು :

ಜಿ. ಎಚ್. ರಾಮರಾವ್, ಬಿ.ಎಸ್‌ಸಿ.,

ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು

# PREFACE

THREE stories of great educational importance are well known to the literary world. One of them is "Hithopadesa" by Vishnusarma. The second is "Adventures of Telemachus" by the French writer Fenelon. The third is " The History of Sandford and Merton" by Thomas Day. It is not necessary to discuss the respective merits of the three great works. Certain facts and tradition supported by the internal evidence in the works themselves, go to show that the first two works were intended for the training of princes. These works coupled with the personal influence of these writers themselves, probably fulfilled the object for which they were intended. But 'Hithopadesa' or its expanded form called 'Panchatantra' is all fable, where dumb animals are invested with the power of speech. 'Adventures of Telemachus' which is classed by some writers of the eighteenth century among epic poems, has the drawback of the intervention of supernatural agency. " Why do not birds and jackals speak now ?" " Why do not Gods come to the earth now ?" are questions guilelessly and spontaneously asked by the little ones and are quite within the experience of men familiarly conversant with young minds during their plastic period. The third work *viz.*, Day's 'History of Sandford and Merton' was written in the eighteenth century. It is free from the above drawbacks. It narrates in an impressive manner only what transpires in our every day life and imperceptibly educates young minds to higher ideals.

It is this last work that I took for my model in writing the present treatise. Though the entire story is essentially

Hindu and Karnatic in its nature, I adapted some of them to my requirements. The book is intended for the benefit of all boys and girls. As the 'History of Sandford and Merton' which is my ideal, deserves to be in the hands of all teachers and pupils, all parents and children, it is my prayer that this book, written after the model of that immortal work, may not be thrown away without a calm perusal by all those interested in the cause of education. It is written in the simplest colloquial style so that it may be within the comprehension of all readers.

BANGALORE,<br>*January 13, 1913.* — M. S. P.

This Edition has been revised and brought out to meet a heavy demand up-to-date.

Bangalore,<br>*June, 19, 1922.* — M. S. P.

## ಕೃತಜ್ಞತೆ

ಶ್ರೀಮಾನ್ ಡಿ. ವಿ. ಗುಂಡಪ್ಪನವರ ನೆರವಿನಿಂದ ಶ್ರೀಮಾನ್ ಎಂ. ಪಿ. ಸೋಮಶೇಖರರಾವ್ ಮತ್ತು ಸಹೋದರರ ಅನುಮತಿ ಪಡೆದು ಈ ಕೃತಿಯನ್ನು ಪ್ರಕಟಿಸಲಾಗಿದೆ. ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರು ಇದರ ಮುದ್ರಣದಲ್ಲಿ ಹಲವು ಉಪಯುಕ್ತ ಸಲಹೆಗಳನ್ನು ಕೊಟ್ಟು ಉಪಕಾರ ಮಾಡಿದ್ದಾರೆ. ಇವರೆಲ್ಲರಿಗೂ ನನ್ನ ವಂದನೆಗಳು. ಈ ಪುಸ್ತಕವನ್ನು ವಿಶೇಷ ಶ್ರಮವಹಿಸಿ ಶೀಘ್ರವಾಗಿಯೂ ಅಂದವಾಗಿಯೂ ಮುದ್ರಿಸಿಕೊಟ್ಟ ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸಿನ ಮಾಲೀಕರಾದ ಶ್ರೀಮಾನ್ ಜಿ. ಎಚ್. ರಾಮರಾಯರ ಸಹಕಾರವನ್ನು ನೆನೆಯದಿರಲಾರೆ.

ಕೂಡಲಿ ಚಿದಂಬರಂ

# ಪೀಠಿಕೆ

---

ಸಣ್ಣ ಹುಡುಗರಿಗೆ ಕ್ರಮವಾಗಿ ವಿದ್ಯಾಭ್ಯಾಸ ಮಾಡಿಸುವುದು ಬಹು ಶ್ರಮ. ಇದರ ಕಷ್ಟವು ಈ ವಿಷಯದಲ್ಲಿ ಪರಿಶ್ರಮಪಟ್ಟಿರತಕ್ಕ ವಿದ್ವಾಂಸರಿಗೆ ಗೊತ್ತಾಗಿದೆ. 'ಒಂದು ಮಠಾ ಇಟ್ಟುಕೊಂಡು ಹುಡುಗರಿಗೆ ಓದಿಸುವುದಕ್ಕೂ ಇವನಿಗೆ ಯೋಗ್ಯತೆ ಇಲ್ಲ; ಯಾವ ಕೆಲಸಕ್ಕೆ ತಾನೇ ಈ ಮನುಷ್ಯ ಬಂದಾನು?' ಎಂಬದಾಗಿ ಜನರು ಆಡಿಕೊಳ್ಳುವರು. ಹುಡುಗರಿಗೆ ಓದಿಸುವುದು ಕೇವಲ ನಿಕೃಷ್ಟವಾದ ವೃತ್ತಿ ಎಂತಲೂ, ಇನ್ನು ಅದಕ್ಕಿಂತಲೂ ಹೀನವಾದ ವೃತ್ತಿ ಯಾವುದೂ ಇಲ್ಲವೆಂತಲೂ, ಈ ವೃತ್ತಿಯಿಂದ ಜೀವನ ಮಾಡತಕ್ಕವನು ಕೇವಲ ಅಧಮನೆಂತಲೂ, ಅರಿಯದ ಅಲ್ಪರು ಹೇಳಿಕೊಳ್ಳುವರು. ಆದರೆ ಉಪಾಧ್ಯಾಯರ ವಿಷಯವನ್ನು ಏನು ವರ್ಣಿಸಲಿ? ಕೈಯಲ್ಲಿ ಒಂದು ಬೆತ್ತವನ್ನು ಹಿಡಿದು ಹತ್ತುಜನ ಹುಡುಗರನ್ನು ಕೂರಿಸಿಕೊಂಡು ಯಾವ ವಿಧಿಯನ್ನೂ ಅನುಸರಿಸದೆ ಮನಸ್ಸಿಗೆ ಬಂದುದನ್ನು ಹೇಳುತಾ ಸಿಕ್ಕಿದ ಹುಡುಗರನ್ನು ಬೆತ್ತದಿಂದ ಸೆಳೆಯುತಾ ಇದ್ದರೆ, ವಿದ್ಯಾಭ್ಯಾಸ ಮಾಡಿಸಿದಂತಾಗುವುದೆಂದು ತಿಳಿದಿರತಕ್ಕವರು ಅನೇಕರುಂಟು. ಇದೂ ಸಹಿತ ಅರಿಯದ ಅಲ್ಪರ ಕೆಲಸವೇ ಸರಿ. ಬಾಲಕರ ಬುದ್ಧಿ ಯಾವ ಸ್ಥಿತಿಯಲ್ಲಿದೆಯೋ ಅದನ್ನು ಮೊದಲು ತಿಳಿದುಕೊಂಡು, ತನ್ನ ಬುದ್ಧಿಯನ್ನು ಬಾಲಕರ ಬುದ್ಧಿಯ ಸ್ಥಿತಿಗೆ ಇಳಿಸಿಕೊಂಡು, ಹೇಳಿಕೊಟ್ಟದ್ದನ್ನು ಬಾಲಕರು ತಿಳಿದುಕೊಳ್ಳುವುದಕ್ಕೆ ಪ್ರತಿಬಂಧಕಗಳೇನಿವೆ ಎಂಬುದನ್ನು ಪರೀಕ್ಷಿಸಿ, ಅಂಥಾ ಪ್ರತಿಬಂಧಕಗಳನ್ನು ನಿವಾರಣಮಾಡಿ, ತನ್ನ ಮನಸ್ಸಿನಲ್ಲಿರುವುದನ್ನು ಬಾಲಕನು ತಿಳಿದುಕೊಳ್ಳುವುದಕ್ಕೆ ಬೆಳಕನ್ನು ತೋರಿಸುವ ಪುಣ್ಯಾತ್ಮರು ಈ ಲೋಕದಲ್ಲಿ ಬಹಳ ಕಡಮೆ. ಬಾಲ್ಯದಲ್ಲಿ ಆದ ಶಿಕ್ಷಾಕ್ರಮದ ರೀತಿಯು ಒಳ್ಳೇದಾಗಲಿ ಕೆಟ್ಟದಾಗಲಿ ಅದು

ಹುಡುಗರ ಮನಸ್ಸಿಗೆ ಅಂಟಿದರೆ ಬಾಲಕರ ಜನ್ಮವಿರುವವರೆಗೂ, ಅದೇ ಕ್ರಮವನ್ನೇ ಬುದ್ಧಿ ಅನುಸರಿಸುವುದು.

ವಿದ್ಯಾಭ್ಯಾಸ ಮಾಡುವ ರೀತಿಯನ್ನು ವಿಧಿವಾಕ್ಯಾಗಿ ಹೇಳದೆ, ಒಳ್ಳೇಮಾರ್ಗವನ್ನು ಹುಡುಗರು ಗ್ರಹಿಸುವಹಾಗೆ ಕಥಾರೂಪವಾಗಿ ದೊಡ್ಡ ವಿಷಯಗಳನ್ನು ತಿಳಿಸುವುದಕ್ಕೆ ನಮ್ಮ 'ಹಿತೋಪದೇಶ' ಅಥವಾ 'ಪಂಚತಂತ್ರ'ವನ್ನು ಬಿಟ್ಟರೆ ಬೇರೇ ಯಾವ ಗ್ರಂಥವೂ ನಮ್ಮಲ್ಲಿಲ್ಲ. ಆದರೆ 'ಪಂಚತಂತ್ರ'ದಲ್ಲಿ ಮಾತನಾಡಲು ಶಕ್ತಿ ಇಲ್ಲದ ಜಂತುಗಳು ಮಾತನಾಡುವಹಾಗೆ ತೋರಿಸಿರುವ ಕಾರಣ, ಲೋಕದಲ್ಲಿಲ್ಲದ ಸುಳ್ಳನ್ನು ಹೇಳುವುದರ ಮೂಲಕ ನಿಶ್ಚಯವನ್ನು ಬೋಧಿಸಿದಂತಾಗುವುದು. ಇದು ಆಧುನಿಕರ ಮತವಲ್ಲ. ಈ ದೋಷವಿಲ್ಲದೆ ಇಂಗ್ಲೀಷಿನಲ್ಲಿ ಉದ್ದಾಮವಾಗಿ ರಚಿಸಲ್ಪಟ್ಟಿರುವ ಒಂದು ಗ್ರಂಥವನ್ನು ಮಾದರಿಯಾಗಿ ಇಟ್ಟುಕೊಂಡು ಈ ಪುಸ್ತಕವನ್ನು ನಾನು ಬರೆದೆನು. ಈ ಪುಸ್ತಕವನ್ನು ಹೆಂಣು ಗಂಡು ಆದಿಯಾಗಿ ಆಬಾಲವೃದ್ಧರೂ ಅವರ ಜನ್ಮದಲ್ಲಿ ಒಂದು ಸಾರಿಯಾದರೂ ಓದಿರಬೇಕೆಂದು ನಾನು ಹೇಳುತೇನೆ. ಹೀಗೆ ಹೇಳುವ ನನ್ನ ಮಾತು ಆತ್ಮಸ್ತುತಿ ಎಂದು ಭಾವಿಸುವವರು ತಮ್ಮ ಅಭಿಪ್ರಾಯವನ್ನು ಒಳಹೊಕ್ಕು ಸ್ವಲ್ಪ ದೀರ್ಘವಾಗಿ ಯೋಚಿಸಿದರೆ, ನಾನು ಮಾದರಿಯಾಗಿ ಇಟ್ಟುಕೊಂಡ ಗ್ರಂಥವನ್ನು ಬರೆದ ಪುಣ್ಯಾತ್ಮನ ಸ್ತೋತ್ರವೇ ಸರಿ ಎಂದು ತೋರದೇ ಇರಲಾರದು.

ಬೆಂಗಳೂರು

ಎಂ. ಎಸ್. ಪುಟ್ಟಣ್ಣ

ವಾಚಕರ ಪ್ರಯೋಜನಾರ್ಥವಾಗಿ ಮೂರನೇಸಾರಿ ಛಾಪಿಸಿದೆ.

ಬೆಂಗಳೂರು,
ದುಂದುಭಿ ಸಂ॥ ಜ್ಯೇಷ್ಠ ಬ॥
೧೦ ಸೋಮವಾರ.

ಎಂ. ಎಸ್. ಪುಟ್ಟಣ್ಣ

# ಸುಮತಿ ಮದನ ಕುಮಾರರ ಚರಿತ್ರೆ

## ೧ ನೆ ಅಧ್ಯಾಯ

### ಪೀಠಿಕೆ

ಶಾಲಿವಾಹನ ಶಕ ೧೪೩೦--೪೦ ರಲ್ಲಿ ಕರ್ಣಾಟಕ ರಾಜ್ಯದ ಮಲೆ ನಾಡುಸೀಮೆಯಲ್ಲಿ ಒಬ್ಬಾನೊಬ್ಬ ಚಿಕ್ಕ ಪಾಳಯಗಾರನಿದ್ದನು. ಆತನ ಹೆಸರು ಅನಂಗರಾಜ. ಆ ಕಾಲದಲ್ಲಿ ಹತ್ತು ಇಪ್ಪತ್ತು ಹಳ್ಳಿಗಳನ್ನು ಕಟ್ಟಿಕೊಂಡು ಆ ಚಿಕ್ಕ ರಾಜ್ಯದಲ್ಲಿ ಆಳುತ್ತಿದ್ದ ಪಾಳಯಗಾರರನ್ನು ಅಲ್ಲಿನ ಸಾಧಾರಣ ಬಡಜನರೆಲ್ಲರೂ ದೊರೆಗಳು ದೊರೆಗಳು ಎಂದು ಕರೆಯುವ ಪದ್ಧತಿ ಇತ್ತು. ಅಲ್ಲಿನ ಬಡ ಆರಂಬಗಾರರು ಬೆಳೆದ ಕಾಳು ಕಡ್ಡಿಯೆಲ್ಲಾ ಈ ದೊರೆಗಳ ಉಗ್ರಾಣಕ್ಕೆ ಬಂದುಬೀಳುತಿತ್ತು. ಅವರು ಸಂಪಾದಿಸಿದ ಪುಟ್ಟ ಗಂಟೆಲ್ಲಾ ದೊರೆಯ ಬೊಕ್ಕಸದಲ್ಲಿ ಗಂಟಾಗು ತಿತ್ತು. ಹೆಣ್ಣು ಗಂಡು ಆದಿಯಾಗಿ ಇವರ ಅರಮನೆಯ ಬಿಟ್ಟೀ ಬೇಗಾರಿ ಚಾಕರಿಯನ್ನು ಮಾಡಿ ಮಾಡಿ ಮುಪ್ಪಾಗುತಾ ಇದ್ದರು. ದೊರೆಯ ಆಜ್ಞೆಯನ್ನು ಮೀರಿದವರಿಗೆ ಚಿತ್ರಾಜ್ಞೆಯಾಗುತಿತ್ತು. ಮುಟ್ಟಬೇಡವೆಂದ ವಸ್ತುವನ್ನು ಮುಟ್ಟಿದವರಿಗೆ ಕೈ ಕತ್ತರಿಸುವುದು, ದೊರೆಯನ್ನು ಕತ್ತೆತ್ತಿ ನೋಡಿದವರಿಗೆ ಕಣ್ಣು ಕೀಳಿಸುವುದು, ದೊರೆಯ ಉದ್ಯಾನವನದ ಹೂವನ್ನು ಕಿತ್ತು ಮೂಸಿನೋಡಿದವರಿಗೆ ಮೂಗ ಕುಯಿಸುವುದು, ದೊರೆಯನ್ನು ದೂಷಿಸಿ ಮಾತನಾಡಿದವರಿಗೆ ನಾಲಗೆ ಯನ್ನು ಸೀಳಿಸುವುದು, ದೊರೆಯ ತೋಟದ ಹಣ್ಣನ್ನು ತಿಂದವರಿಗೆ ಹಲ್ಲ ಮುರಿಸುವುದು ಇವೇ ಮೊದಲಾದ ದಂಡನೆಗಳು ನಿತ್ಯವೂ ಗೊತ್ತಿಲ್ಲ ದಷ್ಟು ನಡೆಯುತಿದ್ದವು. ಆದರೆ ಯಾವ ಶಿಕ್ಷೆಯನ್ನು ವಿಧಿಸಬೇಕಾದರೂ, ದೊರೆಯ ವಿಷಯದಲ್ಲಿ ನಿಜವಾದ ಅಥವಾ ಸುಳ್ಳಾದ ಯಾವುದಾದರೂ ಒಂದು ಅಪರಾಧವನ್ನು ನಡಸಿದವನಿಗೇ ಹೊರತು, ಉಳಿದ ಯಾವ

ಕೆಟ್ಟಕೆಲಸವನ್ನು ಯಾರು ಮಾಡಿದರೂ ಏನೂ ಆಗುತಿರಲಿಲ್ಲ. ರಾಜಾಜ್ಞೆಗೆ ಎಲ್ಲರೂ ಗಡಗಡನೆ ನಡುಗುತಾ ಯಾವಕಾಲಕ್ಕೆ ಏನೋ ಎಂದು ಹಸಾದಕ್ಕೆ ಹವ್ಮೈಸಿಕೊಂಡಿದ್ದರು. ಹೀಗೆ ಇದ್ದಾಗ್ಯೂ ದೊರೇಮನೆಯಲ್ಲಿ ಚಾಕರಿ ಮಾಡುತಿದ್ದವರಿಗೆಲ್ಲಾ ಅರಮನೆಯಲ್ಲಿಯೇ ಮೃಷ್ಟಾನ್ನ ಭೋಜನವಾಗುತಿತ್ತು. ಈ ಬಡಜನರಿಗೂ ಇವರ ಕುಟುಂಬದವರಿಗೂ ತಲೆಗೆ ಒಂದು ಬಟ್ಟೇವೋರೆಗೆ ನವರಾತ್ರಿಗೂ ಯುಗಾದಿಗೂ ಇನಾಮು ದೊರೆಯುತಿತ್ತು. ಇಷ್ಟೇ ಅಲ್ಲ; ಅರಮನೇ ಚಾಕರರಲ್ಲದವರು ಅನೇಕರು ಸರ್ಕಾರದ ಬಟಾಯಿ ಭೂಮಿಗಳನ್ನು ವ್ಯವಸಾಯಮಾಡುತಾ, ಇವಾರ್ರ ಬಂದ ದವಸದಲ್ಲಿ ರಾಜಪಾಲನ್ನು ಕೊಟ್ಟು ಕುಳಪಾಲನ್ನು ತಾವು ತೆಗೆದುಕೊಂಡು ಸುಖವಾಗಿ ಜೀವಿಸಿಕೊಳ್ಳುತಿದ್ದರು. ಅರಮನೆಯಲ್ಲಿ ಯಾರಾದರೂ ಮಕ್ಕಳು ಹುಟ್ಟಿದರೆ, ಮದುವೆಯಾದರೆ, ಕುಳಕ್ಕೆ ಮೂರು ಹಣವನ್ನು ತೆರಬೇಕಾಗಿತ್ತು. ಹೀಗಿದ್ದಾಗ್ಯೂ, ರಾಜಿಕವಾದ ದಂಡಿನ ಹಾವಳಿಯೂ, ದೈವಿಕವಾದ ಕ್ಷಾಮವೂ, ಕೆಟ್ಟ ರೋಗಗಳೂ ಬಂದಾಗಮಾತ್ರ ಅರಸು ತನ್ನ ಪ್ರಜೆಗಳನ್ನು ತನ್ನ ಮಕ್ಕಳ ಕಂಡಹಾಗೆ ಪೋಷಿಸುತಿದ್ದನು.

ಹೀಗಿರುತಿರಲಾಗಿ ಈ ಅನಂಗರಾಜನೆಂಬ ಪಾಳಯಗಾರನಿಗೆ ಒಬ್ಬನೇ ಒಬ್ಬ ಮಗ ಇದ್ದನು. ಈ ಮಗನ ಮೇಲೆ ತಂದೆಗೆ ಅಧಿಕವಾಗಿ ಪ್ರೀತಿ ಇತ್ತು : ಮಗನಿಗೆ ಚೆನ್ನಾಗಿ ವಿದ್ಯವನ್ನು ಕಲಿಸಬೇಕೆಂಬ ಕುತೂಹಲವು ಆ ಪ್ರೀತಿಗಿಂತಲೂ ಹೆಚ್ಚಾಗಿ ಇತ್ತು. ಇದಕ್ಕಾಗಿ ತನ್ನ ನೆರೇಪಾಳಯಪಟ್ಟಿನ ದೊರೆಯಾಗಿ ತನಗೆ ಸ್ನೇಹಿತನಾಗಿರುವ ಕುಮಾರನಾಯಕನ ರಾಜಧಾನಿಯಾದ ಬಿದರೆ ಎಂಬ ಪಟ್ಟಣದಲ್ಲಿ ತಾನು ಹೋಗಿ ಕೆಲವು ವರುಷಗಳು ವಾಸವಾಗಿದ್ದು, ಅಲ್ಲಿನ ಮಹಾ ವಿದ್ವಾಂಸರಲ್ಲಿಯೂ ಕ್ರಮವರಿತು ನಡಸುತಿರುವ ಪಾಠಶಾಲೆಗಳಲ್ಲಿಯೂ, ತನ್ನ ಪುತ್ರನಿಗೆ ವಿದ್ಯಾವ್ಯಾಸಂಗವನ್ನು ಮಾಡಿಸಬೇಕೆಂದು ಅನಂಗರಾಯನು ನಿಶ್ಚೈಸಿದನು. ಅದೇ ಪ್ರಕಾರ ಈ ದೊರೆಯು ತನ್ನ ಪಟ್ಟಣವಾದ ಬನವಾಸಿಯನ್ನು ಬಿಟ್ಟು ಬಿದರೆಗೆ ಮಗನನ್ನು ಕರೆತಂದು ತನ್ನ ಯೋಗ್ಯತೆಗೆ ತಕ್ಕಂಥಾ ಒಂದು ಮನೆಯನ್ನು ಮಾಡಿ ಹುಡುಗನನ್ನು

ಅಲ್ಲೇ ಇಟ್ಟು ಅವನ ಉಪಚಾರಕ್ಕೆ ಬೇಕಾದಷ್ಟು ಜನ ಚಾರರನ್ನು ನೇಮಿಸಿ ಹೊರಟುಹೋದನು. ಈ ರಾಜಕುಮಾರನ ತಾಯಿಯು ಮಗುವಿನ ಸಮೀಪದಲ್ಲಿಯೇ ಇರುತಿದ್ದಳು. ತಂದೆಯೂ ಆಗಾಗ್ಗೆ ಬಂದು ನೋಡಿಕೊಂಡು ಹೋಗುತಿದ್ದನು.

ಮದನಕುಮಾರನು ಬನವಾಸಿಯನ್ನು ಬಿಟ್ಟು ಬಿದರೆಗೆ ಬರುವಾಗ್ಗೆ ಅವನಿಗೆ ೬ ವರುಷ. ಈ ಬಾಲಕನು ಸ್ವಭಾವವಾಗಿ ಒಳ್ಳೇ ಮಾರ್ಗವನ್ನು ಅನುಸರಿಸತಕ್ಕವನಾಗಿದ್ದನು. ಆದರೆ ಅವನ ಅದೃಷ್ಟಕ್ಕೆ, ಮೊದಲಿನಿಂದಲೂ ಅತಿಯಾಗಿ ಮುದ್ದು ಮಾಡಿ ಮಾಡಿ ಹುಡುಗನ ಅಭ್ಯಾಸವನ್ನು ಕೆಡಿಸಿದ್ದರು. ಬನವಾಸಿಯಲ್ಲಿ ಈತ ಇದ್ದಾಗ್ಗೆ ಅನೇಕ ಆಳುಗಳು ಇವನ ಅಂಗರಕ್ಷಕರಾಗಿ ಕೈಕಟ್ಟಿಕೊಂಡು ಇರುತಿದ್ದರು. ಈ ಆಳುಗಳೆಲ್ಲಾ ಬಾಯಿಮುಚ್ಚಿಕೊಂಡು ಸುಮ್ಮನಿರಬೇಕಾಗಿತ್ತೇ ಹೊರತು, ಏನೇ ಆಗಲಿ, ಯಾರೂ ಈ ಹುಡುಗನಿಗೆ ಎದುರುಮಾತನಾಡ ಕೂಡದಾಗಿತ್ತು, ಇವನು ಓಡಿಯಾಡುವಾಗಕೂಡ ಇವನ ಸಂಗಡ ಯಾವಾಗಲೂ ಇಬ್ಬರು ಓಲೆಕಾರರು ಸೊಂಟಕಟ್ಟಿಕೊಂಡು ಓಡಿಯಾಡುತಲೇ ಇದ್ದರು. ಅವರಲ್ಲಿ ಒಬ್ಬನು ಬಿಸಿಲಿಗೆ ಮರೆಯಾಗಿ ರಾಜಪುತ್ರನಿಗೆ ದೊಡ್ಡ ಛತ್ರಿಯನ್ನು ಬಿಚ್ಚಿ ಹಿಡಿದುಕೊಂಡಿರುತಲೇ ಇದ್ದನು; ಹುಡುಗನು ಓಡಿಯಾಡಿ ಆಯಾಸಪಟ್ಟಾಗ ಅವನನ್ನು ಕಂಕುಳಿಗೆ ಎತ್ತಿಕೊಳ್ಳುವುದಕ್ಕೆ ಮತ್ತೊಬ್ಬ ಆಳು ಸಿದ್ಧನಾಗಿದ್ದನು; ಈ ಅರಸು ಮಗನಿಗೆ ರತ್ನಖಚಿತವಾದ ನಿಲುದೊಡಿಗೆಯನ್ನು ಇಟ್ಟು ದಿವ್ಯವಾದ ಕಿಂಕಾಬಿನ ಉಡುಪನ್ನು ಹಾಕುತಿದ್ದರು. ಈತನಿಗೆ ಸುನೇರೀ ಕೆಲಸ ಮಾಡಿದ ಒಂದು ಪಲ್ಲಕ್ಕಿ ಇತ್ತು. ಬೇಕಾದ ಶೃಂಗಾರವನ್ನು ಮಾಡಿಕೊಂಡು ಈ ಪಲ್ಲಕ್ಕಿಯಲ್ಲಿ ಕೂತು, ಸುಂದರನಾದ ಈ ಹುಡುಗನು ತನ್ನ ಸಂಗಡ ಆಡುವ ಓರಗೇ ಹುಡುಗರ ಮನೆಗೆ ಹೋಗುತಿದ್ದನು. ತಾಯಿಗೆ ಇವನಲ್ಲಿ ವಿಪರೀತವಾಗಿ ಪ್ರೀತಿಯಿತ್ತು. ಯಾವ ಪದಾರ್ಥ ಬೇಕೆಂದು ಮಗ ಅತ್ತಾಗ್ಗೂ ಕೂಡಲೆ ಅವನಿಗೆ ಅದನ್ನು ತರಿಸಿಕೊಡುತಿದ್ದಳು, "ಅಮ್ಮೈಯ, ನಾನು ಓದಿದರೆ ನನಗೆ ತಲೆನೋವು ಬರುತ್ತೆ," ಎಂದು ಆ ಪುತ್ರರತ್ನವು ಆಗಾಗ್ಗೆ ಹೇಳುತಿದ್ದಕಾರಣ, ತಾಯಿಯಾದ

ಮಿನಾಂಬಿಕಿದೇವಿಯು ಓದುವುದಕ್ಕೆ ಮಗುವನ್ನು ಅರೆಗಳಿಗೆಯೂ ಬಿಡುತಿರಲಿಲ್ಲ.

ಇದರ ಫಲವೇನಾಯಿತು ಎಂದರೆ: ಮದನಕುಮಾರನಿಗೆ ಕೇಳಿದ್ದನ್ನೆಲ್ಲಾ ಕೊಟ್ಟಾಗ್ಯೂ, ಅವನಿಗೆ ಸಿಡುಕೂ ಅಸಮಾಧಾನವೂ ತಪ್ಪಲಿಲ್ಲ. ಈ ಹುಡುಗನು ಒಂದಾನೊಂದು ವೇಳೆ ತನಗೆ ಮನಸ್ಸು ಬಂದಷ್ಟು ಮಿಠಾಯಿಯನ್ನು ಅಸಹ್ಯ ಹಿಡಿಯುವ ತನಕ ತಿಂದುಬಿಡುತಿದ್ದ. ಇದರಿಂದ ಮೈಗೆ ಉಂಟಾಗುತಿದ್ದ ಅಲಸಿಕೆಯನ್ನು ಹೋಗಲಾಡಿಸಲು ಭೇದೀ ಔಷಧವನ್ನು ಕೊಟ್ಟರೆ ಅದು ಕಹಿ, ತಾನು ಒಲ್ಲೆನೆಂದು ಒರಟುತನಮಾಡುತಿದ್ದ. ಮತ್ತೊಂದುವೇಳೆ ಇಲ್ಲದ್ದನ್ನೆಲ್ಲಾ ಕೊಡು ಎಂದು ರಚ್ಚೆ ಹಿಡಿಯುತಿದ್ದ; ಇವನ ಮಾತಿಗೆ ಎದುರುಮಾತು ಆಡಿದ್ದನ್ನು ಕಂಡ ಅಭ್ಯಾಸವೇ ಇವನಿಗೆ ಇರಲಿಲ್ಲವಾದಕಾರಣ, ಹಾಗೆ ಹೋರಿಯಾಡತಕ್ಕ ಕಾಲಗಳಲ್ಲಿ ಈ ಒರಟ ಹುಡುಗನನ್ನು ಸಮಾಧಾನ ಮಾಡುವುದು ಬಹು ಕಷ್ಟವಾಗಿತ್ತು. ಮನೆಗೆ ಹೊರಗಿನವರು ಯಾರಾದರೂ ಊಟಕ್ಕೆ ಬಂದಾಗ, ಮನೆಯಲ್ಲಿ ಮಾಡಿದ್ದನ್ನೆಲ್ಲಾ ಮೊದಲೇ ತನಗೆ ಹಾಕಿ ಉಣ್ಣಿಸಬೇಕು; ಇಲ್ಲದಿದ್ದರೆ ವಿಪರೀತವಾಗಿ ಗದ್ದಲಮಾಡಿ ಎಲ್ಲರನ್ನೂ ತೊಂದರೆ ಮಾಡುತಿದ್ದನು. ದೊರೆಯು ಬಂದ ಅತಿಥಿಗಳ ಸಂಗಡ ಊಟಕ್ಕೆ ಕೂತಾಗ ರಾಜಪುತ್ರನು ಅವರ ಎಡೆಯನ್ನೆಲ್ಲಾ ಎಳೆದು ಬಡಿಸಿದ್ದ ಪದಾರ್ಥವನ್ನು ಮನೆಯಲ್ಲೆಲ್ಲಾ ಚೆಲ್ಲಾಡಿ, ಬಟ್ಟಲುಗಳನ್ನು ಉರುಟಿ ಎಲೆಯನ್ನು ಹರಿಯುತಿದ್ದನು. ಇಂಥಾ ಚೇಷ್ಟೆಗಳಿಂದ ಇತರರಿಗೆ ಬೇಜಾರು ಆಗುತಿತ್ತು. ಮತ್ತು ಇಲ್ಲದ ಚೇಷ್ಟೆಮಾಡುತಿರುವುದು, ಭಾರವಾಸಿಯಾದ ಸಾಮಾನುಗಳನ್ನು ತನ್ನ ತಲೇಮೇಲೆ ಕೆಡವಿಕೊಳ್ಳುವುದು ಇಂಥಾ ಚೇಷ್ಟೆಗಳೆಲ್ಲಾ ಇವನಿಗೆ ಸಾಧಾರಣವಾಗಿದ್ದವು ಒಂದಾನೊಂದು ಸಮಯದಲ್ಲಿ ಮರಳಿಗೆಜ್ಜೆಗುದಿ ಹಾಯುತಿದ್ದ ಒಂದು ದೊಡ್ಡ ಹಂಡೇನೀರನ್ನು ತನ್ನ ಮೇಲೆ ಉರುಳಿಸಿಕೊಂಡು ಸತ್ತು ಹೋಗುತಿದ್ದನು. ಇದಲ್ಲದೆ ಅತಿ ಲಾಲನೆಯಿಂದ ಸಾಕಿದ್ದರಾದಕಾರಣ, ಆಗಾಗ್ಗೆ ಇವನಿಗೆ ಏನಾದರೂ ಒಂದು ಜಾಡ್ಯ ಬರುತಲೇ ಇತ್ತು. ಸ್ವಲ್ಪ ಗಾಳಿ ಬೀಸಿದರೆ ಆಗಲೇ ನೆಗಡಿ

ಯಾಗುತಿತ್ತು, ಸ್ವಲ್ಪ ಬಿಸಿಲಿಗೆ ಹೋದರೆ ಆಗಲೇ ಜ್ವರ ಬರುತಿತ್ತು; ಹೀಗೆ ತೀರ್ಥ ತೆಗೆದುಕೊಂಡರೆ ಸೀತ, ಮಂಗಳಾರ್ತಿ ತೆಗೆದುಕೊಂಡರೆ ಉಷ್ಣ ಎನ್ನುವ ಮಟ್ಟಿಗೆ ಈ ಹುಡುಗನ ದೇಹಪ್ರಕೃತಿಯು ನಾಜೂಕಾಗಿತ್ತು. ಹೊರಗೆ ಓಡಾಡಿ ಇತರ ಮಕ್ಕಳಹಾಗೆ ಕುಣಿದಾಡಿಕೊಂಡು ಇರುವುದಕ್ಕೆ ಬದಲಾಗಿ, "ಒಂದು ಕಡೆ ಸುಮ್ಮನೆ ಮಕ್ಕಳು ಕೂತಿರಬೇಕು; ಇಲ್ಲದಿದ್ದರೆ ಬಟ್ಟೆಯೆಲ್ಲಾ ಮಾಸಿಹೋಗುವುದು" ಎಂದು ಹೇಳಿಕೊಡುತಿದ್ದರು. "ಮಕ್ಕಳು ಹೊರಕ್ಕೆ ಹೋಗಬಾರದು, ಮನೆಯಲ್ಲಿಯೇ ಇರಬೇಕು: ಇಲ್ಲದಿದ್ದರೆ ಮುಖವೆಲ್ಲಾ ಕಪ್ಪಾಗುವುದು" ಎಂದು ಹೇಳಿಕೊಡುತಿದ್ದರು. ಈ ಸುಕುಮಾರನು ಬಿದರೆಗೆ ಸೇರುವಾಗ್ಯೆ ಈ ವಿಧವಾದ ವಿದ್ಯಾಭ್ಯಾಸದ ಫಲದಿಂದ ಓದುವುದಕ್ಕೂ ಬರೆಯುವುದಕ್ಕೂ ಬಾರದೆ, ತನ್ನ ಅವಯವಗಳನ್ನು ಈ ಕಡೆ ಆ ಕಡೆ ಸರಾಗವಾಗಿ ಅಲುಗಿಸಲಾರದೆ, ಸ್ವಲ್ಪ ಆಯಾಸವನ್ನೂ ಸಹಿಸಲಾರದೆ, ಹೀಗೆ ಕೈಲಾಗದ ಮುಕ್ಕನಾಗಿದ್ದನು. ಇವನ ಅಹಂಕಾರಕ್ಕೂ ಕೋಪಕ್ಕೂ, ದುಡುಕಿಗೂ ಒರಟುತನಕ್ಕೂ ಮಿತಿಯೇ ಇರಲಿಲ್ಲ.

ಬಿದರೆಯಲ್ಲಿ ಮದನಕುಮಾರನ ಉಪ್ಪರಿಗೇ ಮನೆಯ ಸಮೀಪದಲ್ಲಿ, ಸೂರ್ಯಭಟ್ಟನೆಂಬ ಒಬ್ಬ ಬ್ರಾಹ್ಮಣನಿದ್ದನು. ಈತನಿಗೆ ಸುಮತಿಯೆಂಬ ಒಬ್ಬನೇ ಒಬ್ಬ ಮಗನಿದ್ದನು. ವ್ಯವಸಾಯದಿಂದ ಜೀವಿಸುತಿದ್ದ ಈ ಬ್ರಾಹ್ಮಣನ ಮಗನು ಹೊಲಗಳಲ್ಲಿಯೂ ತೋಟಗಳಲ್ಲಿಯೂ ಓಡಿಯಾಡುತ್ತಿದ್ದನು. ಈ ಸುಮತಿಯು ಹೊಲ ಉಳುತಿರುವಾಗ ಆಳುಗಳ ಸಂಗಡಲೇ ಹೋಗುವುದೂ, ಬರುವುದೂ, ಕುರಿಯನ್ನೂ ದನವನ್ನೂ ಹೊಲಕ್ಕೆ ಹೊಡೆದುಕೊಂಡು ಹೋಗುವುದೂ, ಹೀಗೆ ಮಾಡುತ್ತಿದ್ದದೂ ಅಲ್ಲದೆ, ಚಟುವಟಿಕೆಯುಳ್ಳವನಾಗಿಯೂ ಬಲಶಾಲಿಯಾಗಿಯೂ ಗಟ್ಟಿರಾಸಾಗಿಯೂ, ತೇಜಸ್ವಿಯಾಗಿಯೂ ಇದ್ದನು. ಇವನು ಮದನಕುಮಾರನಷ್ಟು ಕೆಂಪಾಗಿಯೂ ಇರಲಿಲ್ಲ; ಅವನ ಹಾಗೆ ಅತಿ ನಾಜೂಕಾದ ಅಂಗಗಳುಳ್ಳವನಾಗಿಯೂ ಇರಲಿಲ್ಲ. ಆದರೆ ಪ್ರಾಮಾಣಿಕತೆಯೂ ನಿಷ್ಕಾಪಟ್ಯವೂ ಅವನ ಮುಖದಲ್ಲಿ ಚೆನ್ನಾಗಿ ತೋರುತಿದ್ದವು. ಇದರಿಂದ ಅವನನ್ನು ನೋಡಿದವರೆಲ್ಲರೂ ಅವನ ಮೇಲೆ

ಏನೋ ಒಂದು ಅಭಿಮಾನವನ್ನು ಇಟ್ಟುಕೊಂಡಿದ್ದರು. ಇವನಿಗೆ ಯಾವಾಗಲೂ ಕೋಪ ಬರುತಿರಲಿಲ್ಲ. ಇವನು ಇತರರಿಗೆ ಉಪಕಾರ ಮಾಡುವುದರಲ್ಲಿ ಅತ್ಯಂತವಾಗಿ ಸಂತೋಷಪಡುತ್ತಿದ್ದನು. ಮಗು ವಾದ ಈ ಸುಮತಿಯು ಊಟ ಮಾಡುತ್ತಿರುವಾಗ ಯಾರಾದರೂ ಗೋಪಾಳದವರು "ಕವಳ" ಎಂದು ಕೂಗಿದರೆ, ತನ್ನ ಎಲೆಯಲ್ಲಿ ಬಡಿಸಿದ್ದ ಆಹಾರದಲ್ಲಿ ಅರ್ಧವನ್ನು ಅವರಿಗೆ ಹಾಕಿಬಿಡುತ್ತಿದ್ದನು. ಒಂದೊಂದುಸಾರಿ ಬಡಿಸಿದ್ದನ್ನೆಲ್ಲಾ ಅವರಿಗೆ ಹಾಕಿಬಿಡುತ್ತಿದ್ದನು. ನೊಣಗಳನ್ನಾಗಲಿ, ಇರುವೆಗಳನ್ನಾಗಲಿ, ಇತರ ಹುಳುಗಳನ್ನಾಗಲಿ ಚಿಕ್ಕ ಹುಡುಗರು ಹಿಡಿದು ಹಿಂಸಿಸಿ ಕೊಲ್ಲುತ್ತಿದ್ದಹಾಗೆ ಇವನು ಹಿಂಸಿಸಿ ಕೊಲ್ಲುತ್ತಿರಲಿಲ್ಲ. ಆ ಬಡ ಜಂತುಗಳಿಗೂ ನಮ್ಮ ಹಾಗೆಯೇ ಯಾತನೆಯಾಗುವುದು, ಆದರೆ ಹೇಳಿಕೊಳ್ಳುವುದಕ್ಕೆ ಬಾಯಿ ಮಾತ್ರ ಇಲ್ಲವೆಂದು ಸುಮತಿಯು ಚೆನ್ನಾಗಿ ತಿಳಿದುಕೊಂಡಿದ್ದನು. ಯಾವಾ ಗಲೋ ಒಂದುಸಾರಿ ಮಾತ್ರ ಇವನು ಒಂದು ಮಿಡತೆಯನ್ನು ಹಿಡಿದು ಅದರ ಕಾಲಿಗೆ ಸಣ್ಣ ದಾರವನ್ನು ಕಟ್ಟಿ ಗಿರ್ರೆಂದು ತಿರುಗಿಸುತ್ತಿದ್ದನು. ಆದರೆ ಇದು ತಿಳಿವಳಿಕೆ ಸಾಲದ ದೋಷವೇ ಹೊರತು ಮತ್ತೇನೂ ಅಲ್ಲ. ಕೂಡಲೇ ಇವನ ತಂದೆಯು ಬಂದು, "ಅಪ್ಪಾ, ಆ ಪ್ರಾಣಿ ಯನ್ನು ಯಾಕೆ ಹಿಂಸಿಸುತ್ತೀಯೆ? ಚೂರಿ ತೆಗೆದುಕೊಂಡು ನಾವು ಕೈ ಕುಯಿದುಕೊಂಡಾಗ ನಮಗೆ ಎಂಥಾ ಯಾತನೆಯಾಗುವುದೋ ಅದಕ್ಕೆ ಈಗ ಅಂಥಾ ಯಾತನೆಯಾಗುತಿದೆ" ಎಂದು ಹೇಳಲು, ಸುಮತಿಯು ತಂದೆಯ ಮುಖವನ್ನು ನೋಡಿ ಕಣ್ಣಿನಲ್ಲಿ ನೀರನ್ನು ತಂದುಕೊಂಡು ದಾರವನ್ನು ಬಿಚ್ಚಿ, ಆ ಮಿಡತೆಯನ್ನು ಮನೆಗೆ ತೆಗೆದುಕೊಂಡುಹೋಗಿ ಅದಕ್ಕೆ ಹಸುರು ಸೊಪ್ಪುಗಳನ್ನು ಕುಯಿದು ತಂದು ಹಾಕಿ ಹದಿನೈದು ದಿವಸ ಅದನ್ನು ತನ್ನಲ್ಲಿ ಇಟ್ಟುಕೊಂಡು ಉಪಚಾರ ಮಾಡಿದನು. ಅದು ಸ್ವತಂತ್ರವಾಗಿ ಹಾರಾಡಬಹುದೆಂದು ತಿಳಿದು ಹೊರಕ್ಕೆ ಬಿಟ್ಟು ಬಿಟ್ಟನು. ಆಗಿನಿಂದಲೂ ಸುಮತಿಯು ಹೊರಕ್ಕೆ ಹೊರಟರೆ ಪ್ರಾಣಿ ಮಾತ್ರಕ್ಕೆ ಎಲ್ಲಿಯಾದರೂ ನೋಯಿಸಿಯೇನಲ್ಲಾ ಎಂದು ಅತಿ ಜಾಗರೂ ಕತೆಯಿಂದ ಕಾಲನ್ನು ಇಡುತಾ ಹಕ್ಕಿಗಳಿಗೆ ಕಾಳನ್ನು ಹಾಕುತ್ತಾ

ದಾರಿತಪ್ಪಿ ಹೋಗುತಿದ್ದ ಹುಳುಗಳನ್ನು ಯಾರೂ ತುಳಿಯದ ಸ್ಥಳಕ್ಕೆ ತೆಗೆದುಕೊಂಡು ಹೋಗಿ ಮೆಲ್ಲಗೆ ಬಿಡುತಾ ಇದ್ದನು. ಹಸುವನ್ನು ಕಂಡಾಗ ಅದರ ಮೈಯನ್ನು ತಡವರಿಸುತಿದ್ದನು. ಕಂಡ ಕಡೆಯಲ್ಲಿ ಗರಿಕೇಹುಲ್ಲನ್ನು ಕಿತ್ತು ಕರುಗಳ ಬಾಯಿಗೆ ಕೊಡುತ್ತಿದ್ದನು. ಯಾವ ಹಸುರು ಸಿಕ್ಕಿದರೂ ಕಿತ್ತು ಮೇಕೆಗಳ ಮುಂದೆ ಹಾಕುತ್ತಿದ್ದನು. ಆದ್ದರಿಂದ ಎಳೆಗರುಗಳು ಇವ ಎಲ್ಲಿ ಹೋದರೂ ಹಿಂದೆಯೇ ಹೋಗುತಿದ್ದವು. ಎಂಥಾ ಅಸಹ್ಯವಾದ ಜಂತುವಾದರೂ ಅದನ್ನು ಬಾಧಿಸದೆ ನೋಡಿಕೊಳ್ಳುತ್ತಿದ್ದನು. ಜಾಡ, ಕಪ್ಪೆ, ಕಟ್ಟೆರುವೆ, ಕೆಂಜಗ ಮೊದಲಾದವುಗಳಿಗೆ ಕೂಡ ಇವನ ದಯಾರಸದ ಫಲ ಇಲ್ಲದೇ ಇರಲಿಲ್ಲ. "ನಾವು ಹೇಗೆ ಬಾಧೆ ಇಲ್ಲದೆ ಜೀವಿಸಿಕೊಂಡಿರಬೇಕೆಂದು ಇಷ್ಟಪಡುವೆವೊ ಹಾಗೆಯೇ ಎಲ್ಲಾ ಜಂತುಗಳೂ ಇಷ್ಟಪಡುವವು. ಅವುಗಳನ್ನು ಕಂಡರೆ ನಮಗೆ ಆಗದೇ ಹೋದ ಮಾತ್ರಕ್ಕೆ ಆ ಬಡ ಪ್ರಾಣಿಗಳನ್ನು ಕೊಲ್ಲುವುದು ಯಾವ ನ್ಯಾಯ?" ಎಂದು ಆಗಾಗ್ಗೆ ಹೇಳುತಿದ್ದನು.

ಇಂಥಾ ಅಭಿಪ್ರಾಯವನ್ನು ಇಟ್ಟುಕೊಂಡಿದ್ದನಾದ್ದರಿಂದ ಈ ಸುಮತಿಯು ಎಲ್ಲರಿಗೂ ಬೇಕಾದವನಾಗಿದ್ದನು. ಮುಖ್ಯವಾಗಿ ಆ ಪಟ್ಟಣದ ವೈದಿಕರೆಲ್ಲಾ ಇವನ ಮೇಲೆ ವಿಶೇಷವಾಗಿ ಅಭಿಮಾನವನ್ನು ಇಟ್ಟುಕೊಂಡಿದ್ದರು. ನೋಡುವುದಕ್ಕೆ ಪಟುವಾಗಿ ಒಳ್ಳೇ ಸ್ವಭಾವವುಳ್ಳವನಾಗಿದ್ದ ಈ ಹುಡುಗನಿಗೆ ಸ್ಥಳದ ಜೋಯಿಸನಾದ ರಾಮಜೋಯಿಸನು ಶ್ಲೋಕಗಳನ್ನು ಹೇಳಿಕೊಡುವುದು, ಬರೆಯುವುದಕ್ಕೆ ಹೇಳಿಕೊಡುವುದು, ಹೀಗೆಲ್ಲಾ ಮಾಡುತ್ತಿದ್ದನು. ಇಂಥಾ ಹುಡುಗನ ಮೇಲೆ ರಾಮಜೋಯಿಸನಿಗೆ ಅಭಿಮಾನವಿದ್ದದೇನೋ ಆಶ್ಚರ್ಯವಲ್ಲ. ಹೇಳಿಕೊಟ್ಟದ್ದನ್ನೆಲ್ಲಾ ಜಾಗ್ರತೆಯಾಗಿ ಕಲಿತುಕೊಳ್ಳುತ್ತಿದ್ದನಲ್ಲದೆ, ಈ ಬಾಲಕನು ಪ್ರಾಮಾಣಿಕನಾಗಿ, ಯಾವಾಗಲೂ ಉಪಕಾರಿಯಾಗಿಯೇ ಇರುತ್ತಿದ್ದನು. ಏನಾದರೂ ಕೆಲಸವನ್ನು ಅವನಿಗೆ ಹೇಳಿದರೆ ಸ್ವಲ್ಪವೂ ಅಸಮಾಧಾನಪಡದೆ, ಸ್ವಲ್ಪವೂ ಗೊಣಗದೆ ಮಾಡುತ್ತಿದ್ದನು. ಇದೂ ಅಲ್ಲದೆ ಸುಮತಿಯು ಹೇಳಿದ ಮಾತನ್ನೆಲ್ಲಾ ನಾವು ನಂಬಬಹುದಾಗಿತ್ತು. ಒಂದಾನೊಂದು ಸಂದರ್ಭದಲ್ಲಿ ಸುಳ್ಳು

ಹೇಳಿದರೆ ತನಗೆ ಒಂದು ಹಣ್ಣು ದೊರೆಯುವುದು, ದಿಟ ಹೇಳಿದರೆ ಬೆತ್ತದಿಂದ ಏಟು ಬೀಳುವುದು ಎಂದು ಅವನಿಗೆ ಖಂಡಿತವಾಗಿ ತಿಳಿದಿದ್ದಾಗ್ಯೂ, ದಿಟವನ್ನೇ ಹೇಳಿ ಸಾಧಿಸುತ್ತಿದ್ದನೇ ಹೊರತು, ಸ್ವಲ್ಪವೂ ಅನುಮಾನಪಡುತ್ತಿರಲಿಲ್ಲ. ಮಕ್ಕಳು ಮೂರು ಹೊತ್ತೂ ಏನನ್ನಾದರೂ ತಿನ್ನುತ್ತಲೇ ಇರುವವಷ್ಟೆ, ಇವ ಹಾಗಲ್ಲ. ಒಂದು ಚೂರು ದೋಸೆಯನ್ನು ಕೊಟ್ಟರೆ ಅವನಿಗೆ ಅಷ್ಟೆ ಸಾಕು; ಇನ್ನು ಯಾವ ತಿಂಡಿ ಎಷ್ಟು ಹಾಕಿದರೆ ಅಷ್ಟೇ ಸಾಕು, ಹೀಗಿತ್ತು.

ಮದನಕುಮಾರನಿಗೂ ಸುಮತಿಗೂ ಪರಿಚಯವಾಯಿತು. ಅದು ಹೇಗೆಂದರೆ, ಒಂದಾನೊಂದು ದಿನ ವಸಂತಋತುವಿನಲ್ಲಿ ಬೆಳಗಿನ ಹೊತ್ತು ಮದನಕುಮಾರನೂ ಅವನ ದಾದಿಯೂ ಪಟ್ಟಣದ ಹೊರಗಿರುವ ಒಂದಾನೊಂದು ಹೂವಿನ ತೋಟದಲ್ಲಿ ನಡೆದುಕೊಂಡು ಹೋಗುತಾ ಇರುವಾಗ ಅರಸು ಮಗನು ಅಲ್ಲಿ ಕಂಡಕಂಡ ಹೂವನ್ನೆಲ್ಲಾ ಕುಯಿದುಕೊಳ್ಳುತಾ, ಚಿಟ್ಟೆಗಳೂ ಪುಟ್ಟ ಪುಟ್ಟ ಹಕ್ಕಿಗಳೂ ಹಾರಾಡುತಿರಲು, ಅವುಗಳನ್ನು ಹಿಡಿಯಾಡುತಾ, ಅಲ್ಲಲ್ಲಿಯೇ ಬಳಸಿ ಬಳಸಿ ಬರುತಾ, ಹೀಗೆ ಓಡಾಡುತ್ತಿರುವಾಗ್ಗೆ, ಕೆಸರಾಗಿದ್ದ ಹುಲ್ಲ ಹಸಳೆಯಲ್ಲಿ ಒಂದು ನೀರಹಾವು ಸರಕ್ಕನೆ ಮೇಲಕ್ಕೆ ಎದ್ದು ಸುಕುಮಾರನ ಕಾಲಿಗೆ ಸುತ್ತಿಕೊಂಡಿತು. ಆ ಮಗುವಿಗೂ ಅವನ ಸಂಗಡ ಇದ್ದ ದಾದಿಗೂ ಉಂಟಾದ ಭಯವನ್ನು ಕೇಳಬೇಕೆ? "ಅಯ್ಯೋ ಇನ್ನೇನು ಗತಿ" ಎಂದು ಕೂಗಿಕೊಳ್ಳುತಾ ದಾದಿಯು ಓಡಿಹೋದಳು. ರಾಜಕುಮಾರನು ಮಹಾ ಭಯದಿಂದ ಗಡಗಡನೆ ನಡುಗುತ್ತಾ, ಹೆಜ್ಜೆಯನ್ನು ಎತ್ತಿ ಮೇಲಕ್ಕೆ ಇಡಲಾರದೆ ನಿಂತಕಡೆಯಲ್ಲಿಯೇ ನಿಂತುಕೊಂಡು ಅರಚಿಕೊಳ್ಳುತಿದ್ದನು. ಸಮೀಪವಾದ ಕಾಲುದಾರಿಯಲ್ಲಿ ಹೋಗುತಿದ್ದ ಸುಮತಿಯು ಇದನ್ನು ಕಂಡು ಓಡಿಬರುತ್ತಾ "ಅದೇನು ಅದೇನು?" ಎಂದು ಕೂಗಿ ಕೇಳಿದನು. ನೋಡಿದವರಿಗೆ ಮರುಕ ಹುಟ್ಟುವಂತೆ ಬಿಕ್ಕಳಿಸಿಕೊಂಡು ಅಳುತ್ತಿದ್ದ ಆ ಮದನಕುಮಾರನ ಬಾಯಲ್ಲಿ ಮಾತೇ ಹೊರಡದೆ, ಅವನು ಕಾಲನ್ನು ಕೊಡವುತಾ ಹಿಂದ ಹಿಂದಕ್ಕೆ ಹೋಗುತಾ ತನ್ನ ಕಾಲನ್ನು ಕೈಯಿಂದ ತೋರಿಸಿದನು.

ಇದನ್ನು ಕಂಡು ಸುಮತಿಯು ಆ ಹುಡುಗನಿಗೆ ಸಂಭವಿಸಿದ್ದ ಅಪಾಯ ವನ್ನು ತಿಳಿದುಕೊಂಡನು. ತಾನೂ ಚಿಕ್ಕ ಹುಡುಗನಾದಾಗ್ಯೂ ಸುಮ ತಿಯು ಧೈರ್ಯಶಾಲಿಯಾದ್ದರಿಂದ ಹೆದರಬೇಡವೆಂದು ಅವನಿಗೆ ಹೇಳಿ, ಕೂಡಲೇ ಬಂದು ಯುಕ್ತಿಯಿಂದಲೂ ಮನೋನಿಶ್ಚಯದಿಂದಲೂ ಆ ಹಾವನ್ನು ಕತ್ತಿನ ಹತ್ತಿರ ಹಿಡಿದುಕೊಂಡು ಬಲವಾಗಿ ಈಚೆಗೆ ಎಳೆದು, ಅದನ್ನು ಗರ್ರನೆ ತಿರುಗಿಸಿ ದೂರವಾಗಿ ಎಸೆದನು.

---

## ೨ ನೆ ಅಧ್ಯಾಯ

ಇದು ಹೀಗಿರಲಾಗಿ, ಅತ್ತ ಮದನ ಕುಮಾರನ ತಾಯಿಯೂ ಅವಳ ಮನೆಯುವರೆಲ್ಲರೂ ಸೇರಿ, ದಾದಿಯ ಕೂಗಿನಿಂದ ಗಾಬರಿಪಟ್ಟು ತಮ್ಮ ಮುದ್ದಿನ ಕಂದ ಇದ್ದ ಸ್ಥಳಕ್ಕೆ ಓಡಿಬಂದರು. ಆಗ ಮದನ ಕುಮಾರನು ಚೇತರಿಸಿಕೊಳ್ಳುತಾ ತನಗೆ ಉಪಕಾರವನ್ನು ಮಾಡಿದ ಹುಡುಗನನ್ನು ಹತ್ತಿರ ಕೂರಿಸಿಕೊಂಡು ಕೂತಿದ್ದನು. ಅವನ ತಾಯಿಯು ಓಡಿಬಂದು ತನ್ನ ಕಂದನನ್ನು ಎತ್ತಿಕೊಂಡು ಸಾವಿರಸಾರಿ ಮುದ್ದಾಡಿ, ತರುವಾಯ, ಏನಾದರೂ ಗಾಯವಾಯಿತೆ? ಎಂದು ಕೇಳಿ ದಳು. ಆ ಹುಡುಗನು-ಅಮ್ಮ, ಇಲ್ಲ, ಗಾಯವಾಗಲಿಲ್ಲ. ಅಷ್ಟರಲ್ಲಿಯೇ ಆ ಸಣ್ಣ ಹುಡುಗ ಬಂದು ಆ ಹಾಳಹಾವನ್ನು ಎಳೆದುಹಾಕಿಬಿಟ್ಟ, ಇಲ್ಲದಿದ್ದರೆ ಅದು ನನ್ನನ್ನು ಕಚ್ಚುತಿತ್ತು, ಎಂದನು. ಇಂಥಾ ಉಪ ಕಾರವನ್ನು ಮಾಡಿದವನು ನೀನು ಯಾರಪ್ಪಾ? ಎಂದು ಆಕೆ ಕೇಳಿ ದಳು. ನಾನು ಸುಮತಿ ಎಂದು ಅವನು ಹೇಳಿದನು. ಕೂಡಲೇ ಆಕೆ- ಮಗು, ನೀನು ಬಹು ಧೈರ್ಯಶಾಲಿ, ಬಾ ನಮ್ಮ ಮನೆಗೆ, ನಿನಗೆ ತಿನ್ನು ವುದಕ್ಕೆ ಕೊಡುತ್ತೇನೆ, ಎಂದಳು.

"ಈ ಮಾತಿನಿಂದಲೇ ತಾವು ನನಗೆ ತಿಂಡೀಕೊಟ್ಟ ಹಾಗಾಯಿತು; ಇಲ್ಲ, ನಾನು ಬರುವುದಿಲ್ಲ. ನಮ್ಮ ತಂದೆಗಳು ಕೂಗುತಾರೆ."

"ನಿಮ್ಮ ತಂದೆ ಯಾರಯ್ಯ, ಮಗುವೆ?"

" ಇಗೊ ಈ ಅಗ್ರಹಾರದಲ್ಲಿರುವ ಸೂರ್ಯಭಟ್ಟರು, ತಾಯಿ "

" ಅಪ್ಪ, ಇನ್ನುಮೇಲೆ ನೀನೂ ನನ್ನ ಮಗುವಿನಹಾಗೇ; ನನ್ನ ಮಗುವಿನ ಹಾಗೇ ನಮ್ಮಲ್ಲಿ ಇರುತೀಯಾ, ಏನಪ್ಪಾ ? "

" ತಾಯಿ, ತಮ್ಮ ದಯಬಂದರೆ ಹಾಗೇ ಆಗಬಹುದು ; ಆದರೆ ನಮ್ಮ ತಂದೆ, ನಮ್ಮ ತಾಯಿ ಸಹ ಹಾಗೆ ಇರುವುದಾದರೆ, ಆಗಬಹುದು."

ಅರಸಿಯು ಆ ಕ್ಷಣದಲ್ಲಿಯೇ ಆ ಬ್ರಾಹ್ಮಣನ ಮನೆಗೆ ಒಬ್ಬ ಆಳನ್ನು ಓಡಿಸಿ, ಸುಮತಿಯ ಕೈಹಿಡಿದು ತನ್ನ ಅರಮನೆಯೊಳಕ್ಕೆ ಕರೆದುಕೊಂಡು ಹೋದಳು ; ಅಲ್ಲಿ ಅನಂಗರಾಜನನ್ನು ಕಂಡು ತನ್ನ ಪುಟ್ಟುಸಾಮಿಗೆ ಬಂದಿದ್ದ ವಿಪತ್ತನ್ನೂ ಸುಮತಿಯ ಧೈರ್ಯವನ್ನೂ ಸವಿಸ್ತಾರವಾಗಿ ಹೇಳಿದಳು.

ತಂದೆಗೂ ಬಹು ಸಂತೋಷವಾಯಿತು. ಅರಸುಮಗನಿಗೆ ಬಂದಿದ್ದ ಗಂಡ ತಪ್ಪಿತಲ್ಲಾ ಎಂದು ಮನೆಯವರೆಲ್ಲಾ ಸಂತೋಷದಿಂದ ಬಹು ಸಡಗರಪಡುತಿದ್ದರು. ಮಗುವಿನ ಪೀಡಾಪರಿಹಾರಾರ್ಥವಾಗಿ ಮೃತ್ಯುಂಜಯ ಜಪವೂ ಹವನವೂ ತಕ್ಕ ದಾನಧರ್ಮಗಳೂ ಬ್ರಾಹ್ಮಣ ಸಂತರ್ಪಣೆಯೂ ನಡೆದವು. ಆ ಕಾಲದಲ್ಲಿ ಮಗುವಿಗೆ ಅಲಂಕಾರ ಮಾಡಿ ಬೇಕಾದ ಒಡವೆಯನ್ನು ಇಟ್ಟು ದಿವ್ಯವಾದ ವಸ್ತ್ರವನ್ನು ಹೊದಿಸಿ ಶೃಂಗರಿಸಿದರು. ಸುಮತಿಯನ್ನೂ ಉಪಚರಿಸಿ, ನೋಡುವುದಕ್ಕೆ ಮನೋಹರವಾದ ಪದಾರ್ಥಗಳನ್ನೆಲ್ಲಾ ಅವನ ಮುಂದೆ ತಂದಿಟ್ಟರು. ಸುನೇರಿ ಕೆಲಸದ ಚೌಕಟ್ಟು ಹಾಕಿರುವ ನಿಲುಗನ್ನಡಿಗಳೂ, ಚಿತ್ರವಿಚಿತ್ರವಾದ ತಸ್ಬೀರುಗಳೂ, ನಾಜೂಕಾದ ಕಂದೀಲುಗಳೂ, ಗಾಜಿನ ಸಾಮಾನುಗಳೂ, ರತ್ನಗಳನ್ನು ಕೆತ್ತಿದ ಚಿನ್ನ ಬೆಳ್ಳೀ ಪಾತ್ರೆಗಳೂ, ತಟ್ಟೆಗಳೂ ಇವೇ ಮುಂತಾಗಿ ನೋಡುವುದಕ್ಕೆ ಆಹ್ಲಾದಕರವಾದ ಪದಾರ್ಥಗಳೆಲ್ಲಾ ಈ ಬಡ ಬ್ರಾಹ್ಮಣರ ಗಂಡಿನ ಮುಂದೆ ಸಾಲುಸಾಲಾಗಿ ಓರಣಗೊಂಡವು. ಆ ದಿನ ರಾಣಿಯು ತನ್ನ ಸಮೀಪದಲ್ಲಿಯೇ ತನ್ನ ಮುದ್ದಿನ ಕಂದನನ್ನು ಊಟಕ್ಕೆ ಕೂರಿಸಿಕೊಂಡು ಮನೆಯಲ್ಲಿ ಮಾಡಿದ್ದ ರುಚಿಕರವಾದ ಅನೇಕ ಪದಾರ್ಥಗಳನ್ನು ಚಿನ್ನದ ತಟ್ಟೆ ಬಟ್ಟಲುಗಳಲ್ಲಿಟ್ಟು ಬೇಕಾದಹಾಗೆ ತಾನೇ ತೆಗೆದು

ಕಂದನಿಗೆ ಊಟಮಾಡಿಸುತ್ತಾ, ಅತ್ಯಂತ ವಾತ್ಸಲ್ಯದಿಂದ ಮುದ್ದಾಡುತಾ, ಅದು ಆಡುವ ತೊದಲು ಮಾತುಗಳನ್ನು ಅದರ ಸಂಗಡ ತಾನೂ ಅನುಸರಿಸಿ ಆಡುತಾ, ಎಷ್ಟೆಷ್ಟೋ ಬಗೆಯಲ್ಲಿ ಲಾಲನೆ ಮಾಡಿದ್ದಲ್ಲದೆ, ಸುಮತಿಯನ್ನೂ ತನ್ನ ಹತ್ತಿರದಲ್ಲೇ ಎಡೆ ಮಾಡಿ ಕೂರಿಸಿಕೊಂಡು ಬೇಕಾದ ಹಣ್ಣು ಹಂಪಲನ್ನೂ ಹಾಲುಖೋವೆ ಮೊದಲಾದ್ದನ್ನೂ ವಿಚಿತ್ರವಾದ ಮಿಠಾಯಿಗಳನ್ನೂ ಅವನಿಗೆ ಕೊಡುತ ಬಂದಳು. ಆದರೆ ಅಲ್ಲಿದ್ದ ಪದಾರ್ಥಗಳೆಲ್ಲಾ ಸುಮತಿಗೆ ಸಾಧಾರಣವಾಗಿಯೇ ಕಾಣಿಸಿದವು. ಯಾತರಿಂದಲೂ ಸಂತೋಷ ಹುಟ್ಟಲಿಲ್ಲ. ಅರಸಿತ್ತಿಗೆ ಇದರಿಂದ ಅಸಮಾಧಾನವಾಯಿತು. ಆ ಅಸಮಾಧಾನವನ್ನು ಮರೆಮಾಚುವುದಕ್ಕೆ ಆಗಲಿಲ್ಲ. ತಾನು ಎಷ್ಟು ಒಡವೆಗಳನ್ನು ಹೇರಿಕೊಂಡರೆ ಎಂಥಾ ಸೀರೆಯನ್ನುಟ್ಟು ಇನ್ನೆಂಥಾ ಕುಪ್ಪುಸವನ್ನು ತೊಟ್ಟುಕೊಂಡರೆ ತನಗೆ ಹೇಗೆ ತೃಪ್ತಿಯೋ ಹಾಗೆಯೇ ಎಲ್ಲರಿಗೂ ಆಗುವುದೆಂದು ಆ ಪ್ರಾಣಿಯು ತಿಳಿದುಕೊಂಡಿದ್ದಳು. ತನ್ನ ಮಗನು ತೀನೆ ಹಾಕಿಕೊಂಡು ತಿನ್ನುತಿದ್ದ ಬೆಳ್ಳೀ ಬಟ್ಟಲನ್ನು ಸುಮತಿಯು ದೃಷ್ಟಿಸಿ ನೋಡಲು, ಅರಸಿತ್ತಿಯು ಕಂಡು “ ಬಟ್ಟಲು ಎಷ್ಟು ಚೆನ್ನಾಗಿದೆ, ನೋಡು, ಇದು ನಿನಗೆ ಬೇಕೆ ತೀನಿ ಹಾಕಿಕೊಂಡು ತಿನ್ನುವುದಕ್ಕೆ ? ” ಎನ್ನುತ್ತಾ, “ ಇದು ನಮ್ಮ ಪುಟ್ಟುಸಾಮಿಾ ಬಟ್ಟಲು, ನಿನಗೆ ಬೇಕಾದರೆ ಕೊಡುತಾನೆ ” ಎಂದು ಹೇಳಿದಳು. ಆಗ ಮದನಕುಮಾರನು ಈ ಮಾತನ್ನು ಕೇಳಿ,—‘ ಅಮ್ಮ, ಹಾಗೇ ಆಗಲಿ; ಈ ಬಟ್ಟಲನ್ನು ನಾನು ಆ ಹುಡುಗನಿಗೆ ಕೊಡುತೇನೆ. ನನಗೆ ಇದಕ್ಕಿಂತಲೂ ಚೆನ್ನಾಗಿರತಕ್ಕ ಚಿನ್ನದ ಬಟ್ಟಲಿದೆ; ಇದಲ್ಲದೆ ಇನ್ನೂ ಎರಡು ದೊಡ್ಡ ಬೆಳ್ಳೀ ಬಟ್ಟಲುಗಳಿವೆ; ಹವುದೋ ಅಲ್ಲವೊ ಅಮ್ಮ ? ’ ಎಂದನು. ಕೂಡಲೆ ಸುಮತಿಯು—ಬಹಳವಾಗಿ ಸಂತೋಷವಾಯಿತ್ತೈ; ನಿನ್ನ ಬಟ್ಟಲು ನಿನ್ನಲ್ಲಿಯೇ ಇರಲಿ; ನಾನು ನಿನ್ನಿಂದ ಅದನ್ನು ಕಿತ್ತುಕೊಳ್ಳಲಾರೆ; ನಮ್ಮ ಮನೆಯಲ್ಲಿ ಇದೆಲ್ಲಕ್ಕಿಂತಲೂ ಉತ್ತಮವಾದ ಬಟ್ಟಲಿದೆ, ಎಂದನು.

ಆಗ ಅರಸಿಯು—ಏನು, ನಿಮ್ಮ ತಂದೆ ಬೆಳ್ಳೀ ಬಟ್ಟಲಲ್ಲಿ ಪದಾರ್ಥವನ್ನು ಇಟ್ಟುಕೊಳ್ಳುತಾನೆಯೋ ?

"ತಾಯಿ, ಇದಕ್ಕೆ ನೀವೇನು ಹೆಸರಿಟ್ಟಿದೀರೋ ನಾನು ಕಾಣೆ; ಆದರೆ ನಮ್ಮ ಮನೆಯಲ್ಲಿ ನಾವು ಹುಡುಗರು ತಿಂಡಿ ಹಾಕಿಕೊಂಡು ತಿನ್ನ ತಕ್ಕದ್ದು ಬಳಪದ್ದು; ಹುಡುಗರು ಹಲಗೇಮೇಲೆ ಬರೆಯುತಾರಲ್ಲಾ, ಅಂಥಾದ್ದರಲ್ಲಿ ಮಾಡಿದ್ದು."

ಹೀಗೆಂದು ಹೇಳಿದ ಸುಮತಿಯ ಮಾತನ್ನು ಕೇಳಿ, ರಾಜ ಪತ್ನಿಯು "ಪಾಪ! ಮಗು ಏನೂ ಅರಿತದ್ದಲ್ಲ. ಅದು ಸರಿಯಪ್ಪ, ಇವೆಲ್ಲಕ್ಕಿಂತಲೂ ನಿಮ್ಮ ಮನೆಯಲ್ಲಿರುವ ಬಟ್ಟಲು ಹೇಗೆ ಉತ್ತಮವಾದ್ದು?"

ಸುಮತಿ—ತಾಯಿ, ಹೇಗೆಂದರೆ, ಅದರಲ್ಲಿ ಯಾವ ತಿಂಡೀ ಸಾಮಾನನ್ನು ಎಷ್ಟು ಹೊತ್ತು ಹಾಕಿಕೊಂಡು ತಿಂದರೂ, ನಮಗೆ ಅಸಹ್ಯವಾಗಿ ವಾಂತಿ ಬರುವ ಹಾಗೆ ಆಗುವುದಿಲ್ಲ.

ಅರಸಿ—ಅಸಹ್ಯವಾಗುವುದು, ವಾಂತಿಯಾಗುವುದು ಎಂದರೇನಪ್ಪ, ಹಸುಳೆ? ಹಾಗೆಂದರೇನು?

ಸುಮತಿ—ನೋಡಿ ತಾಯಿ, ಅಕೋ ಆ ಆಳು ಒಂದು ಬಟ್ಟಲನ್ನು ಕೈ ಮರೆತು ಅಲ್ಲಿ ಬಿಟ್ಟುಹೋದ್ದಕ್ಕೆ ತಮಗೆ ಎಷ್ಟೋ ಸಂಕಟ ಉಂಟಾಯಿತು. ಯೋಚನೆಯಿಂದ ಜ್ಞಾನತಪ್ಪಿ ಎಲ್ಲಿ ಬಿದ್ದುಬಿಡುತೀರೋ ಎಂದು ನನಗೆ ಭಯವಾಯಿತು. ನಮ್ಮ ಮನೆಯಲ್ಲಿರುವ ಬಟ್ಟಲು ಎಲ್ಲಿದ್ದರೂ ಏನೂ ತೊಂದರೆ ಇಲ್ಲ. ಬೇಕಾದ ಕಡೆ ಬಿಸಾಟಿರುತ್ತೇವೆ. ಕೇಳುವರೇ ಇಲ್ಲ. ಒಬ್ಬರೂ ಲಕ್ಷ್ಯವೇ ಮಾಡುವುದಿಲ್ಲ.

ಅರಸಿ—ಈ ಗಂಡಿನ ಮಾತಿಗೆ ಏನ ಹೇಳಬೇಕೋ ನಿಜವಾಗಿ ನನಗೆ ತೋರುವುದಿಲ್ಲ; ಏನೇನೋ ಆಡುತ್ತೆ.

ಹೀಗೆ ಇರುವಲ್ಲಿ ಕೆಲವರು ಊಟಮಾಡುತಾ, ಕೆಲವರು ಫಲಾಹಾರ ಮಾಡುತಾ ಕೂತಿರಲು, ಆಗತಾನೆ ಒಬ್ಬ ಪರಿಚಾರಕನು ಊಟದ ತಟ್ಟೆ ಬಟ್ಟಲುಗಳನ್ನು ಎತ್ತಿಕೊಂಡು ಅತ್ತಿತ್ತ ಇರಿಸುವಾಗ್ಗೆ, ಒಂದು ಬಟ್ಟಲು ಕೆಳಕ್ಕೆ ಬಿತ್ತು. ಅದನ್ನು ನೋಡಿ ಅರಸಿಯು ಬಹು ಕೋಪಗೊಂಡು ಪರಿಚಾರಕನನ್ನು ಗದರಿಸಿದಳು. ಇದನ್ನು ಕಂಡೇ ಸುಮತಿಯು ಬಟ್ಟಲ ನೆವದಲ್ಲಿ ಮಾಕರಿಸಿ ಮಾತನಾಡಿದ್ದು.

ಊಟ ತಿಂಡಿ ಮುಂತಾದ್ದೆಲ್ಲಾ ಆದಕೂಡಲೆ, ಇತರ ಜಾತಿಯ ವರ ಮನೆಯಲ್ಲಿ ನೀರ ಕುಡಿಯದ ಬ್ರಾಹ್ಮಣರ ಹುಡುಗನಾದ ಸುಮತಿಗೆ ಕಾಸಿದ ಹಾಲನ್ನು ತರಿಸಿ ಅದಕ್ಕೆ ಸಕ್ಕರೆಯನ್ನು ಹಾಕಿ ಅದನ್ನು ಅರಸಿಯು ಕುಡಿಯಪ್ಪಾ ಎಂದು ಸುಮತಿಯ ಕೈಗೆ ಕೊಡಹೋದಳು.

ಸುಮತಿ—ತಾಯಿ ನಾನು ಒಲ್ಲೆ ; ನನಗೆ ಬಾಯಾರುವುದಿಲ್ಲ.

ಅರಸಿ—ಮಗು, ಅಚ್ಚ ಹಸುವಿನ ಹಾಲು, ನೀರು ಬೆರದಿಲ್ಲ ; ಕೊಡೆಯಾಲದ ಕಲ್ಲುಸಕ್ಕರೆಯನ್ನು ಹುಡಿಮಾಡಿ ಹಾಕಿಸಿದೆ ; ಯಾಲಕ್ಕಿಯೂ ಕೇಸರಿಯೂ ಬಿದ್ದಿದೆ, ಬಹು ರುಚಿಯಾಗಿರುವುದು, ಕುಡಿ— ಎಂದಳು.

ಸುಮತಿ—ಆಗಬಹುದು ತಾಯಿ, ಆದರೆ ನಮ್ಮ ಜೋಯಿಸರು, ಹಸಿವು ಆದಾಗ ಅನ್ನಾ ತಿನ್ನಬೇಕು, ಬಾಯಾರಿದಾಗ ನೀರ ಕುಡಿಯಬೇಕು ಎಂದು ಹೇಳಿಕೊಟ್ಟಿದಾರೆ. ಇದಲ್ಲದೆ ನಮಗೆ ಸುಲಭವಾಗಿ ಸಿಕ್ಕುವುದನ್ನೇ ತಿನ್ನಬೇಕು ಕುಡಿಯಬೇಕು, ಎಂದೂ ಹೇಳಿದಾರೆ. ಹಾಗಲ್ಲದಿದ್ದರೆ, ಅಂಥಾ ಒಳ್ಳೇ ಪದಾರ್ಥ ನಮಗೆ ಸಿಕ್ಕದೇ ಹೋದಾಗ ನಮ್ಮ ಮನಸ್ಸಿಗೆ ಏನೋ ಕಿರಿಕಿರಿಯಾಗಿ ಪೇಚಾಡಬೇಕಾಗುವುದಂತೆ. ಹಿಂದಕ್ಕೆ ಋಷಿಗಳೆಲ್ಲಾ ಮಾಡುತಿದ್ದದೂ ಹೀಗೇಯೇ ; ಅವರೆಲ್ಲಾ ಬಹು ಸತ್ಯವಂತರು, ಒಳ್ಳೆಯವರು.

ಈ ಮಾತಿಗೆ ಅರಸು ನಕ್ಕು—ಏನೆಲಾ ಹುಡುಗ, ಋಷಿಗಳು ಯಾರು, ನೀನು ಬಲ್ಲೆಯೋ ? ಎಂದನು.

" ಬುದ್ಧಿ, ಬಲ್ಲೆ. "

" ಅವರು ಯಾರು ? "

" ಸ್ವಾಮಿ, ಅರಿಕೆಮಾಡುತೇನೆ. ಒಂದಾನೊಂದು ಕಾಲದಲ್ಲಿ ಜನರೆಲ್ಲಾ ಬಹಳ ಕೆಟ್ಟವರಾಗಿದ್ದರು ; ಮನಸ್ಸಿಗೆ ಬಂದ ಕೆಲಸವನ್ನೆಲ್ಲಾ ಮಾಡುತಿದ್ದರು. ದೊಡ್ಡವರು ಅಹಂಕಾರಪಡುತಿದ್ದರು ; ತಿನ್ನುವುದು, ಮಲಗುವುದು, ಆನಂದವಾಗಿರುವುದು, ಇಷ್ಟು ಹೊರತು ಇನ್ನು ಯಾವ ಕೆಲಸಕ್ಕೂ ಹೋಗುತ್ತಿರಲಿಲ್ಲ. ಬಡವರನ್ನು ಕಂಡರೆ ಲಕ್ಷ್ಯವೇ ಇಲ್ಲ. ಹಸಿದು ಸಾಯುತಿರುವ ಗೋಪಾಳದವರಿಗೆ ಅವರ

ಕ್ಷುತ್ತು ಪರಿಹಾರವಾಗಲೆಂದು ಒಂದು ತುತ್ತು ಅನ್ನವನ್ನೂ ಕೊಡುತಿರ ಲಿಲ್ಲ. ಬಡವರಾದರೊ ಯಾವ ಕೆಲಸವೂ ಮಾಡದೆ ಕೂತಕಡೆ ಬಿಟ್ಟು ಏಳದೆ ಎರಡು ಮಂಡೀ ಸಂದಿಯಲ್ಲಿ ತಲೆಯನ್ನು ಸಿಕ್ಕಿಸಿಕೊಂಡು, ಮುಖ ಅಡಿಯಾಗಿ ತೂಕಡಿಸುತಿದ್ದರು. ಕೆಲಸ ಮಾಡುವುದಕ್ಕಿಂತಲೂ ಯಾವ ಕೆಲಸವೂ ಇಲ್ಲದೆ ಸುಮ್ಮನೇ ಜಡರಾಗಿರುವುದೇ ಮೇಲೆಂದು ಎಣಿಸಿ ಕೊಂಡಿದ್ದರು. ಸಣ್ಣ ಹುಡುಗರು ತಂದೆತಾಯಿಗಳ ಮಾತನ್ನು ಕೇಳುತ್ತಿರಲಿಲ್ಲ. ತಂದೆತಾಯಿಗಳು ಮಕ್ಕಳಿಗೆ ಒಳ್ಳೇ ಬುದ್ಧಿಯನ್ನು ಕಲಿಸುತಿರಲಿಲ್ಲ. ಹೀಗೆ ಲೋಕವೆಲ್ಲಾ ಬಹುವಾಗಿ ಕೆಟ್ಟು ಹೋಗಿತ್ತು. ಅನೇಕರು ರಾಕ್ಷಸ ಕೃತ್ಯವನ್ನು ಮಾಡುತಾ ಮಹಾಪಾತಕಗಳನ್ನು ಮಾಡುವುದರಲ್ಲಿ ನಾನು ತಾನೆಂದು ಮೇಲಾಡುತಿದ್ದರು. ಸಜ್ಜನರು ಬಾಳುವುದಕ್ಕೆ ಮಾರ್ಗವೇ ಇರಲಿಲ್ಲ. ಆಗ ಪ್ರಪಂಚವನ್ನು ಉದ್ಧಾರ ಮಾಡುವುದಕ್ಕಾಗಿ ದೇವರು ಈ ಭೂಲೋಕದಲ್ಲಿ ಅವತಾರ ಮಾಡಿ ಧರ್ಮಸಂಸ್ಥಾಪನೆಯನ್ನು ಮಾಡಿದನು. ಹೀಗೆ ಅನೇಕಸಾರಿ ನಡೆದಿದೆ. ಹೀಗೆ ದೇವರು ಸ್ಥಾಪನೆಮಾಡಿದ ಧರ್ಮವನ್ನು ಕಾಪಾ ಡುತ ಜನರಿಗೆಲ್ಲಾ ಅದನ್ನು ಬೋಧಿಸುತಾ ತಪಸ್ಸು ಮಾಡಿಕೊಂಡಿದ್ದ ವರೇ ಋಷಿಗಳು. ಇಂಥಾ ಉತ್ತಮವಾದ ಪದಾರ್ಥವನ್ನೇ ತಾವು ತಿನ್ನಬೇಕು, ಅಂಥಾ ಒಳ್ಳೇ ಬಟ್ಟೆಯನ್ನೇ ಹೊದೆಯಬೇಕು, ಎಂದು ಅವರಿಗೆ ಆಶೆ ಇರಲಿಲ್ಲ. ಒಣಕಲ ಎಲೆಯಾದರೂ ಸರಿಯೆ, ಕೊನೆಗೆ ಗಾಳಿಯಾದರೂ ಸರಿಯೆ, ಆಹಾರಮಾಡಿ ಹೊಟ್ಟೆ ತುಂಬಿಕೊಳ್ಳುತಿ ದ್ದರು. ಕೃಷ್ಣಾಜಿನ, ವ್ಯಾಘ್ರಾಜಿನ, ನಾರುಬಟ್ಟೆಗಳು ಇವುಗಳನ್ನು ಉಟ್ಟು ಹೊದ್ದು ಕಾಲವನ್ನು ಕಳೆಯುತಿದ್ದರು. ಅವರಿಗೆ ಹಣ ಕಾಸನ್ನು ಕೊಟ್ಟರೆ ದೀನರಾದವರಿಗೆ ಕೊಡಿರೆಂದು ಹೇಳಿ ಧಿಃಕರಿಸಿ ಹೊರಟು ಹೋಗುತಿದ್ದರು. ಈ ರೀತಿಯಲ್ಲಿ ಅವರು ಲೋಕಕ್ಕೆ ಎಷ್ಟೋ ಉಪಕಾರವನ್ನು ಮಾಡಿದರು. ಆದ್ದರಿಂದ ನಮಗೆ ದೇವರು ಏನು ಕೊಟ್ಟಿದಾನೋ ಅದರಲ್ಲಿ ನಾವು ತೃಪ್ತರಾಗಬೇಕು. ಮೃಗಪಕ್ಷಿ ಗಳು ತಮಗೆ ಸಿಕ್ಕುವ ಹುಲ್ಲನ್ನೂ ಕಾಳನ್ನೂ ತಿಂದು, ನೀರು ಹೊರತು ಇನ್ನೇನನ್ನೂ ಕುಡಿಯದೆ ಇರುವದಿಲ್ಲವೆ? ಆದರೂ ಅವುಗಳಿಗೆ ಶಕ್ತಿ ಏನಾದರೂ ಕಡಿಮೆಯಾಗಿದೆಯೆ?"

ಆಗ ಅನಂಗರಾಜನು-ಈ ಹುಡುಗನ ಪ್ರಜ್ಞೆ ಅತ್ಯದ್ಭುತವಾದ್ದು; ಇವನು ಮಹಾಪಂಡಿತನಾಗಿ ತೋರುತಾನೆ. ಇವನನ್ನು ಇಷ್ಟರ ಮಟ್ಟಿಗೆ ತಯಾರು ಮಾಡಿಟ್ಟ ರಾಮಜೋಯಿಸರು ಸಾಕ್ಷಾತ್ ವೇದ ಮೂರ್ತಿಯೇ ಸರಿ; ಅವರು ನಮ್ಮ ಪುಟ್ಟಸಾಮಿಯನ್ನೂ ಹೀಗೇ ನೋಡಿಕೊಂಡು ವಿದ್ಯಾಬುದ್ಧಿಯನ್ನು ಕಲಿಸಿದರೆ ಅವರಿಗೆ ನಾನು ಎಷ್ಟೋ ಕೃತಜ್ಞನಾಗಿದ್ದೇನು. ನಮ್ಮ ಮಗುವೇನು ಸಾಧಾರಣನಲ್ಲ, ತುಂಬಾ ಪ್ರಬಲಕ್ಕೆ ಬರತಕ್ಕವನು. ಅಕ್ಷರಾಭ್ಯಾಸ ಮಾಡುವುದಕ್ಕೆ ಸಕಾಲವಾಗಿದೆ—ಎಂದುಕೊಂಡು, ತನ್ನ ಮಗ ಮದನಕುಮಾರನನ್ನು ಕುರಿತು—ಅಯ್ಯ ಮದನು, ನೀನೂ ಶಾಸ್ತ್ರಜ್ಞನಾಗಬೇಕೋ? ಎಂದನು.

ಅಪ್ಪಾಜಿ, ಶಾಸ್ತ್ರಜ್ಞ ಎಂದರೇನೋ ನಾನರಿಯೆ. ಆದರೆ ನಾನು ದೊರೆಯಾಗಿರಬೇಕು; ಯಾಕೆಂದರೆ ದೊರೆಯು ಇತರರಿಗಿಂತಲೂ ನೋಡುವುದಕ್ಕೆ ಸೊಗಸಾಗಿಯೂ ಐಶ್ವರ್ಯವಂತನಾಗಿಯೂ ಇರುತಾನೆ; ಇದಲ್ಲದೆ ಅವನಿಗೆ ಕೆಲಸವೇನೂ ಇರುವುದಿಲ್ಲ; ಮತ್ತೆ ಎಲ್ಲರೂ ಅವನನ್ನು ಕಂಡರೆ ಕೈಕಟ್ಟಿಕೊಂಡು ಅತಿ ವಿನಯದಿಂದಲೂ ಮರ್ಯಾದೆಯಿಂದಲೂ ನಿಂತುಕೊಳ್ಳುವರು, ಎಲ್ಲರೂ ಅವನಿಗೆ ಭಯಪಡುವರು.

ಈ ಮಾತನ್ನು ಕೇಳಿದ ಕೂಡಲೆ ಅರಸಿಯು ಮೇಲಕ್ಕೆ ಎದ್ದು ಸಂತೋಷದಿಂದೊಡಗೂಡಿ,—ಮಗು, ಒಳ್ಳೇ ಮಾತನಾಡಿದೆ, ಇಂಥಾ ಯೋಗ್ಯತೆ ನಿನ್ನಲ್ಲಿರುವುದರಿಂದ ನೀನು ರಾಜಪದವಿಗೆ ತಕ್ಕವನೇ ಸರಿ; ಇಂಥಾ ಮುದ್ದುಗಾರ ಮಾತನಾಡಿದ್ದಕ್ಕೋಸ್ಕರ, ಈ ಹಣ್ಣನ್ನು ಹಿಡಿ, ಈ ಉಂಗುರವನ್ನು ಇಟ್ಟುಕೊ, ಎಂದು ಮಗನನ್ನು ಎತ್ತಿಕೊಂಡು ಮುದ್ದಾಡುತಾ, ಸುಮತಿಯನ್ನು ನೋಡಿ—ಏನೈ, ಮಗು, ನೀನು ದೊರೆಯಾಗಬೇಕೆಂದು ನಿನ್ನ ಮನಸ್ಸಿನಲ್ಲಿದೆಯೋ ಇಲ್ಲವೊ?

ಸುಮತಿ—ತಾಯಿ ಹಾಗೆಂದರೇನೋ ನಾನರಿಯೆ. ನನಗೆ ಈಗ ವಯಸ್ಸು ಬಂದು ನಾನು ದೊಡ್ಡವನಾದರೆ ಸಾಕು; ಯಾವುದಾದರೂ ಒಂದು ಉದ್ಯೋಗವನ್ನು ಕಲಿತುಕೊಂಡು ಜೀವನಮಾಡಿಕೊಳ್ಳುತೇನೆ. ನನಗೋಸ್ಕರ ಯಾವ ಆಳೂ ಬೇಡ, ಯಾರೂ ಸೊಂಟಾ ಸುತ್ತಿಕೊಂಡು ಇರಬೇಕಾದ್ದೂ ಇಲ್ಲ.

ಈ ಮಾತು ಕಿವಿಗೆ ಬೀಳಲು, ದೊರೇ ಹೆಂಡತಿಯು ಗಂಡನನ್ನು ಕುರಿತು, ಸುಮತಿಯನ್ನು ಅತಿ ನಿಕೃಷ್ಟವಾಗಿ ನೋಡುತಾ,—ದೊಡ್ಡವರ ಮಕ್ಕಳಿಗೂ ಬಡವರ ಮಕ್ಕಳಿಗೂ ಎಷ್ಟು ತಾರತಮ್ಯವಿದೆ? ಎಂದಳು.

ಅನಂಗ—ಈ ಮಾತಿನಮಟ್ಟಿಗೆ ನಮ್ಮ ಮಗು ಶಾನೆ ಬುದ್ಧಿಶಾಲಿ ಎಂದು ನಾನು ಹೇಳಲಾರೆ. (ಸುಮತಿಯನ್ನು ಕುರಿತು) ನಿನಗೆ ಐಶ್ವರ್ಯ ಬರಬೇಕೆಂದು ಇಷ್ಟವಿಲ್ಲವೆ, ಮಗು?

ಸುಮತಿ—ಇಲ್ಲ, ಸ್ವಾಮಿ.

ಅರಸಿ—ಚೆನ್ನಾಗಿದೆ! ಪುಣ್ಯವಿದ್ದರೆ ಇಷ್ಟವಿರುತ್ತೆ. ನಿನಗೆ ಐಶ್ವರ್ಯ ಬೇಡವೆ?

ಸುಮತಿ—ಬೇಡ. ಯಾಕೆ ಎಂದರೆ, ತಾಯಿ, ನಾನು ಒಬ್ಬನೇ ಒಬ್ಬ ಐಶ್ವರ್ಯವಂತನನ್ನು ನೋಡಿದೇನೆ, ಆತನೇ ಆ ಚೇಬೀದಿಯಲ್ಲಿರುವ ದೊಡ್ಡಮನೇ ಯಜಮಾನರು; ಅವರ ಹೆಸರು ಪ್ರಧಾನಿ ಮಂಜೈಯ ಹೆಗ್ಗಡೆ. ಇವರು ಬೆಳೆದು ನಿಂತಿರುವ ಹೊಲದ ಮಧ್ಯೆ ಕುದುರೆಯನ್ನು ಓಡಿಸಿಕೊಂಡು ಹೋಗುವುದು. ಬಡರೈತರ ಬೇಲಿಗಳನ್ನೆಲ್ಲಾ ಕಡಿಯುವುದು, ಒಕ್ಕಲಮಕ್ಕಳ ಕೋಳಿಗಳನ್ನು ಕೊಲ್ಲುವುದು, ಕುರಿಯನ್ನು ಹೊತ್ತುಕೊಂಡು ಹೋಗುವುದು, ಅವರ ದನಕರುಗಳನ್ನು ತನ್ನ ಮನೆಗೆ ತೆಗೆದುಕೊಂಡು ಹೋಗಿ ಕಟ್ಟಿಕೊಳ್ಳುವುದು, ಅವರ ನಾಯಿಗಳನ್ನು ಕೊಲ್ಲಿಸುವುದು, ಅವರ ಎತ್ತು ಕುದುರೆಗಳ ಕಾಲು ಮುರಿಯುವುದು, ಅವರ ಭೂಮಿಯಲ್ಲಿ ಬೆಳೆದು ಒಕ್ಕಣೆಯಾಗಿರುವ ದವಸವನ್ನು ತಾನು ಹಾರುಹುಯಿಸಿಕೊಂಡು ಹೋಗುವುದು, ಸಿಕ್ಕಿದವರನ್ನೆಲ್ಲಾ ಬೈಯುವುಪು, ತಲೇ ಎತ್ತಿ ತಿರುಗಿದವರನ್ನು ಹಿಡಿಸಿ ಹೊಡಿಸುವುದು, ಎದುರಿಸಿದವರನ್ನು ಕೊಲ್ಲಿಸುವುದು; ಹೀಗೆಲ್ಲಾ ಮಾಡುತಾನೆ. ಇದಕ್ಕೆಲ್ಲಾ ಅವನ ಐಶ್ವರ್ಯಮದವೇ ಕಾರಣವೆಂದು ಹೇಳುತಾರೆ. ಯಾರಿಗೂ ಇವನನ್ನು ಕಂಡರೆ ಆಗದು; ಆದರೆ ಈ ಮಾತನ್ನು ಅವನ ಎದುರಿಗೆ ಆಡಲು ಯಾರಿಗೂ ಧೈರ್ಯವಿಲ್ಲ. ನನಗೆ ಏನು ಕೊಟ್ಟರೂ ಹೀಗೆ ಜನರ ದ್ವೇಷವನ್ನು ಕಟ್ಟಿಕೊಳ್ಳಲಾರೆ. ಅವನ ಸ್ಥಿತಿ ನನಗೆ ಬೇಡ.

ಅರಸಿ—ತೊಟ್ಟುಕೊಳ್ಳುವುದಕ್ಕೆ ಕಿಂಕಾಬಿನ ಅಂಗಿ, ತಿರುಗಾಡು ವುದಕ್ಕೆ ಗಾಡಿ, ಯಾವ ಕೆಲಸಕ್ಕೂ ಕಾದು ಬಿದ್ದಿರುವುದಕ್ಕೆ ಓಲೆಕಾರರು, ಇದೆಲ್ಲಾ ನಿನಗೆ ಬೇಡವೆ?

ಸುಮತಿ—ಆ ಪಕ್ಷಕ್ಕೆ ಅಮ್ಮಯ್ಯಾ, ಯಾವ ಅಂಗಿಯಾದರೇನು? ಮೈಗೆ ಬೆಚ್ಚಗಿದ್ದರೆ ಸರಿ. ವಾಹನಗಳಿಂದೇನು? ಅದೇನೂ ಇಲ್ಲದೇ ಇದ್ದರೆ ಮನಸ್ಸು ಬಂದಕಡೆ ನಾನು ತಿರುಗಾಡಬಹುದು. ಆಳುಗಳು ನೂರುಜನ ತಾನೇ ಇದ್ದರು; ಫಲವೇನು? ಅವರಿಗೆ ಕೆಲಸವೇನಿದೆ?

ಮಿಸಾನಾಂಬಕಿಯು ಸುಮತಿಯನ್ನು ಅತಿ ಕೀಳಾಗಿ ತಿಳಿದು, ಅವನ ಸಂಗಡ ಇನ್ನು ಯಾವ ಮಾತನ್ನೂ ಆಡದೆ, ಆ ಗಂಡನ್ನು ಬೆರಗಾಗಿ ನೋಡುತಿದ್ದಳು.

ಸಾಯಂಕಾಲದ ಸಮಯಕ್ಕೆ ಸುಮತಿಯು ತಮ್ಮ ಮನೆಗೆ ಹೋದನು. ಅಲ್ಲಿ ಅವರ ತಂದೆಯಾದ ಸೂರ್ಯಭಟ್ಟನು ಮಗನನ್ನು ಕುರಿತು—ಅನಂಗರಾಜರ ಅರಮನೆಗೆ ಹೋಗಿದ್ದೆಯಲ್ಲಾ, ಏನೇನು ನೋಡಿದೆ? ಯಾವ ಯಾವುದು ಚೆನ್ನಾಗಿತ್ತು, ಎಂದು ಕೇಳಿದನು.

ಆಗ ಸುಮತಿಯು—ಹವುದು, ಹೋಗಿದ್ದೆ; ಅವರೆಲ್ಲಾ ನನ್ನನ್ನು ಬಹುವಾಗಿ ಲಾಲಿಸಿದರು. ನನಗೇನೊ ಅವನು ಉಪಕಾರವನ್ನೇ ಮಾಡಿದಹಾಗಾಯಿತು. ಆದರೆ ನಾನು ಅಲ್ಲಿಗೆ ಹೋಗದೆ ಮನೆಯ ಲ್ಲಿಯೇ ಇದ್ದರಾಗಿತ್ತು ಎನ್ನಿಸಿಹೋಯಿತು. ನಿಧಾನವಾಗಿ ಸ್ವಲ್ಪ ತಿಂಡಿ ತಿನ್ನಬೇಕು, ಎಂದರೆ ಮಾರ್ಗವಿಲ್ಲ; ನನ್ನ ಮನಸ್ಸಿಗೆ ಬಹು ಅಸಮಾಧಾನವಾಯಿತು. ಒಬ್ಬ ಬರುವುದು, ಹಣ್ಣಿನ ಮೇಲಿನ ಸಿಪ್ಪೆ ವರೆಯುವುದು; ಇನ್ನೊಬ್ಬ ಬರುವುದು, ಅದನ್ನು ಕುಯ್ಯುವುದು; ಇನ್ನೊಬ್ಬ ಬರುವುದು, ಅದರ ಪಚ್ಚಡಿಯನ್ನು ನನ್ನ ಬಾಯಿಗೆ ತಿನ್ನಿಸು ವುದು; ಇನ್ನೊಬ್ಬ ಬರುವುದು, ನಾನು ಉಗುಳುವುದಕ್ಕೆ ಮುಂಚೆಯೇ ನನ್ನ ಬಾಯಿನಿಂದ ಸಿಪ್ಪೆಯನ್ನು ಕಿತ್ತುಕೊಂಡು ಹೋಗುವುದು; ಇನ್ನೊಬ್ಬ ಹಾಲನ್ನು ತಂದಿರಿಸುವುದು; ಮತ್ತೊಬ್ಬ ಹಾಲನ್ನು ಆರಿಸು ವುದು; ಮತ್ತೊಬ್ಬ ಅದನ್ನು ಬಟ್ಟಲಿಗೆ ಹನಿಸುವುದು, ಮತ್ತೊಬ್ಬ ಆ ಬಟ್ಟಲನ್ನು ನನಗೆ ತಂದು ನೀಡುವುದು; ಮತ್ತೊಬ್ಬ ನನ್ನ

ಕೈಯಿಂದ ಅದನ್ನು ಇಸುಕೊಳ್ಳುವುದಕ್ಕೆ ಸಿದ್ಧವಾಗಿ ಕಾದಿರುವುದು; ಮಗದೊಬ್ಬ ನನ್ನಕೈಗೆ ನೀರಹಾಕಲು ಬೆಳ್ಳಿಚಂಬಿನಲ್ಲಿ ಬಿಸಿನೀರನ್ನು ಹಿಡಿದುಕೊಂಡು ಕಾದಿರುವುದು; ಮಗದೊಬ್ಬ ನಾನು ಕೈತೊಳೆದುಕೊಳ್ಳುವುದಕ್ಕೆ ತಟ್ಟೆಯನ್ನು ಸಿದ್ಧವಾಗಿ ಹಿಡಿದುಕೊಂಡಿರುವುದು; ಮಗದೊಬ್ಬ ನನ್ನ ಕೈ ಒರಸುವುದಕ್ಕೆ ಚೌಕವನ್ನು ಹಿಡಿದುಕೊಂಡು ನಿಂತಿರುವುದು: ಹೀಗೆಲ್ಲಾ ಮಾಡುತಿದ್ದರು. ನನಗೇನೋ ಕಂಣು ಕೈಕಾಲುಗಳೇನೂ ಇಲ್ಲದೇ ಇರುವಹಾಗೂ ಇವರೆಲ್ಲಾ ನನಗೆ ಸಹಾಯ ಮಾಡುವಹಾಗೂ. ಇದಲ್ಲದೆ ಒಬ್ಬ ಈ ಕಡೇ ಬರುವನಲ್ಲ, ಒಬ್ಬ ಆ ಕಡೇ ಹೋಗುವನಲ್ಲ, ಇನ್ನೊಬ್ಬ ಓಡಿಹೋಗುವನಲ್ಲ ಹೀಗೆ ಹಾರಾಡುತಿದ್ದ ಈ ಓಲೆಕಾರರ ಸಂಭ್ರಮ ಸಾಕೋಸಾಕು. ಈ ಗದ್ದಲ ಎಂದಿಗಾದರೂ ಮುಗಿಯುವುದೇ ಇಲ್ಲವೊ ಏನೋ ಎಂದು ನನಗೆ ತೋರಿಹೋಯಿತು. ಅವರು ಕೊಟ್ಟ ತಿಂಡಿಯನ್ನೇನೋ ತಿಂದೆ; ತಿಂದಕೂಡಲೆ ಅತ್ತಿತ್ತ ಅಡ್ಡಾಡದಹಾಗೆ ಒಂದು ಜಾವದ ಹೊತ್ತು ಸುಮ್ಮನೇ ಮಾತನಾಡಿಸುತಾ ಕೂರಿಸಿಕೊಂಡರು. ಅರಸಿತ್ತಿಯು ನನ್ನ ಸಂಗಡ ಮಾತನಾಡುವುದಕ್ಕೆ ಮೊದಲು ಮಾಡಿದಳು; ಆಕೇ ಮಾತು ರಾಮುಜೋಯಿಸರ ಮಾತಿನ ಹಾಗಿರಲಿಲ್ಲ; ಪ್ರಧಾನಿಗಳ ಮನೆಯವರನ್ನು ಕಂಡಹಾಗೆ ಎಲ್ಲರೂ ನನ್ನನ್ನು ಬೈಯುವುದಕ್ಕೆ, ಒಳ್ಳೇ ಬಟ್ಟೆಯನ್ನು ಹಾಕಿಕೊಳ್ಳುತ್ತೀಯ? ನೀನು ದೊರೆಯಾಗಬೇಕೆ? ನಿನಗೆ ಐಶ್ವರ್ಯ ಬರಬೇಕೆ? ಎಂದು ಏನೇನೋ ಕೇಳುತ ಬಂದಳು, ಎಂದು ತಂದೆಯ ಸಂಗಡ ಹೇಳಿದನು.

ಅತ್ತ ಅರಮನೆಯಲ್ಲಿ ಈ ಮಧ್ಯೆ ನಡೆಯುತಿದ್ದ ಮಾತೆಲ್ಲಾ ಸುಮತಿಯ ಗುಣಕಥನವೇ ಆಗಿತ್ತು. ಮೀನಾಂಬಕೀದೇವಿಯು ಆ ಹುಡುಗ ಧೈರ್ಯಶಾಲಿಯೆಂದೂ ನಿಷ್ಕಪಟಿ ಎಂದೂ ಒಪ್ಪಿಕೊಂಡಳು; ಅವನ ಒಳ್ಳೇ ಸ್ವಭಾವವನ್ನೂ ಧಾರಾಳವಾದ ಬುದ್ಧಿಯನ್ನೂ ಕಂಡು ಬೆರಗಾದಳು. ಆದರೆ ಅವನ ಮಾತಿನಲ್ಲಿ ಸ್ವಲ್ಪ ಒರಟುತನವಿದೆ ಎಂತಲೂ, ನಯವಿಲ್ಲವೆಂತಲೂ, ಇಂಥಾ ವಿನಯವೂ ವಾಗ್ಭೂಷಣವೂ ಅಟ್ಟಹಾಸದಿಂದ ಬಾಳುವ ಐಶ್ವರ್ಯವಂತರ ಮಕ್ಕಳಿಗೆ ಹೊರತು ಬಡ

ವರ ಮಕ್ಕಳಿಗೆ ಬರುವುದಿಲ್ಲವೆಂತಲೂ ಪಟ್ಟುಹಿಡಿದು ಮಾತನಾಡಿದಳು.

ಅದಕ್ಕೆ ಅನಂಗರಾಜನು ಒಪ್ಪದೆ—ಎಂಥಾ ಪದವಿಯಲ್ಲಿರತಕ್ಕವರಿಗೇ ಆಗಲಿ, ಸುಮತಿಯಹಾಗೆ ಒಳ್ಳೇ ಸ್ವಭಾವವೂ ಬುದ್ಧಿ ಕೌಶಲ್ಯವೂ ಇರತಕ್ಕ ಮಕ್ಕಳನ್ನು ಪಡೆಯುವುದು ಪೂರ್ವಜನ್ಮದ ಪುಣ್ಯವೇ ಹೊರತು ಮತ್ತೆ ಬೇರೇ ಇಲ್ಲ. ಈ ಮೇಲುಮೇಲಿನ ವಾಗ್ವಿನಯವನ್ನೂ ಮರ್ಯಾದೆಯುಕ್ತವಾದ ಮೇಲ್ಮಾತನ್ನೂ ಬೇಗ ಕಲಿಯಬಹುದು; ಇಂಥಾ ತಳಕುಪಳಕುಗಳು ತಮ್ಮಲ್ಲಿರುವ ಉತ್ತಮೋತ್ತಮವಾದ ಗುಣವೆಂದೂ, ಅವೇ ದೊಡ್ಡ ಗುಣವೆಂದೂ ದೊಡ್ಡವರು ಕೊಚ್ಚಿಕೊಳ್ಳಬಹುದು. ಇಂಥಾ ನಡತೆ ಬಹು ಸುಲಭವಾಗಿ ಬರುವುದು; ಮತ್ತು ನಾವು ನಮ್ಮ ಮೈಮೇಲಿನಿಂದ ತೆಗೆದುಹಾಕಿದ ಜೀರ್ಣವಸ್ತ್ರಗಳು ಹೇಗೆ ನಮ್ಮ ಕಂಚುಕಿಗಳ ಮೈಮೇಲಕ್ಕೂ ದಾದಿಯರ ಮೈಮೇಲಕ್ಕೂ ಸುಲಭವಾಗಿ ಏರುವವೋ, ಹಾಗೆಯೇ ಈ ಅಲ್ಪಗುಣಗಳೂ ನಮ್ಮಿಂದ ಅವರಿಗೆ ಹತ್ತುವವು. ಆದರೆ ಈ ಭೃತ್ಯರು ಕೊಳಕುಬಟ್ಟೆಯನ್ನು ಹಾಕಿಕೊಂಡು ತಿವಿದು ಗಟ್ಟಿಸಿದ ಹಾಗೆ ಆರೋಗ್ಯವಾಗಿರುವುದೇ ಅವರಿಗೂ ಅವರ ಸ್ವಾಮಿಗೂ ಇರುವ ಭೇದ. ಮತ್ತೆ ಯಾವ ಭೇದವೂ ಇಲ್ಲ. ಎಷ್ಟೇ ಮರ್ಯಾದಸ್ಥಿತಿ ಇರಲಿ, ಇನ್ನು ಎಂಥಾ ಉನ್ನತವಾದ ಗುಣವಿರಲಿ, ಇದೆಲ್ಲಕ್ಕೂ ಮನಸ್ಸೇ ಮುಖ್ಯವಾದ ಸ್ಥಾನ. ಗಂಭೀರವಾದ ಅಭಿಮತ, ಉತ್ತಮವಾದ ಧೈರ್ಯ, ಅಶೇಷರಲ್ಲಿಯೂ ಏಕರೀತಿಯಾಗಿರುವ ನಿಜವಾದ ದಯಾರಸ, ಈ ಗುಣಗಳು ನಿಜವಾದ ದೊಡ್ಡತನಕ್ಕೆ ಅಂಗಗಳು. ಈ ಗುಣಗಳು ಲೋಪವಾದರೆ ಅವುಗಳಿಗೆ ಬದಲಾಗಿ ಬೇರೇ ಕೃತಕವಾದ ಧ್ವನಿಯಲ್ಲಿ ಮಾತಾಡುವುದು, ಮುಖದಲ್ಲಿಯೂ ಕೈಯಲ್ಲಿಯೂ ವಿಶೇಷವಾದ ಅಭಿನಯವನ್ನು ತೋರಿಸುವುದು, ಮನಸ್ಸು ಬಂದಂತೆ ಡಂಭವಾದ ಉಡುಪನ್ನು ಹಾಕಿಕೊಳ್ಳುವುದು, ಇಂಥಾ ಹೊರಗಿನ ನಡತೆಗಳು ಇರಬಲ್ಲವೆಂದು ತಿಳಿಯುವರು ಮಂದಮತಿಗಳಾಗಿರಬೇಕು. ಇಂಥಾ ಚರ್ಯೆಗಳಿಗೂ ನಿಜವಾದ ದೊಡ್ಡತನಕ್ಕೂ ಬಹುದೂರ. ಅಷ್ಟೇ ಅಲ್ಲದೆ ಇಂಥಾ ಹೊರಗಿನ ಶೃಂಗಾರಗಳು ಕೆಲಸಿಗರಲ್ಲಿಯೂ, ಚಿಪ್ಪಿಗರಲ್ಲಿಯೂ, ಆಟಗಾರರಲ್ಲಿಯೂ, ನಟುವರಲ್ಲಿಯೂ, ಸೂಳೆಯರಲ್ಲಿಯೂ, ಮತ್ತೂ ಇತರ

ಅನೇಕವಿಧವಾದ ವಂಚಕರಲ್ಲಿಯೂ ನೆಲೆಗೊಂಡಿವೆ; ಮನಸ್ಸಾಕ್ಷಿಯಾಗಿಯೂ ನನಗೆ ತೋರುವುದೇನೆಂದರೆ: ಈ ಬ್ರಾಹ್ಮಣರ ಹುಡುಗನಲ್ಲಿ ನಿಜವಾದ ಗಾಂಭೀರ್ಯಕ್ಕೂ ಸದ್ಗುಣಕ್ಕೂ ತಕ್ಕ ಬೀಜವಿದೆ. ನಮ್ಮ ಮಗುವಿನಲ್ಲಿ ಅವನ ಪದವಿಗೆ ಸಾಧಾರಣವಾಗಿರಬೇಕಾದ ಗುಣಗಳೇನೋ ಇರಲೇಬೇಕು; ಗುಣದಲ್ಲಿ ಸುಮತಿಗಿಂತಲೂ ನಮ್ಮ ಹುಡುಗನು ಯಾವ ಭಾಗದಲ್ಲಿಯೂ ಕಡಮೆಯಲ್ಲವೆನ್ನಿಸಿಕೊಳ್ಳಲಿ, ಎನ್ನುವುದೇ ನನ್ನ ಕೋರಿಕೆ. ಈ ವಿಷಯವಾಗಿ ನನ್ನಲ್ಲಿ ಅತಿಯಾದ ಕುತೂಹಲವೇನಾದರೂ ತೋರಿಬಂದರೆ, ಅದು ನಮ್ಮ ಮದನನ ಅಭಿವೃದ್ಧಿಯಲ್ಲಿ ನನಗಿರುವ ಆಸಕ್ತಿಯಿಂದ ಹುಟ್ಟಿದ್ದೇ ಹೊರತು ಮತ್ತೇನೂ ಅಲ್ಲ. ನಮ್ಮಿಬ್ಬರಿಗೂ ಅವನಲ್ಲಿರುವ ಅತಿಪ್ರೀತಿಯಿಂದ ಇದುವರೆಗೆ ಅತಿಯಾಗಿ ಮುದ್ದು ಮಾಡಿಬಿಟ್ಟೆವು. ಅವನಿಗೆ ಸ್ವಲ್ಪ ಯಾತನೆಯೂ ಸ್ವಲ್ಪ ಅಸಮಾಧಾನವೂ ಆಗಕೂಡದೆಂಬ ನಮ್ಮ ಅಭಿಲಾಷೆಯಿಂದ ಅವನ ಸ್ವಭಾವವು ಅತಿ ನಾಜೂಕಾಯಿತು. ಸಿಡುಕಲು ವಿಪರೀತವಾಯಿತು. ಅವನ ಮರ್ಜಿಯನ್ನು ಅನುಸರಿಸಿ ನಡೆಯಬೇಕೆಂಬ ನಮ್ಮ ಆಶೆಯಿಂದ, ಅವನು ಮನಸ್ಸು ಬಂದ ಹಾಗೆ ಆಡುವ ಐಲಾಟಗಳಿಗೆ ನಾವು ಸಹಕಾರಿಗಳಾಗಬೇಕಾಗಿ ಬಂತು. ಅವನಿಗೆ ಯಾವನಿಂದ ಯಾವ ವಿಧವಾದ ತೊಡಕೂ ನಿರ್ಬಂಧವೂ ಇರಕೂಡದೆಂದು ನಾವು ಮಾಡುವ ವಿಶೇಷ ಪ್ರಯತ್ನವೇ ಅವನಿಗೆ ಒಂದಕ್ಷರವೂ ಬಾರದೆ ಓರಗೇ ಹುಡುಗರಿಗಿಂತಲೂ ಎಷ್ಟೋ ಕೀಳಾಗಿರುವುದಕ್ಕೆ ಕಾರಣವಾಯಿತು. ಇದೆಲ್ಲವನ್ನೂ ಬಾಯಲ್ಲಿ ಆಡದೆ ನನಗೆ ಮಗುವಿನಲ್ಲಿರುವ ಪ್ರೇಮದಿಂದಲೂ, ಅವನ ಕ್ಷೇಮಕ್ಕೆ ಏನಾದರೂ ನಾನು ಮಾಡಿದರೆ ನೀನು ಅಳುತ್ತಾ ಕೂತುಕೊಳ್ಳುತ್ತೀಯಲ್ಲಾ ಎಂಬ ಯೋಚನೆಯಿಂದಲೂ ನನಗಿದ್ದ ಅಸಮಾಧಾನವನ್ನು ಮುಚ್ಚಿಕೊಂಡಿದ್ದೆ. ಆದರೆ ಅವನ ಪುರೋವೃದ್ಧಿಯ ಯೋಚನೆಮೇಲೆ ಯಾವ ಅಭಿಮಾನವೂ ಹಾಯಲಾರದೇ ಹೋಯಿತು. ಇದರಿಂದ ನಾನು ಒಂದು ಖಂಡಿತವಾದ ಸಂಕಲ್ಪವನ್ನು ಮಾಡಬೇಕಾಗಿ ಬಂತು. ಇದಕ್ಕೆ ನೀನು ಅಸಮಾಧಾನಪಟ್ಟುಕೊಳ್ಳಕೂಡದು. ಆ ಸಂಕಲ್ಪವೇನೆಂದರೆ, ಈ ಊರಲ್ಲಿರುವ ರಾಮಜೋಯಿಸರು ತಮ್ಮ

ಅಧೀನಕ್ಕೆ ನಮ್ಮ ಮಗುವನ್ನು ತೆಗೆದುಕೊಳ್ಳುವುದಾದರೆ, ಅವರ ಸಮೀಪಕ್ಕೆ ಇವನನ್ನು ಕಳುಹಿಸಬೇಕೆಂಬುದು. ಸುಮತಿಯೂ ನಮ್ಮ ಮದನನೂ ವಾರಿಗೇಹುಡುಗರು. ಇಬ್ಬರ ಎತ್ತರವೂ ಒಂದೇ, ಇಬ್ಬರ ವಯಸ್ಸೂ ಒಂದೇ. ಅಕಸ್ಮಾತ್ತಾಗಿ ಉಂಟಾದ ಸುಮತಿಯ ಪರಿಚಯದಿಂದ ನಮ್ಮ ಮಗುವಿಗೆ ಕ್ಷೇಮವಾದರೆ ಸಾಕು. ಆದಕಾರಣ ಸುಮತಿಯ ತಿಂಡಿ ತೀರ್ಥ ಮೊದಲಾಗಿ ಅವನಿಗೋಸ್ಕರ ತಗಲುವ ವೆಚ್ಚವನ್ನೆಲ್ಲಾ ನಾನು ನೋಡಿಕೊಳ್ಳುತೇನೆ. ನಮ್ಮ ಮಗುವಿನ ಸಂಗಡಲೇ ಸುಮತಿಯು ಯಾವಾಗಲೂ ಸಹಪಾಠಿಯಾಗಿರುವಂತೆ ಮಾಡಿಸಬೇಕೆಂದು ಸೂರ್ಯಭಟ್ಟರಿಗೆ ನಾನು ಹೇಳಬೇಕೆಂಬದಾಗಿದೇನೆ: ಹೀಗೆಂದು ಅರಸನು ತನ್ನ ಅಭಿಪ್ರಾಯವನ್ನು ವಿಶದವಾಗಿ ಹೆಂಡತಿಯ ಸಂಗಡ ಹೇಳಿದನು.

---

## ೩ನೆ ಅಧ್ಯಾಯ

ಈ ರೀತಿಯಲ್ಲಿ ದೊರೆಯು ತನ್ನ ಮನಸ್ಸಿನಲ್ಲಿ ಮಾಡಿಕೊಂಡಿದ್ದ ಖಂಡಿತವಾದ ಸಂಕಲ್ಪವನ್ನು ಕೇಳಿದ ಕೂಡಲೆ, ಅರಸಿಯು ಗಂಡನ ಮನೋಗತವೆಲ್ಲಾ ಬಹಳ ಯುಕ್ತವಾದುದೆಂತಲೂ ಹಾಗೆ ನಡೆಸುವುದು ಅಗತ್ಯವೆಂತಲೂ ತಿಳಿದುಕೊಂಡು ಆತನ ಮಾತಿಗೆ ಪ್ರತಿಯಾಗಿ ಹೇಳದೆ ಸುಮ್ಮನಿದ್ದಳು. ಆದರೆ ಮಗನನ್ನು ಬಿಟ್ಟು ಕಳುಹಿಸುವುದಕ್ಕೆ ಮನಸ್ಸಿಲ್ಲದೇ ಕೊನೆಗೆ ಕಳುಹಿಸಿಕೊಟ್ಟಳು. ಕೂಡಲೆ ಒಂದಾನೊಂದು ಸೋಮವಾರ ಶಿವಪೂಜೇಕಾಲಕ್ಕೆಸರಿಯಾಗಿ ಅನಂಗರಾಜರ ಅರಮನೆಗೆ ದಯಮಾಡಿಸಬೇಕೆಂದು ಅಪ್ಪಣೆಯಾಗಿರುವುದಾಗಿ ಊಳಿಗದವರು ಹೋಗಿ ವೇದಮೂರ್ತಿ ರಾಮಜೋಯಿಸರನ್ನು ಕರೆದರು. ಅದೇ ಪ್ರಕಾರ ರಾಮಜೋಯಿಸನು ಅರಮನೆಗೆ ಬಂದು ಯೋಗ್ಯತಾನುಸಾರ

ವಾದ ಮರ್ರ್ಯಾದೆಯನ್ನು ಹೊಂದಿ ಸಭೆಯಲ್ಲಿ ಕೂತುಕೊಂಡನು. ಅರಸನು ಅದನ್ನು ಕಂಡು ಆತನನ್ನು ತನ್ನ ಸಮೀಪಕ್ಕೆ ಕರೆದು ಕುಳ್ಳಿರಿಸಿಕೊಂಡು ಆಮಾತು ಈಮಾತು ಆಡುತ್ತಾ, ತನ್ನ ಮಗನ ವಿದ್ಯಾಭ್ಯಾಸ ವಿಷಯವನ್ನು ಮೆಲ್ಲಗೆ ತೆಗೆದನು; ಮತ್ತು ತನ್ನ ಯೋಗ್ಯತೆ ಮೀರಿ ಮರ್ರ್ಯಾದೆಯನ್ನು ಮಾಡುವುದೂ ಅಲ್ಲದೆ, ತನ್ನ ಮಗ ಅಕ್ಷರಸ್ಥನಾಗಿ ಅಭಿವೃದ್ಧಿಯಾಗುವುದೇ ತನ್ನ ಮುಖ್ಯೋದ್ದೇಶವಾದ ಕಾರಣ, ಪ್ರತ್ಯುಪಕಾರಕ್ಕೆ ಮೀರಿದಂಥಾ ಉಪಕೃತಿಯನ್ನು ತಾನು ಜೋಯಿಸನಿಂದ ಹೊಂದಿದವನೆಂದು ಭಾವಿಸುತೇನೆಂಬದಾಗಿ ಆತನ ಸಂಗಡ ಹೇಳಿದನು.

ಈ ಮಾತನ್ನು ಕೇಳಿ ಜೋಯಿಸನು ನಿಧಾನವಾಗಿ ಸ್ವಲ್ಪಹೊತ್ತು ಪರ್ರ್ಯಾಲೋಚನೆ ಮಾಡಿ, ತರುವಾಯ ದೊರೆಯನ್ನು ಕುರಿತು,–ಸ್ವಾಮಿ, ಒಂದು ಸಂಗತಿಯನ್ನು ಅರಿಕೆ ಮಾಡಬೇಕಾಗಿದೆ, ಕ್ಷಮಿಸಬೇಕು; ಕೆಲವು ತಿಂಗಳ ಮಟ್ಟಿಗೆ ತಮ್ಮ ಮಗನನ್ನು ನನ್ನ ವಶಕ್ಕೆ ತೆಗೆದುಕೊಂಡು ಆತನ ಅಭಿವೃದ್ಧಿಗೋಸ್ಕರ ನನ್ನ ಕೈಲಾದ ಸಾಹಸವನ್ನೆಲ್ಲಾ ಮಾಡುವುದಕ್ಕೆ ಸಿದ್ಧನಾಗಿದೇನೆ. ಆದರೆ ಒಂದು ಮಾತನ್ನು ನಾವು ನಡಸಿಕೊಡದಿದ್ದರೆ ತೀರುವುದಿಲ್ಲ, ಆತನಿಗೆ ನಾನು ಒಬ್ಬ ಸ್ನೇಹಿತನಾಗಿ ಇರುವನಂತೆಯೇ ತೋರ್ಪಡಿಸಿಕೊಂಡು ತಮ್ಮ ಕಾರ್ರ್ಯವನ್ನು ನೆರವೇರಿಸಬೇಕು. ಇಷ್ಟರಮಟ್ಟಿಗೆ ಮಾಡಲು ನನಗೆ ಅಭಯವಾಗಿ, ನನ್ನ ನಡೆನುಡಿಗಳು ತಮಗೆ ಸಮ್ಮತವಾದರೆ, ಎಷ್ಟು ದಿವಸ ಬೇಕಾದರೂ ಆತನನ್ನು ಬಳಿಯಲ್ಲಿ ಇಟ್ಟುಕೊಂಡಿರುತೇನೆ. ಈ ಮಧ್ಯೆ ಅತಿ ಪ್ರೀತಿಯಿಂದಲೂ ಮುದ್ದಿನಿಂದಲೂ ಹುಡುಗನ ಗುಣವು ಸ್ವಲ್ಪ ಹದಗೆಟ್ಟಿದೆ ಎಂದು ನನಗೆ ಭಯವುಂಟಾಗಿದೆ. ಅದು ವ್ಯತ್ಯಾಸವಾಗಬೇಕು. ಆದ್ದರಿಂದ ನಾನು ಉಪಾಧ್ಯಾಯನೆಂದು ತೋರ್ಪಡಿಸಿಕೊಳ್ಳುವುದಕ್ಕಿಂತಲೂ ತಮಗೂ ತಮ್ಮ ಮನೆಯವರೆಲ್ಲರಿಗೂ ಮಿತ್ರನಂತೆ ಸದ್ಯಕ್ಕೆ ತೋರ್ಪಡಿಸಿಕೊಂಡಲ್ಲಿ, ನನ್ನ ಕಾರ್ರ್ಯಕ್ಕೆ ಅಗತ್ಯವಾಗಿ ಬೇಕಾದ ಹತೋಟಿಯು ನನಗೆ ಕೊಂಚ ಹೆಚ್ಚಾಗಿಯೇ ಇದ್ದೀತೆಂದು ತೋರುತಿದೆ; ಇದರ ಮೇಲೆ ಸರ್ವಜ್ಞ ಚಿತ್ತ, ಹೀಗೆಂದು ಹೇಳಿದನು.

ಉಪಾಧ್ಯಾಯರಿಗೆ ಸಲ್ಲತಕ್ಕ ಮರ್ರ್ಯಾದೆಯಿಂದಲೇ ಆ ವಿದ್ವಾಂಸ

ನನ್ನು ಕಾಣಬೇಕೆಂಬ ಅರಸನ ಉದಾರವಾದ ಮನಸ್ಸಿಗೆ ಜೋಯಿಸನು ಹೇಳಿದ ಮಾತು ಎಷ್ಟೇ ಅಸಮಾಧಾನಕರವಾಗಿದ್ದಾಗ್ಯೂ, ದೊರೆಯು ಅದಕ್ಕೆ ಒಪ್ಪದೇಹೋದರೆ ತೀರದಾಗಿತ್ತು. ಅದೇ ಪ್ರಕಾರ ಆ ಊರಿಗೆ ಕೊಂಬಿನ ಕೂಗಿನ ದೂರದಲ್ಲಿದ್ದ ಅಗ್ರಹಾರದಲ್ಲಿ ರಾಮಜೋಯಿಸನು ವಾಸಮಾಡುತಿರುವ ಮನೆಗೆ ಆ ಮಾರನೇದಿವಸ ಮದನಕುಮಾರನನ್ನು ಕಳುಹಿಸಿದರು.

ರಾಜಕುಮಾರನು ತನ್ನ ಮನೆಗೆ ಬಂದು ಸೇರಿದ ಮಾರನೇದಿವಸ ಬೆಳಗ್ಗೆ ಅಷ್ಟುಹೊತ್ತಿಗೇ ರಾಮಜೋಯಿಸನು ತನ್ನ ಆಹ್ನಿಕಗಳನ್ನು ತೀರಿಸಿಕೊಂಡು ಧನುರ್ಮಾಸದ ಹಾಗೆ ಹೊತ್ತಿಗೆ ಮುಂಚೆಯೇ ಊಟವನ್ನು ಮಾಡಿಕೊಂಡು, ಸುಮತಿಮದನಕುಮಾರ ಈ ಉಭಯರೊಡನೆ ಕೂಡಿ ಸಮೀಪದಲ್ಲಿದ್ದ ತನ್ನ ತೋಟಕ್ಕೆ ಹೋದನು. ಅಲ್ಲಿ ಜೋಯಿಸನು ಸುಮತಿಯ ಕೈಗೆ ಒಂದು ಕಳೆಕೊಕ್ಕೆಯನ್ನು ಕೊಟ್ಟು ತಾನು ಒಂದು ಗುದ್ದಲಿಯನ್ನು ತೆಗೆದುಕೊಂಡನು : ತರುವಾಯ ಬಹು ಶ್ರದ್ಧೆಯಿಂದ ಅವರಿಬ್ಬರೂ ಅಗೆಯುವದಕ್ಕೆ ಮೊದಲು ಮಾಡಿದರು.

ಹಾಗೆ ಅಗೆಯುತಾ ಜೋಯಿಸನು ಆ ಹುಡುಗರನ್ನು ನೋಡಿ— ಹಣ್ಣುತಿನ್ನಬೇಕೆಂದು ಆಶೆಯಿರತಕ್ಕವರು ; ಆ ಹಣ್ಣು ಬೆಳೆಯುವುದಕ್ಕೆ ತಕ್ಕ ಕೆಲಸವನ್ನು ಮಾಡಬೇಕು : ಆದ್ದರಿಂದ ನಾನೂ ನಮ್ಮ ಸುಮತಿಯೂ ನಮ್ಮ ದಿನಗಟ್ಟಲೇ ಕೆಲಸಕ್ಕೆ ಮೊದಲು ಮಾಡುತೇವೆ : ಇಗೋ ಇದೇ ನನ್ನ ಪಾತ್ರೆ, ಅದು ಸುಮತೀದು, ನಾವು ನಿತ್ಯವೂ ಕೆಲಸ ಮಾಡುತೇವೆ. ಯಾರು ಹೆಚ್ಚಾಗಿ ಬೆಳೆಯುತಾರೆಯೋ ಅವರಿಗೆ ಹೆಚ್ಚು ತಿಂಡಿ ಸಿಕ್ಕುವುದು. ಅಯ್ಯಾ ಮದನು, ನೀನೂ ನಮ್ಮ ಜೊತೆಗೆ ಬರುವುದಾದರೆ ನಿನಗೂ ಒಂದು ತುಂಡನ್ನು ಗುರುತುಮಾಡಿಕೊಡುತೇನೆ ; ಅದು ನಿನ್ನದೇ ಆಗಿರುತ್ತೆ ; ಅದರಲ್ಲಿ ಆದ ಹಣ್ಣೆಲ್ಲಾ ನಿನ್ನದೇ.

ಮದನಕುಮಾರ—ಒಂದು ಕಾಲಕ್ಕೂ ಇಲ್ಲ, ನಾನು ರಾಜಕುಮಾರ ; ಕೆಲಸಕ್ಕೆ ಬಾರದ ಕೂಲಿಯವರಹಾಗೆ ನಾನು ಇಂಥಾ ಚಾಕರಿಗೆಲ್ಲಾ ಹೋಗಲಾರೆ, ನನಗೆ ಇಷ್ಟವಿಲ್ಲ.

ಜೋಯಿಸ—ಹಾಗಾದರೆ, ಸ್ವಾಮಿ ಮಹಾರಾಜಶ್ರೀ ರಾಜ

ಕುಮಾರರೆ, ತಮ್ಮ ಚಿತ್ತಬಂದಂತೆ ಮಾಡಿ ; ನಾನೂ ಸುಮತಿಯೂ ಕೆಲಸ ಮಾಡುತ್ತೇವೆ, ನಮ್ಮ ದರ್ಜೆಗೆ ಏನೂ ಕಮ್ಮಿಯಿಲ್ಲ. ನಮ್ಮ ಕೆಲಸದಲ್ಲಿ ನಾವು ಇರುತ್ತೇವೆ.

ಹೀಗೆ ಇವರಿಬ್ಬರೂ ಎರಡು ಗಂಟೆಹೊತ್ತು ಕೆಲಸಮಾಡುತಿದ್ದರು. ಆಗ ರಾಮಜೋಯಿಸನು—ಇನ್ನು ಸಾಕು, ಈಗ್ಗೆ ಕೆಲಸವನ್ನು ನಿಲ್ಲಿ ಸೋಣ, ಎಂದು ಗುದ್ದಲಿಯನ್ನು ಬಿಟ್ಟು ಸುಮತಿಯ ಕೈಯನ್ನು ಹಿಡಿದುಕೊಂಡು, ಆ ತೋಟದಲ್ಲಿ ಒಂದು ಕೊನೆಯಲ್ಲಿದ್ದ ಗುಡಿಲಿಗೆ ಹೋದನು. ಅಲ್ಲಿ ಅವರಿಬ್ಬರೂ ಕೂತುಕೊಂಡರು. ಅಲ್ಲಿ ಒಂದು ಬಿದಿರ ತಟ್ಟೆಯಲ್ಲಿ ಇರಿಸಿದ್ದ ಒಳ್ಳೇಕಳಿತ ಬಾಳೇಹಣ್ಣುಗಳನ್ನೂ ಮಾವಿನ ಹಣ್ಣುಗಳನ್ನೂ ಅವರಿಬ್ಬರೂ ಹಂಚಿಕೊಂಡರು.

ಇವರಿಬ್ಬರೂ ಕೆಲಸವನ್ನು ನಿಲ್ಲಿಸಿ ಗುಡಿಲಿನ ಸಮೀಪಕ್ಕೆ ಬರು ವಾಗ ಇವರ ಹಿಂದೆಯೇ ಬಂದು ಸಮೀಪದಲ್ಲಿ ನಿಂತಿದ್ದ ಮದನಕುಮಾ ರನು ತನಗೂ ತಿನ್ನುವುದಕ್ಕೆ ಹಣ್ಣನ್ನು ಕೊಟ್ಟಾರೆಂದು ಕಾದುಕೊಂಡಿ ದ್ದನು. ಆದರೆ ಅವರಿಬ್ಬರೂ ಇವನ ಕಡೆಯೇ ತಿರುಗಿನೋಡದೆ, ಇವ ನನ್ನು ಲಕ್ಷ್ಯಮಾಡದೆ, ತಾವು ತಿನ್ನುವುದಕ್ಕೆ ಮೊದಲು ಮಾಡಿದರು. ಮದನಕುಮಾರನಿಗೆ ಇದನ್ನು ಕಂಡು ಸಹಿಸದೇ ಹೋಯಿತು. ಗುಳ ಗುಳನೆ ಕಣ್ಣಿನಲ್ಲಿ ನೀರ ಸುರಿಸುತಾ ಗೊಳ್ಳೆಂದು ಗಟ್ಟಿಯಾಗಿ ಅಳುವು ದಕ್ಕೆ ಮೊದಲು ಮಾಡಿದನು.

ಜೋಯಿಸನು ಅವನನ್ನು ನೋಡಿ ಲೇಶವೂ ಗಾಬರಿಪಡದೆ— ಯಾಕೆ ಏನಾಯಿತು? ಎಂದು ಕೇಳಿದನು. ಮದನಕುಮಾರನು ಅತಿ ಕೋಪದಿಂದ ಜೋಯಿಸನ ಮುಖವನ್ನು ದುರುಗುಟ್ಟಿಕೊಂಡು ನೋಡುತಾ ಅವನ ಮಾತಿಗೆ ಉತ್ತರವನ್ನೇ ಹೇಳದೆ ಸುಮ್ಮನೇ ನಿಂತಿ ದ್ದನು. ಅದನ್ನು ಕಂಡು ಆ ಪಂಡಿತನು—ಓ! ಹಾಗೆಯೇ ಸ್ವಾಮಿ? ತಾವು ಮಾತನಾಡದಿದ್ದರೆ ಸುಮ್ಮನೇ ಇರಬಹುದು. ಮಾತನಾಡಲೇ ಬೇಕೆಂಬ ನಿರ್ಬಂಧವೇನೂ ಇಲ್ಲಿಲ್ಲ, ಎಂದು ಹೇಳಿದನು.

ಮದನನಿಗೆ ಇನ್ನೂ ಅಸಮಾಧಾನ ಹೆಚ್ಚಾಯಿತು. ತನ್ನ ಕೋಪ ವನ್ನು ಮರೆಮಾಚಿಕೊಳ್ಳುವುದಕ್ಕೆ ಸಾಮರ್ಥ್ಯವಿಲ್ಲದಕಾರಣ, ಗುಡಿ

ಲನ್ನು ಬಿಟ್ಟು ಆಚೆಗೆ ಓಡಿಹೋಗಿ, ಬಿಕ್ಕಳಿಸಿ ಬಿಕ್ಕಳಿಸಿ ಅಳುತಾ ಅಲ್ಲಲ್ಲೇ ಸ್ವಲ್ಪ ಸ್ವಲ್ಪ ನಿಂತು ಹಿಂತಿರುಗಿ ಹಿಂತಿರುಗಿ ಇವರನ್ನು ನೋಡುತಾ ಆ ತೋಟದಲ್ಲೆಲ್ಲಾ ಓಡಾಡಿದನು. ತನಗೆ ದುಃಖ ಉಂಟಾಗಲಿ ಸಂತೋಷಉಂಟಾಗಲಿ, ಯಾರೂ ತನ್ನನ್ನು ಲಕ್ಷ್ಯಮಾಡುವುದಿಲ್ಲವಲ್ಲಾ ಅಂಥಾ ಸ್ಥಳಕ್ಕೆ ಬಂದೆನಲ್ಲಾ ಎಂದು ಅವನಿಗೆ ಏಕರೀತಿಯಲ್ಲಿ ಅಸಮಾಧಾನವೂ ಆಶ್ಚರ್ಯವೂ ಉಂಟಾದವು. ಹಣ್ಣನ್ನೆಲ್ಲಾ ಜೋಯಿಸನೂ ಸುಮತಿಯೂ ತಿಂದು ಮುಗಿಸಿದರು.

ಸುಮತಿಯು—ಜೋಯಿಸರೆ, ನಾವು ತೋಟದಲ್ಲಿ ಕೆಲಸ ಮಾಡಿಯಾದ ಮೇಲೆ, 'ನೀನು ಒಂದು ಕಥೆಯನ್ನು ಓದು ಕೇಳುತೇನೆ' ಎಂದು ಹೇಳಿದ್ದಿರಿ. ತಮಗೆ ಸಮಾಧಾನವಾಗಿದ್ದರೆ, ಇರುವೆ ನೊಣಗಳ ಕಥೆಯನ್ನು ಓದುತೇನೆ, ಕೇಳಬೇಕು.

ಜೋಯಿಸ—ಅಗತ್ಯವಾಗಿ ಆಗಲಿ. ನಿಧಾನವಾಗಿ ಸ್ಪಷ್ಟವಾಗಿ ಓದಬೇಕು, ಮಧ್ಯೆ ಮಧ್ಯೆ ಸಂದೇಹಪಡಬಾರದು. ಶಬ್ದಗಳನ್ನು ತಪ್ಪಾಗಿ ಉಚ್ಚರಿಸಬಾರದು, ನೀನು ಓದಿದ್ದು ನಿನಗೆ ಅರ್ಥವಾಯಿತೆಂದು ತೋರ್ಪಡಿಸಿಕೊಳ್ಳುವಹಾಗೆ ಓದಬೇಕು. ಇದೆಲ್ಲಾ ನಿನಗೆ ಜ್ಞಾಪಕವಿದ್ದೇ ಇದೆ.

ತರುವಾಯ ಸುಮತಿಯು ಪುಸ್ತಕವನ್ನು ತೆಗೆದುಕೊಂಡು ಓದಲಾರಂಭಿಸಿದನು.

## ನೊಣಗಳು ಮತ್ತು ಇರುವೆಗಳು

ಒಂದಾನೊಂದು ಕಾಲದಲ್ಲಿ ಒಬ್ಬಾನೊಬ್ಬ ಗೌಡನ ತೋಟದ ಒಂದು ಮೂಲೆಯಲ್ಲಿ ಒಂದು ದೊಡ್ಡ ಇರುವೇಗೂಡು ಇತ್ತು. ಅಲ್ಲಿದ್ದ ಇರುವೆಗಳು ಬೇಸಗೆಯಲ್ಲಿ ದಿನವೆಲ್ಲಾ ಹೊರಕ್ಕೆ ಬಂದು ಕಾಳುಗಳನ್ನು ಕಚ್ಚಿಕೊಂಡು ಗೂಡಿನ ಒಳಕ್ಕೆ ಹೋಗುತಲೇ ಇರುತಿದ್ದವು. ಆ ಇರುವೇಗೂಡಿನ ಹತ್ತಿರ ಕೆಲವು ಹೂವಿನ ಗಿಡಗಳಿದ್ದವು. ಆ ಗಿಡಗಳ ಮೇಲಿದ್ದ ಹೂವಿಗೆ ಅನೇಕ ನೊಣಗಳು ಬಂದು ಎರಗುವುದು, ಅಲ್ಲಿಂದ ಹಾರುವುದು, ಝೇಂಕರಿಸುವುದು, ಒಂದು ಪುಷ್ಪದಿಂದ ಇನ್ನೊಂದು ಪುಷ್ಪಕ್ಕೆ

ನೆಗೆಯುವುದು, ಹೀಗೆಲ್ಲಾ ಆಡುತಿದ್ದವು. ಆ ತೋಟದವನ ಮಗನಾದ ಒಬ್ಬ ಸಣ್ಣ ಹುಡುಗನು ಇರುವೆ ನೊಣಗಳು ಮಾಡುತಿರುವ ಕೆಲಸ ವನ್ನು ಆಗಾಗ್ಗೆ ನೋಡುತಲೇ ಇದ್ದನು. ಈ ಹುಡುಗನು ಚಿಕ್ಕವನಾಗಿ ಏನೂ ಅರಿಯದವನಾಗಿದ್ದಕಾರಣ ಒಂದುದಿನ ತನ್ನಷ್ಟಕ್ಕೆ ತಾನೇ— ಇರುವೆಯ ಹಾಗೆ ಏನೇನೂ ಅರಿಯದ ಪ್ರಾಣಿಗಳು ಇನ್ನು ಉಂಟೆ? ನೊಣಗಳ ಹಾಗೆ ಹಾರಾಡುತ ಸಂತೋಷವಾಗಿರದೆ ಹಗಲೆಲ್ಲಾ ಗೇದು ಕೆಲಸ ಮಾಡುತಲೇ ಇರುತಿವೆ. ಈ ನೊಣಗಳು ಸರಿ, ಲೋಕದಲ್ಲಿ ಇಂಥಾ ಸದಾ ಸಂತೋಷಿಯಾದ್ದು ಇನ್ನು ಯಾವುದೂ ಇಲ್ಲ, ಎಂದು ಕೊಂಡನು. ಈ ಹುಡುಗನು ಹೀಗೆ ಎಂದುಕೊಂಡು ಸ್ವಲ್ಪ ದಿವಸದ ಮೇಲೆ ಮಳೆಗಾಲಬಂತು. ಸೂರ್ಯ ರಶ್ಮಿಯೇ ಕಾಣಿಸುವುದು ಕಷ್ಟ ವಾಗಿತ್ತು. ಮೂರು ಹೊತ್ತೂ ಜೋರ್‍ರಿಂದು ಮಳೆ ಹುಯ್ಯುತ್ತಲೇ ಇತ್ತು. ಮೇಲೆ ಕಂಡ ಸಣ್ಣ ಹುಡುಗನು ಆ ಮಳೆಯಲ್ಲಿಯೇ ಒಂದು ದಿನ ತೋಟಕ್ಕೆ ಹೋಗಿ ನೋಡುವಾಗ್ಗೆ, ಅಲ್ಲಿ ಒಂದು ಇರುವೆಯೂ ಇರ ಲಿಲ್ಲ. ಅಲ್ಲಿದ್ದ ನೊಣಗಳು ಮಾತ್ರ ಚದರಿಹೋಗಿ ಕೆಲವು ಅಲ್ಲಲ್ಲಿ ಹಾರಾಡುತಿದ್ದವು; ಮತ್ತೆ ಕೆಲವು ಸತ್ತು ಬಿದ್ದಿದ್ದವು. ಅವನು ಒಳ್ಳೇ ಗುಣಾಢ್ಯನಾದ ಹುಡುಗನಾಗಿದ್ದರಿಂದ ಆ ಸಣ್ಣ ಜೀವರಾಶಿಗಳನ್ನು ನೋಡಿ ಮರುಕದಿಂದ, ತನ್ನ ತಂದೆಯನ್ನು ಕುರಿತು—ಅಪ್ಪ, ಇಲ್ಲಿದ್ದ ಇರುವೆಗಳಿಗೆ ಏನು ಬಂತು? ಅವು ಏನಾದವು? ಎಂದು ಕೇಳಿದನು.

ತಂದೆ—ಮಗು, ನೊಣಗಳೆಲ್ಲಾ ಸತ್ತುಹೋದವು; ಯಾಕೆ ಎಂದು ಕೇಳಿದರೆ ಈ ಜಂತುಗಳಿಗೆ ಚಚ್ಚರ ಕಡಮೆ; ಶ್ರಮಪಟ್ಟು ತಿಂಡಿಯನ್ನು ಸೇರಿಸಿ ತುಂಬಿಕೊಳ್ಳಲಿಲ್ಲ; ಕೆಲಸಮಾಡುವುದಕ್ಕೆ ಅತಿಯಾಗಿ ಪಾಲು ಮಾರಿಕೆಪಡುತಿದ್ದವು; ಅದರಿಂದ ನೊಣಗಳಿಗೆ ಇಂಥಾ ದುರ್ಗತಿ ಬಂತು. ಇರುವೆಗಳಾದರೋ ಬೇಸಗೆಯಲ್ಲಿ ಶ್ರಮ ಬಿದ್ದು ಕೆಲಸಮಾಡಿ ಚಳಿ ಗಾಲಕ್ಕೆ ಅನುಕೂಲಿಸುವ ಹಾಗೆ ತಿಂಡಿಯನ್ನು ತುಂಬಿಕೊಂಡವು. ಆದರಿಂದ ಅವುಗಳೆಲ್ಲಾ ಕ್ಷೇಮವಾಗಿವೆ. ಬಿಸಿಲುಕಾಲ ಬಂದರೆ ಮತ್ತೆ ಅವುಗಳೆಲ್ಲಾ ಬರುವವು, ಹೀಗೆಂದು ಹೇಳಿದನು.

ಈ ರೀತಿಯಲ್ಲಿ ಸುಮತಿಯು ಓದಿದ ಕಥೆಯನ್ನು ಕೇಳಿ ರಾಮ.

ಜೋಯಿಸನು-ಸಾಕೈಯ್ಯ, ಸುಮತಿ ಬಾ, ನಾವು ಹಾಗೆಯೇ ಹೊರಕ್ಕೆ ಹೋಗಿ ಸುತ್ತಾಡಿಕೊಂಡು ಬರೋಣ, ಎಂದು ಆ ಹುಡುಗನನ್ನು ಜೊತೆಯಲ್ಲಿ ಕರೆದುಕೊಂಡು ಹೊಲಗಳಲ್ಲಿ ಸುತ್ತಿಯಾಡುತಾ ಇದ್ದನು; ತನ್ನ ದಾರಿಯಲ್ಲಿ ಕಣ್ಣಿಗೆಬಿದ್ದ ಬಗೆಬಗೇ ಗಿಡಮೂಲಿಕೆಗಳನ್ನು ಜೋಯಿಸನು ಸುಮತಿಗೆ ತೋರಿಸುತಾ ಅವುಗಳ ಹೆಸರುಗಳನ್ನೂ ಗುಣಗಳನ್ನೂ ಅವನಿಗೆ ಹೇಳಿಕೊಡುತಾ ಹೋದನು. ಹಾಗೆಯೇ ಹೋಗುತಾ ದಾರಿಯಲ್ಲಿ ಒಂದು ಬೇಲಿಯ ಹತ್ತಿರ ಬೆಳೆದಿದ್ದ ಒಂದು ಸಣ್ಣ ಗಿಡವನ್ನು ಸುಮತಿಯು ಕಿತ್ತು ತಂದು-ಜೋಯಿಸರೆ, ಈ ಗಿಡ ಸಣ್ಣಗಿದೆ, ಮೂಸಿನೋಡಿದರೆ ಸುವಾಸನೆಯಾಗಿದೆ, ಇದನ್ನು ಬಾಯಿಗೆ ಹಾಕಿಕೊಂಡು ತಿನ್ನಬಹುದೇ? ಎಂದು ಕೇಳಿದನು. ಅದಕ್ಕೆ ಉಪಾಧ್ಯಾಯನು-ಮಗು, ನಿನ್ನ ಪುಣ್ಯ ಚೆನ್ನಾಗಿತ್ತು; ನೀನು ಬಾಯಿಗೆ ಹಾಕಿಕೊಳ್ಳುವುದಕ್ಕೆ ಮುಂಚೆ ನನ್ನನ್ನು ಕೇಳಿದ್ದು ಒಳ್ಳೇದಾಯಿತು. ಹಾಗಿಲ್ಲದೆ ನೀನು ಬಾಯಿಗೆ ಹಾಕಿಕೊಂಡಿದ್ದರೆ ವಿಶೇಷವಾಗಿ ಹೊಟ್ಟೆ ತೊಳಸಿ ನಿನಗೆ ವಮನವಾಗುತಿತ್ತು, ತಲೆ ಸುತ್ತುತಿತ್ತು. ಇದು ಕಾಡ ಸಬಸಿಗೆಗಿಡ, ಅತ್ಯಂತ ಪಿತ್ತಕಾರಿ; ಕಳ್ಳೀಗಿಡದ ಬುಡದಲ್ಲಿ ಹುಟ್ಟಿದ್ದ ಕಾರಣ ಅದರ ವಿಷವೂ ಈ ಸೊಪ್ಪಿಗೆ ವ್ಯಾಪನೆಯಾಗಿರುವುದು, ಎಂದು ಹೇಳಿದನು. ಅದಕ್ಕೆ ಸುಮತಿಯು—ಪಂತರೆ, ಪದಾರ್ಥದ ಗುಣ ಇಂಥಾದ್ದೆಂದು ತಿಳಿಯದೆ ನಾನು ಯಾವುದನ್ನೂ ತಿನ್ನುವುದಿಲ್ಲ; ನನಗೆ ಆ ಅಭ್ಯಾಸವೇ ಇಲ್ಲ. ತಾವು ದಯಮಾಡಿ ನನಗೆ ಹೇಳಿಕೊಟ್ಟರೆ ಹಸುರುಗಳ ಹೆಸರನ್ನೂ ಗುಣವನ್ನೂ ಚೆನ್ನಾಗಿ ಜಾಗ್ರತೆಯಿಂದ ತಿಳಿದುಕೊಳ್ಳುತೇನೆ, ಎಂದು ವಿನಯವಾಗಿ ಹೇಳಿದನು.

ತರುವಾಯ ಅವರಿಬ್ಬರೂ ಮನೇಕಡೆಗೆ ತಿರುಗಿದರು. ದಾರಿಯಲ್ಲಿ ಸುಮತಿಯು ಬರುತಾ ಇರುವಾಗ ನೆಲದಮೇಲೆ ಒಂದು ದೊಡ್ಡ ಹದ್ದು ಕೂತಿತ್ತು. ಅದು ತನ್ನ ಕಾಲಿನಲ್ಲಿ ಏನನ್ನೋ ಮೆಟ್ಟಿಕೊಂಡಿತ್ತು. ಆ ಬೀಳನ್ನು ಹದ್ದು ತನ್ನ ಕೊಕ್ಕಿನಿಂದ ಕುಕ್ಕುವ ಸಮಯವಾಗಿತ್ತು. ಇದನ್ನು ಕಂಡು ಸುಮತಿಯು ಅಬ್ಬರಿಸುತಾ ಆಕಡೆ ಓಡಿಹೋದನು. ಆ ಹದ್ದು ತನ್ನ ಕಾಲಿನಲ್ಲಿ ಮೆಟ್ಟಿಕೊಂಡಿದ್ದದನ್ನು ಅಲ್ಲಿಯೇ ಬಿಟ್ಟು

ಹಾರಿ ಹೋಯಿತು. ಅದು ಕೆಳಗೆ ಬಿಟ್ಟುಹೋದ್ದು ಒಂದು ಗಿಣೀ ಮರಿಯಾಗಿತ್ತು. ಅದಕ್ಕೆ ಗಾಯವೇನೋ ಆಗಿತ್ತು, ಪ್ರಾಣಹೋಗಿರ ಲಿಲ್ಲ. ಆಗ ಸುಮತಿಯು—ಜೋಯಿಸರೆ, ಆ ಕೆಟ್ಟಹದ್ದು ಈ ಪುಟ್ಟ ಗಿಣಿಗೆ ಅರ್ಧ ಜೀವಮಾಡಿತು. ಅದರ ಮೈಯಿಂದ ರಕ್ತ ಸುರಿಯುತಿದೆ; ರೆಕ್ಕೆ ನೇತಾಡುತಿದೆ. ಅದನ್ನು ನನ್ನ ಎದೆಗೆ ಅವಿಚಿಕೊಳ್ಳುತೇನೆ, ಬೆಚ್ಚಗಾಗಿ ಚೇತರಿಸಿಕೊಳ್ಳಲಿ. ಮನೆಗೆ ತೆಗೆದುಕೊಂಡು ಹೋಗೋಣ. ಅದಕ್ಕೆ ತ್ರಾಣ ಬರುವತನಕ ನನ್ನ ಎಡೇ ಅನ್ನದಲ್ಲಿ ಅದಕ್ಕೂ ಸ್ವಲ್ಪ ಹಾಕುತೇನೆ, ಎಂದನು.

ಅವರು ಮನೆಗೆ ಬಂದಕೂಡಲೆ ಸುಮತಿಯು ಮೊದಲು ಆ ಗಿಣೀ ಮರಿಯನ್ನು ಜೋಪಾನಮಾಡಿ, ಒಂದು ಕುಕ್ಕೆಯಲ್ಲಿ ಮೆತ್ತಗಿರುವ ಹಾಗೆ ಹುಲ್ಲನ್ನು ಹಾಕಿ ಒಂದು ಕರಟದಲ್ಲಿ ಸ್ವಲ್ಪ ಅನ್ನವನ್ನೂ ಇನ್ನೊಂದು ಕರಟದಲ್ಲಿ ನೀರನ್ನೂ ಇರಿಸಿ, ಅದರ ಮೇಲೆ ತೆಳ್ಳಗಿರುವ ಬಟ್ಟೆಯನ್ನು ಮುಚ್ಚಿದನು. ತರುವಾಯ ರಾಮುಜೋಯಿಸನೂ ಸುಮತಿಯೂ ಊಟಕ್ಕೆ ಹೊರಟು ಹೋದರು.

ಇತ್ತ ಮದನ ಕುಮಾರನಿಗೆ ಅವನ ಕೋರಿಕೆಯಂತೆ ನಡೆಯದೇ ಹೋದ್ದರಿಂದ ಬಹುವಾಗಿ ಅಸಮಾಧಾನವಾಯಿತು; ಹಗಲೆಲ್ಲಾ ಅಲ್ಲಿ ಇಲ್ಲಿ ಸುತ್ತಾಡುತಾ ಇದ್ದನು. ಕಡೆಗೆ ಜೋಯಿಸರ ಹಿಂದೆಯೇ ಮನೆಗೆ ಬಂದನು. ಬಹಳ ಹಸಿವಾಗಿತ್ತು, ಎಲ್ಲರ ಸಂಗಡ ತಾನೂ ಊಟಕ್ಕೆ ಸಿದ್ಧಮಾಡಿಕೊಂಡನು. ರಾಮುಜೋಯಿಸನು ಇದನ್ನು ಕಂಡು—ರಾಜ ಕುಮಾರರೆ, ತಾವು ಊಟಕ್ಕೆ ಸಿದ್ಧವಾಗಕೂಡದು, ತಮಗೆ ಇಲ್ಲಿ ಎಡೆ ಮಾಡಿ ಬಡಿಸುವವರು ಯಾರೂ ಇಲ್ಲ, ಮೈಬಗ್ಗಿ ಕೆಲಸಮಾಡುವುದಕ್ಕೆ ತಾವು ರಾಜಕುಮಾರರು, ತಮ್ಮ ಪದವಿ ಅತಿ ದೊಡ್ಡದು. ನಮ ಗೇನೋ ಹಾಗಲ್ಲ. ನಾವು ರಟ್ಟೆ ಮುರಿಯ ಗೆಯ್ಯತಕ್ಕವರು. ಆದರೆ ಕೆಲಸಕ್ಕೆ ಪಾಲುಮಾರತಕ್ಕವರಿಗೋಸ್ಕರ ಗೆಯ್ಯಲು ನಮಗೆ ಇಷ್ಟವಿಲ್ಲ, ಎಂದು ಹೇಳಿದನು.

ಈ ಮಾತನ್ನು ಕೇಳಿ ಮದನನು ಒಂದು ಮೂಲೇ ಹತ್ತಿರಕ್ಕೆ ಹೋಗಿ ಎರಡು ಕೈಗಳಲ್ಲಿಯೂ ತನ್ನ ಮುಖವನ್ನು ಮುಚ್ಚಿಕೊಂಡು

ಗೋಳೋ ಎಂದು ಅತ್ತನು. ಈ ಅಳುವು ತನ್ನನ್ನು ಇಲ್ಲಿ ಒಬ್ಬರೂ ಲಕ್ಷ್ಯಮಾಡುವುದಿಲ್ಲವಲ್ಲಾ ಎಂಬ ವ್ಯಸನದಿಂದಲೇ ಹೊರತು, ಕೋಪ ದಿಂದ ಹುಟ್ಟಿದ್ದಲ್ಲ.

ತನ್ನ ಸ್ನೇಹಿತನಾದ ಆ ಚಿಕ್ಕ ಹುಡುಗ ಅಷ್ಟೊಂದು ಅಳುತಿರುವು ದನ್ನು ಕಂಡು ಸುಮತಿಯ ಮನಸ್ಸು ತಡೆಯಲಾರದೆ ಹೋಯಿತು; ಅವನಿಗೂ ದುಃಖಬರುವ ಹಾಗಾಯಿತು. ಕಣ್ಣಿನಲ್ಲಿ ಸ್ವಲ್ಪ ನೀರನ್ನು ತಂದುಕೊಂಡು, ಕತ್ತೆತ್ತಿ ಜೋಯಿಸರ ಮುಖವನ್ನು ನೋಡುತಾ— ನನ್ನ ಎಡೆಗೆ ಇಕ್ಕಿದ ಅನ್ನವನ್ನು ನಾನು ಬೇಕಾದ ಹಾಗೆ ವಿನಯೋಗಿಸ ಬಹುದೆ? ಅಪ್ಪಣೆಯಾಗಬೇಕು ಎಂದನು. ಅದಕ್ಕೆ ಜೋಯಿಸನು— ಮಗು, ನೀನು ಬೇಕಾದಹಾಗೆ ವಿನಿಯೋಗಿಸಿಕೊಳ್ಳಬಹುದಪ್ಪ ಎಂದನು. ಹಾಗಾದರೆ ಎಂದು ಸುಮತಿಯು ಮೇಲಕ್ಕೆ ಎದ್ದು-ಬಡಿಸಿರುವ ನನ್ನ ಎಲೆಯನ್ನು ತಂದು ಮದನನಿಗೆ ಇರಿಸುತೇನೆ; ಪಾಪ, ಬೆಳಗ್ಗೆ ಹೊತ್ತಿಗೆ ಮುಂಚೆ ನಮ್ಮ ಸಂಗಡ ಎರಡು ತುತ್ತು ಅನ್ನ ಬಾಯಿಗೆ ಹಾಕಿಕೊಂಡು ಜಾಗ್ರತೆಯಾಗಿ ಎದ್ದ; ಆಗಿನಿಂದ ಇದುವರೆಗೆ ಅವ ಏನನ್ನೂ ತಿನ್ನಲಿಲ್ಲ. ಅವನಿಗೆ ಇಷ್ಟು ಹೊತ್ತು ಹಸಿದುಕೊಂಡು ಇದ್ದ ಅಭ್ಯಾಸವಿಲ್ಲ. ನನ ಗಿಂತಲೂ ಅವನಿಗೆ ಕ್ಷುತ್ತುಹೆಚ್ಚಾಗಿರಬೇಕು ಎಂದನು; ಕೂಡಲೆ ಬಡಿ ಸಿದ್ದ ತನ್ನ ಎಡೆಯನ್ನು ಮದನ ಕೂತಿದ್ದ ಮೂಲೆಗೆ ತೆಗೆದುಕೊಂಡು ಹೋಗಿ ಅವನ ಮುಂದೆ ಇರಿಸಿದನು. ಕೂಡಲೆ ಮದನನು ಆ ಎಲೆ ಯಲ್ಲಿಕ್ಕಿದ್ದ ಅನ್ನವನ್ನು ಕತ್ತೆತ್ತಿ ಅತ್ತಿತ್ತ ನೋಡದೆ ಸುಮ್ಮನೆ ಉಂಡನು. ಅದನ್ನು ನೋಡಿ ಜೋಯಿಸನು-ಹೀಗೋ! ಸರಿ, ತಿಳಿಯಿತು. ದೊರೆ ಮಕ್ಕಳು ತಮಗೂ ಪ್ರಯೋಜನವಿಲ್ಲದೇಲೂ ಇತರರಿಗೂ ಪ್ರಯೋಜನ ವಿಲ್ಲದೇಲೂ ಇರುವಂಥಾ ಪದವಿಯುಳ್ಳವರು. ಮೇಲೂ, ಇತರರು ಕಷ್ಟಪಟ್ಟು ಸಂಪಾದಿಸಿದ ಅನ್ನವನ್ನು ತಿನ್ನುವ ಪದವಿಯೇ ಇವರ ದೊಡ್ಡಪದವಿ, ಎಂದನು.

ಮಾರನೇದಿನ ರಾಮುಜೋಯಿಸನೂ ಸುಮತಿಯೂ ಎಂದಿನಂತೆ ಸ್ನಾನಾದಿಗಳನ್ನು ತೀರಿಸಿಕೊಂಡು ತೋಟದಲ್ಲಿ ಕೆಲಸ ಮಾಡುವುದಕ್ಕೆ ಹೋದರು. ಅವರು ಕೆಲಸಕ್ಕೆ ಇನ್ನೇನು ಮೊದಲು ಮಾಡಿದರು.

ಮಾಡಲಿಲ್ಲ ಎನ್ನುವಷ್ಟರಲ್ಲಿಯೇ ಮದನ ಕುಮಾರನು ಇವರ ಸಮೀಪಕ್ಕೆ ಓಡಿಬಂದು —ಜೋಯಿಸರೆ, ನನಗೂ ಒಂದು ಕಳಿಕೊಕ್ಕೆ ಬೇಕು, ಎಂದು ತಾನಾಗಿಯೇ ಕೇಳಿದನು. ಜೋಯಿಸನು ಅದನ್ನು ತೆಗೆದು ಕೊಟ್ಟನು. ಮದನನು ಕಳಿಕೊಕ್ಕೆಯನ್ನು ತೆಗೆದುಕೊಂಡು ಅವರ ಹಾಗೆಯೇ ಅಗೆಯಲಾರಂಭಿಸಿದನು ; ಎಂದಿಗೂ ಅಗೆದು ಅಭ್ಯಾಸವೇ ಇಲ್ಲದಕಾರಣ, ಆಯುಧವನ್ನು ತಗಲಿಸಿಕೊಂಡು ಕೈಕಾಲುಗಳನ್ನು ಗಾಯಮಾಡಿಕೊಂಡನು. ಇದನ್ನು ಕಂಡು ಜೋಯಿಸನು ತನ್ನ ಗುದ್ದಲಿಯನ್ನು ಬಿಟ್ಟು ಮದನನ ಸಮೀಪಕ್ಕೆ ಹೋಗಿ ಕಳಿಕೊಕ್ಕೆಯನ್ನು ಹಿಡಿಯುವುದು ಹೀಗೆ, ಅಗೆಯುವುದು ಹೀಗೆ, ಎಂದು ಆ ಹುಡುಗನಿಗೆ ತೋರಿಸಿಕೊಟ್ಟನು. ಮದನನು ಸ್ವಲ್ಪ ಹೊತ್ತಿನಲ್ಲಿ ಅಗೆಯುವುದಕ್ಕೆ ಚೆನ್ನಾಗಿ ಕಲಿತುಕೊಂಡು ಬಹು ಸಂತೋಷವಾಗಿ ಕೆಲಸಮಾಡಿದನು. ಕೆಲಸ ಮುಗಿದಮೇಲೆ ಆ ಮೂರು ಜನರೂ ಗುಡಿಲಿಗೆ ಹೋದರು. ಕುಯಿದುತಂದು ಅಲ್ಲಿರಿಸಿದ್ದ ಹಂಣುಗಳನ್ನು ಈಚೆಗೆ ತೆಗೆದು ಜೋಯಿಸನು ಕೊಳ್ಳೆಂದು ಮದನನಿಗೂ ಕೊಡುವುದಕ್ಕೆ ಹೋಗಲು, ಅರಸು ಮಗನಿಗೆ ಅತ್ಯಂತ ಆನಂದವಾಯಿತು; ಅವುಗಳನ್ನು ತಿಂದನು. ಕೆಲಸ ಮಾಡಿ ಶ್ರಮಪಟ್ಟಿದ್ದಕಾರಣ ಇವನಿಗೆ ಹಸಿವು ಬಹುವಾಗಿತ್ತು. ಅದರಿಂದ ಆ ಹಂಣುಗಳು ಬಹುರುಚಿಯಾಗಿ ತೋರಿದವು.

ಅವರು ಮೂರುಜನರೂ ಫಲಾಹಾರವನ್ನು ಮಾಡಿದತರುವಾಯ, ರಾಮಜೋಯಿಸನು ಗೂಡಿನಲ್ಲಿದ್ದ ದಫ್ತರವನ್ನು ತೆಗೆದುಕೊಂಡು, ಅದರಲ್ಲಿದ್ದ ಒಂದು ವಹಿಯನ್ನು ತೆಗೆದು—ಅಯ್ಯಾ ಮದನಕುಮಾರ, ಇದರಲ್ಲಿರುವ ಒಂದು ಕಥೆಯನ್ನು ಓದೀಯಾ? ಎಂದು ಕೇಳಿದನು. ದೊರೆಮಗನು ತಲೆಯನ್ನು ಕೆಳಕ್ಕೆ ಬಗ್ಗಿಸಿ, ತನಗೆ ಓದು ಬರಹ ಬಾರದೆಂದು ನಾಚಿಕೆಯೊಡನೆ ಹೇಳಿದನು. ಅದಕ್ಕೆ ಜೋಯಿಸನು–ಅಯ್ಯೋ! ಈ ಮಾತ ಕೇಳಿ ನನಗೆ ಬಹು ಸಂಕಟವಾಗುತಿದೆ, ಓದುಬರಹವನ್ನು ಕಲಿತುದರಿಂದ ಉಂಟಾಗುವ ಸಂತೋಷ ನಿನಗೆ ಇಲ್ಲವಾಯಿತು. ಒಳ್ಳೇದಾಯಿತು. ಸುಮತಿ ಓದುತಾನೆ, ನೀನು ಕೇಳು ಎಂದನು. ಅದೇ ಪ್ರಕಾರ ಸುಮತಿಯು ಆ ವಹಿಯನ್ನು ತೆಗೆದುಕೊಂಡು ಕಥೆಯನ್ನು ಓದಿದ್ದು ಹೇಗೆಂದರೆ :

## ಅರಸು, ಮೇದರವನು

ಮಧುಪುರಿ ಎಂಬ ಪಟ್ಟಣದಲ್ಲಿ ಮಧುವರ್ಮನೆಂಬ ಒಬ್ಬ ದೊರೆ ಮಗನಿದ್ದನು. ಇವನಿಗೆ ಆ ಊರ ದೊರೆಮಗಳನ್ನು ಕೊಟ್ಟು ಮದುವೆ ಯಾಗಿತ್ತು. ಇವನು ನಿತ್ಯವೂ ಕುದುರೇ ಸವಾರಿ ಮಾಡುವುದು, ತಿಂಡಿ ತಿನ್ನುವುದು, ನಿದ್ರೆ ಮಾಡುವುದು, ಯಾವಾಗಲೂ ಆನಂದಪಡುವ ಕೆಲಸದಲ್ಲಿ ಕಾಲವನ್ನು ಕಳೆಯುವುದು ಹೀಗೆ ಮಾಡುತಿದ್ದನು. ಇವನ ಸಮೀಪದಲ್ಲಿ ಅನೇಕಜನ ಓಲೆಕಾರರು ಸೊಂಟ ಸುತ್ತಿಕೊಂಡು ಕಾದಿರು ತಿದ್ದರು. ಈ ಆಳುಗಳು ದೊರೆಮಗನಿಗೆ ವಿಶೇಷವಾದ ಮರ್ಯಾದೆಯನ್ನು ತೋರಿಸುತಾ ಉಪಚಾರವನ್ನು ಮಾಡುತಾ ಇದ್ದರು; ಅವನು ಯಾವ ಮಾತನ್ನು ಹೇಳಿದರೂ ಕೂಡಲೇ ಅದನ್ನು ಜರುಗಿಸುತಿದ್ದರು. ಇದು ಒಳ್ಳೇದು, ಇದು ಕೆಟ್ಟದು, ಎಂದು ಅವ ಅರಿಯಲೇ ಅರಿಯ. ಅದನ್ನು ಯಾರಿಂದಲೂ ಕೇಳಿದ್ದೂ ಇಲ್ಲ. ಇವನು ಅತಿ ಅಹಂಕಾರಿಯಾಗಿ ತನ್ನ ಬುದ್ಧಿಗೆ ತೋರಿದಹಾಗೆಲ್ಲಾ ಐಲಾಟವನ್ನು ಆಡುತಾ, ಲೋಕ ಕ್ಕೆಲ್ಲಾ ತಾನೇ ಅಧಿಪತಿ ಎಂತಲೂ, ಬಡವರೆಲ್ಲಾ ಹುಟ್ಟಿರುವುದು ತನ್ನ ಸೇವೆಗೆಂತಲೂ, ಊಹಿಸಿಕೊಂಡಿದ್ದನು.

ಹೀಗಿರುವಲ್ಲಿ ಈ ದೊರೆಮಗನ ಅರಮನೆಗೆ ಸಮೀಪವಾಗಿ ಒಬ್ಬ ಮೇದರವನು ಸಾಧಾರಣವಾದ ಒಂದು ಗುಡಿಸಲನ್ನು ಕಟ್ಟಿಕೊಂಡು ವಾಸವಾಗಿರುತಿದ್ದನು. ಈ ಮೇದರವನು ಬಡವನಾದರೂ ಪ್ರಾಮಾ ಣಿಕನಾಗಿ, ಒಬ್ಬರ ತಂಟೆಗೂ ಹೋಗದೆ, ತನ್ನ ಪಾಡಿಗೆ ತಾನು ಬಿದಿರ ಕುಕ್ಕೆ, ಚಾಪೆ, ಮರ ಮೊದಲಾದ್ದನ್ನೂ, ಈಚಲು ಕುಕ್ಕೆಗಳನ್ನೂ, ಹೆಣೆದು ಮಾರಿಕೊಂಡು ಜೀವನ ಮಾಡುತಿದ್ದನು. ಇವನು ಬೆಳಗಿ ನಿಂದ ಸಾಯಂಕಾಲ ಕಣ್ಣಿಗೆ ನಿದ್ರೆ ಬರುವ ತನಕ ಕುಕ್ಕೇ ಹೆಣೆದು ಕೆಲಸ ಮಾಡಿದರೂ ಇವನಿಗೂ ಇವನ ಹೆಂಡತಿ ಮಕ್ಕಳಿಗೂ ಹೊಟ್ಟೆ ತುಂಬಾ ಅನ್ನ ಸಿಕ್ಕುತಿರಲಿಲ್ಲ; ಬೆರೆಕೆ ಸೊಪ್ಪಿನ ಉದಕ, ರಾಗೀಹಿಟ್ಟು ಇಷ್ಟು ಹೊರತು ಮತ್ತೆಯಾವ ಭಕ್ಷ್ಯಭೋಜ್ಯಗಳನ್ನೂ ಕಂಡವನಲ್ಲ; ಇವನು ಕುಕ್ಕೇ ಹೆಣೆಯುವುದಕ್ಕಾಗಿ ಹಾಕಿದ್ದ ಸೀಬು ಇವನಿಗೆ ಹಾಸುಗೆ ಯಾಗಿತ್ತು. ಇಂಥಾ ಬಡತನವನ್ನು ಅನುಭವಿಸುತಿದ್ದಾಗ್ಯೂ, ದೇವರು

ಕೊಟ್ಟದ್ದರಲ್ಲಿ ಸಂತುಷ್ಟನಾಗಿ ಸಂತೋಷವಾಗಿಯೇ ಕಾಲವನ್ನು ಕಳೆಯುತಿದ್ದನು. ಹಗಲೆಲ್ಲಾ ಕೆಲಸಾ ಮಾಡಿ ಮಾಡಿ ದಣಿಯುತಿದ್ದ ಕಾರಣ, ಹೊಟ್ಟೆಯಲ್ಲಿ ಚುರಗುಟ್ಟಿ ಹಸಿವಾಗಿ ಎಂಥಾ ಒಣಕಲ ಹಿಟ್ಟಾದರೂ ರುಚಿಯಲ್ಲಿ ಇವನ ಭಾಗಕ್ಕೆ ಮೃಷ್ಟಾನ್ನವಾಗಿರುತಿತ್ತು. ನೆಲದ ಮೇಲೆ ಮಲಗಿಕೊಂಡರೂ ಮೈಮರೆತು ನಿದ್ರೆ ಬರುತಿತ್ತು. ಇದೂ ಅಲ್ಲದೆ ಆ ಮೇದರವನು ಬಹು ಒಳ್ಳೆಯವನಾಗಿಯೂ ಪ್ರಾಮಾಣಿಕನಾಗಿಯೂ ಇದ್ದನು. ಅವನು ವ್ಯಾಪಾರದಲ್ಲಿ ಬಹು ನಿರ್ಣಯವಾಗಿ, ಯಾವಾಗಲೂ ನಿಜವನ್ನೇ ಹೇಳುತಾ ಇದ್ದನು. ಈ ಕಾರಣದಿಂದ ನೆರೆಹೊರೆಯವರೆಲ್ಲರೂ ಇವ ಸತ್ಯವಂತನೆಂದು ಮರ್ಯಾದೆಯಿಂದ ಕಾಣುತಿದ್ದರು; ಅವರ ಜಾತಿ ಪಂಚಾಯಿತಿಯಲ್ಲಿ ಯಾವುದಕ್ಕೂ ಇವನನ್ನು ಕರೆಯುತಿದ್ದರು.

ಹೀಗಿರುವಲ್ಲಿ ಮೇಲೆ ಕಂಡ ದೊರೆಯ ಅಳಿಯನಾದ ಅರಸುಮಗನು ಎಂಥಾ ಮೃದುವಾದ ಮೆತ್ತೆಯ ಮೇಲೆ ಮಲಗಿಕೊಂಡಾಗ್ಯೂ, ಮತ್ತೆ ಯಾವ ಉಪಚಾರಗಳನ್ನು ಮಾಡಿಕೊಂಡಾಗ್ಯೂ ನಿದ್ರೆ ಬರುತಿರಲಿಲ್ಲ. ಇವನು ಹಗಲೆಲ್ಲಾ ಜೂಗರಿಸುತಾ ಯಾವ ಕೆಲಸವನ್ನೂ ಮಾಡದೆ ಜಡನಾಗಿ ಕೂತಿರುತಿದ್ದ ಕಾರಣ ಹೀಗಾಗುತಿತ್ತು. ಆ ವೂರ ದೊರೆಗೆ ಆತ ಅಳಿಯ; ಖಾಸ ಪಂಙ್ತಿಯಲ್ಲಿ ಈತನಿಗೆ ಚೊಕ್ಕ ಭೋಜನವಾಗಿ ಇವನು ಹಾಲುತುಪ್ಪದಲ್ಲಿ ಕೈ ತೊಳೆಯುತಿದ್ದನು; ಬೇಕಾದ ಭಕ್ಷ್ಯಭೋಜ್ಯಗಳು ಅರಮನೆಯಿಂದ ಬೆಂಡಿನ ಕುಕ್ಕೆಗಳಲ್ಲಿಯೂ ದೊಡ್ಡ ಪರಾತಗಳಲ್ಲಿಯೂ ಅಡಕಿ ಅಳಿಯಂದಿರ ಮನೆಗೆ ಬರುತಾಇತ್ತು. ಇದಕ್ಕೆ ಕೊನೆಮಿತಿಯೇ ಇಲ್ಲ. ಏನಾದರೆ ಏನು? ಎಂಥಾ ತಿಂಡಿ ಎಷ್ಟುತಾನೇ ಇತ್ತು, ಪ್ರಯೋಜನವೇನು? ಇವನಿಗೆ ಏನು ತಿಂದರೂ ರುಚಿಯೇ ತೋರುತಿರಲಿಲ್ಲ. ಯಾವುದೂ ಬೇಕಾಗಿರಲಿಲ್ಲ. ತನಗೆ ಚೆನ್ನಾಗಿ ಹೊಟ್ಟೆಯಲ್ಲಿ ಹಸಿವು ಹುಟ್ಟಿ ಆಹಾರದ ಮೇಲೆ ಅಪೇಕ್ಷೆಯಾಗದೇಲೇ ಮೇಲೆ ಮೇಲೆ ಬಂದ ತಿಂಡಿಯನ್ನು ಮೇಲೆ ಮೇಲೆಯೇ ಬಾಯಿಗೆ ಗಿಡಿದುಕೊಳ್ಳುತಿದ್ದ ಕಾರಣ, ಇವನಿಗೆ ಯಾತರಲ್ಲಿಯೂ ರುಚಿ ತೋರುಲಿಲ್ಲ. ದೊರೇ ಅಳಿಯನಾದ್ದರಿಂದ ವಿಶೇಷ ಬಿಗುಮಾನವಾಗಿ ಕೂತ

ಕಡೆಯಲ್ಲಿಯೇ ವಿಸರ್ಜನೆಗಳನ್ನು ಮಾಡಿಕೊಳ್ಳುತಾ, ಹೊರಗಿನ ಗಾಳಿ ಸೋಕಿದರೆ ತನ್ನ ಮುಖ ಎಲ್ಲಿ ಕಂದುವುದೋ ತನ್ನನ್ನು ಶೃಂಗಾರ ಪುರುಷನಲ್ಲವೆಂದು ಎಲ್ಲಿ ಯಾರು ಹೇಳಿಯಾರೋ ಎಂದು ಅವನು ಈಚೆಗೆ ತಲೆಯನ್ನೇ ಹಾಕುತಿರಲಿಲ್ಲ. ಇವನ ಜಡತ್ವದಿಂದಲೂ ತಿಂಡಿಪೋತತನದಿಂದಲೂ, ಇವನಿಗೆ ಯಾವಾಗಲೂ ಏನಾದರೂ ಜಾಡ್ಯವಿರುತಲೇ ಇತ್ತು. ಇವನಿಂದ ಯಾರಿಗೂ ಯಾವ ಉಪಕಾರವೂ ಇಲ್ಲದೇ ಇದ್ದಕಾರಣ, ಇವನಿಗೆ ಯಾರೂ ಸ್ನೇಹಿತರೇ ಇರಲಿಲ್ಲ. ಇವನ ಮನೇ ಚಾಕರರು ಸಹಿತವಾಗಿ ಇವನ ಹಿಂದೆ ವಿಶೇಷವಾಗಿ ದೂಷಿಸುತಿದ್ದರು. ಇವನು ನೆರೆಹೊರೆಯವರಿಗೆ ಏನಾದರೂ ತೊಂದರೆಯನ್ನು ಕೊಡುತಲೇ ಇದ್ದ ಕಾರಣ, ಅವರು ಇವನ ಮೇಲೆ ದ್ವೇಷ ಮಾಡುತಿದ್ದರು. ಇವನು ಯಾವಾಗಲೂ ಸಿಡುಕಿನಿಂದ ಮುಖವನ್ನು ಗಂಟು ಹಾಕಿಕೊಂಡು, ದುಮುದುಮುಗುಟ್ಟುತ ಇದ್ದನು; ಮೇಲೂ, ನಗುನಗುತಾ ಸಂತೋಷವಾಗಿದ್ದವರನ್ನು ಕಂಡರೆ ಇವನು ಕಿಡಿಕಿಡಿಯಾಗುತಿದ್ದನು. ಇವನು ಅಪೂರ್ವವಾಗಿ ಹೊರಕ್ಕೆ ಹೊರಟಾಗ, ಇದ್ದಬದ್ದ ಒಡವೆಗಳನ್ನೆಲ್ಲಾ ಹೆಂಗಸರಹಾಗೆ ಹೇರಿಕೊಂಡು ನಿರಾಜೀ ಬಟ್ಟೆಗಳನ್ನು ಹಾಕಿಕೊಂಡು ಹುಬ್ಬ ತಿದ್ದಿಸಿಕೊಳ್ಳುವುದೋ, ಕುಡಿಮೀಸೆಯನ್ನು ನೆಟ್ಟಗೆ ತಿರುಗಿಸಿ ನಿಲ್ಲಿಸಿಕೊಳ್ಳುವುದೋ, ಕನ್ನಡಿಯನ್ನು ನೋಡುತಾ ಮುಖವನ್ನು ಒರಸಿ ಒರಸಿ ಚುಕ್ಕೀ ಬಟ್ಟನ್ನು ಇಟ್ಟುಕೊಳ್ಳುವುದೋ, ಎಲೆ ಅಡಕೆಯನ್ನು ಅಗಿಯುತಾ ತನ್ನನ್ನು ಇತರರು ನೋಡುತಾರೋ ಇಲ್ಲವೋ ಎಂದು ತನ್ನ ದೊಡ್ಡದೊಡ್ಡ ಕಣ್ಣುಗಳನ್ನು ಅತ್ತಿತ್ತ ಗರಗರನೆ ತಿರುಗಿಸಿ ನೋಡುವುದೋ, ವಿಶೇಷವಾಗಿ ಬೆಳೆದಿರುವ ಹೊಟ್ಟೆಯನ್ನು ಜಗ್ಗುಹಾಕುತಾ ಕಾಲಮೇಲೆ ಕಾಲ ಹಾಕಿಕೊಂಡು ನಡೆಯುವುದೋ, ಹೀಗೆಲ್ಲಾ ವಯ್ಯಾರದಿಂದ ಬಂದು ಮೇನಾದಲ್ಲಿ ಕೂತು ಹೊರಕ್ಕೆ ಹೊರಡುತಿದ್ದನು. ಇವನ ಮೇನವನ್ನು ಬೋಯಿಗಳು, ಹೊತ್ತುಕೊಂಡು " ಹ್ಣ್ಣಾ " " ಹ್ಣು " ಎಂದು ತಾವು ವಾಡಿಕೆಯಾಗಿ ಹೇಳುವ ಬೆಸ್ತರ ಸುಮರ್ಾಪದವನ್ನು ಹೇಳಿಕೊಂಡು, ಮೇಲೆ ಹೇಳಿದ ಮೇದರವನ ಮನೇ ಮುಂದುಗಡೆ ಹೋಗುತಿದ್ದರು. ಈ ಮೇದರವನು ಎಂದಿನಂತೆ ಸಂತೋಷವಾಗಿ

ಬೇಕಾದ ಹಾಡನ್ನು ರಾಗವಾಗಿ ಹೇಳುತಾ ತನ್ನ ಹೆಣಿಗೇ ಕೆಲಸವನ್ನು ತಾನು ಮಾಡಿಕೊಳ್ಳುತಾ ಲಕ್ಷ್ಯವಿಲ್ಲದೆ ಕೂತಿರುತಿದ್ದನು. ಇವನನ್ನು ಕಂಡಾಗೆಲ್ಲಾ ದೊರೇ ಅಳಿಯನಿಗೆ ಕೋಪ ಬರುತಿತ್ತು. ಈ ಅರಸು— ಇದೇನು ಆಶ್ಚರ್ಯ, ಈ ಕೆಲಸಕ್ಕೆ ಬಾರದ ಕೀಳು ಜಾತಿಯವನು, ಹಗಲೆಲ್ಲಾ ದುಡಿದು ಹಾಗದ ಕಾಸನ್ನು ಸಂಪಾದಿಸಲಾರದ ಮೇದರವನು, ಈ ಕಳ್ಳಗೊರವು ಒಣಕಲ ಹಿಟ್ಟ ಕಡಿದುಕೊಂಡು ತಿಪ್ಪೇಮೇಲೆ ಬಿದ್ದಿರತಕ್ಕ ಈ ಅಪ್ರಯೋಜಕ, ಯಾವಾಗಲೂ ಸೌಖ್ಯವಾಗಿ ಸಂತೋಷಚಿತ್ತನಾಗಿರುವುದಕ್ಕೆ ಕಾರಣವೇನು? ನಾನು ದೊರೇ ಅಳಿಯ, ಬೇಕಾದ ಐಶ್ವರ್ಯವಿದೆ, ಇಂಥಾ ಅಣುಗಳು ಎಷ್ಟು ಕೋಟಿ ಆದರೆ ತಾನೆ ನನಗೆ ಸಮಾನವಾದಾವು? ಆದರೂ ನನ್ನಂಥಾವನಿಗೆ ಏನೋ ಮನೋವ್ಯಥೆ ತಗಲಿಕೊಂಡು, ಯಾವಾಗಲೂ ಏನಾದರೂ ಒಂದು ಬಗೇ ಜಾಡ್ಯದಲ್ಲಿ ನರಳುತ್ತಾ, ತಟಕ್ಕನೆ ಕಣ್ಣು ಮುಚ್ಚಿ ಒಂದು ದಿನವಾದರೂ ನಿದ್ರೆ ಮಾಡದೆ ನಾನು ಪೇಚಾಡುವುದಕ್ಕೆ ಕಾರಣವೇನು?—ಹೀಗೆ ತನ್ನ ಮನಸ್ಸಿನಲ್ಲಿ ಎಂದುಕೊಳ್ಳುತಿದ್ದನು. ಮೇದರವನನ್ನು ಕಂಡಾಗೆಲ್ಲಾ ಇಂಥಾ ಯೋಚನೆ ತೋರಿ ಅರಸನಿಗೆ ಆ ಬಡವನ ಮೇಲೆ ವಿಶೇಷವಾಗಿ ದ್ವೇಷ ಹುಟ್ಟಿತು. ತನಗೆ ಬಂದ ಕೋಪತಾಪಗಳು, ಕ್ರಮವಾಗಿಯೇ ಇರಲಿ ಅಕ್ರಮವಾಗಿಯೇ ಇರಲಿ, ಆ ತಾರತಮ್ಯವನ್ನೇ ಇವ ಅರಿತವನಲ್ಲ; ಅಂಥಾ ಅರಿಷಡ್ವರ್ಗಗಳನ್ನು ನಿಗ್ರಹಿಸಿಕೊಂಡ ಅಭ್ಯಾಸವೇ ಇವನಿಗಿಲ್ಲ. ಹೀಗಿರಲು, ಗುಬ್ಬೀಮೇಲೆ ಬ್ರಹ್ಮಾಸ್ತ್ರವನ್ನು ಹಾಕಿದರೆಂಬ ಗಾದೆಗೆ ಸರಿಯಾಗಿ, ಆ ಬಡವನಿಗೆ ತಕ್ಕ ಶಿಕ್ಷೆಯನ್ನು ಮಾಡಬೇಕೆಂದು ಅರಸುಮಗನು ನಿಶ್ಚಯಿಸಿಕೊಂಡನು. ಮೇದರವನು ಯಾವಾಗಲೂ ಸಂತೋಷಿಯಾಗಿದ್ದುದೇ ಅವನ ಅಪರಾಧ.

ಹೀಗಿರುವಲ್ಲಿ ಇಂಥಾ ದುರಭಿಪ್ರಾಯದಿಂದ ಒಂದು ದಿನ ಅರಸು ತನ್ನ ಆಳುಗಳನ್ನು ಕರೆದು, ಆ ಮೇದರವನು ಅವನ ಗುಡಿಸಿಲಿನ ಹತ್ತಿರ ಕಟ್ಟಿಹಾಕಿಕೊಂಡಿದ್ದ ಸೀಬಿನ ಪಿಂಡಿಗೆಲ್ಲಾ ಬೆಂಕೀ ಹತ್ತಿಸುವಂತೆ ಹೇಳಿದನು. ಸಮೀಪದಲ್ಲಿದ್ದ ಒಂದು ಕಟ್ಟೆಯಲ್ಲಿ ಬೆಳೆದಿದ್ದ ನೊದೇ ಹುಲ್ಲನ್ನು ಕಿತ್ತು ಈ ಮೇದರವನು ಮುಂದಲಿಗೆ ಮುಂತಾದ್ದನ್ನೂ

ಮಾಡಿ ಮಾಡಿ ಮಾರುತಿದ್ದನು; ಸ್ವಲ್ಪ ಒಣಗಿನಿಂತಿದ್ದ ಆ ನೊದೇ ಹುಲ್ಲಿಗೂ ಬೆಂಕಿ ಹಾಕುವಂತೆ ಅರಸಿನವರ ಅಪ್ಪಣೆಯಾಯಿತು. ಯಜಮಾನನ ಅಪ್ಪಣೆಯನ್ನು ಮೀರಲಾರದೆ ಆಳುಗಳು ಬೆಂಕಿಯನ್ನು ಹತ್ತಿಸಿದರು. ಮೇದರವನ ಸೀಬಿನ ಪಿಂಡಿಗಳೂ, ಕೆಲವು ಕುಕ್ಕೆಗಳೂ, ಈಚಲ ಕುಕ್ಕೆಗಳೂ, ಅದರ ಕಡ್ಡಿಗಳೂ, ಸಮೀಪದಲ್ಲಿದ್ದ ನೊದೇ ಹುಲ್ಲಿನ ಅಡುವೂ, ಇನ್ನೂ ಇತರ ತಯಾರಾದ ಸಾಮಾನುಗಳೂ ಸುಟ್ಟು ಬೂದಿಯಾದ್ದಲ್ಲದೆ, ಮೇದರವನ ಹುಲ್ಲುಮನೆಗೂ ಯಜ್ಞೇಶ್ವರ ಚೆನ್ನಾಗಿ ಪ್ರವೇಶಮಾಡಿದನು. ಆಗ ಮೇದರವನ ಬಟ್ಟೆಬರೆ ಎಲ್ಲಾ ಸುಟ್ಟುಹೋಯಿತು. ಅವನ ಹೆಂಡತಿಯ ಮೈ ಅರ್ಧ ಬೆಂದುಹೋಯಿತು; ಎಳೇ ಮಗುವಿನ ಜೋಳನೇ ಬಟ್ಟೆಗೂ ಬೆಂಕಿ ಹತ್ತಿ ಮಗುವಿನ ದೇಹವೆಲ್ಲಾ ಬೆಂದುಹೋಯಿತು; ಅದರ ಪ್ರಾಣ ಉಳಿದದ್ದು ಮನುಷ್ಯ ಪ್ರಯತ್ನದಿಂದ ಅಲ್ಲ ಎನ್ನುವ ಮಟ್ಟಿಗೆ ಅಪಾಯವುಂಟಾಯಿತು.

ಆ ಬಡವನಿಗೆ ಆಧಾರವಾಗಿದ್ದ ಬಿದಿರಕಡ್ಡಿ, ಈಚಲಕಡ್ಡಿ, ಹುಲ್ಲು ಕಡ್ಡಿ ಇವೆಲ್ಲಾ ಉರಿದು ಬೂದಿಯಾದ್ದಕ್ಕೆ ಅವ ಪಟ್ಟ ಸಂಕಟವನ್ನು ಹೇಳಬೇಕೆ! ಅವನು ಐಶ್ವರ್ಯವಂತನ ಕಣ್ಣಿಗೆ ಬಿದ್ದುದೇ ಅವನ ತಪ್ಪಾಯಿತು. ಅದಕ್ಕಾಗಿ ಅವನಿಗೆ ತಕ್ಕ ಶಿಕ್ಷೆಯೂ ಆಯಿತು. ಐಶ್ವರ್ಯದ ಅಹಂಕಾರದ ಮುಂದೆ ಬಡತನದ ದೈನ್ಯ ಎಷ್ಟುತಾನೇ ಸಾಗೀತು? ಆದರೂ ಒಂದು ಕೈ ನೋಡೋಣವೆಂದು, ಮೇದರವನು ಆ ವೂರ ಮಂತ್ರಿಯ ಬಳಿಗೆ ಹೋಗಿ ಕಣ್ಣಿನಲ್ಲಿ ನೀರನ್ನು ಸುರಿಸುತ್ತಾ, ತನಗೆ ದೊರೇ ಅಳಿಯನ ದೆಸೆಯಿಂದ ಸಂಭವಿಸಿದ ವಿಪತ್ತನ್ನು ಅರಿಕೆ ಮಾಡಿದನು. ಕೂಡಲೆ ಒಳ್ಳೆಯವನಾಗಿಯೂ ನ್ಯಾಯಪರನಾಗಿಯೂ ಇದ್ದ ಆ ಮಂತ್ರಿಯು ದೊರೆಯ ಅಳಿಯನೆಂದೂ ಮಹದೈಶ್ವರ್ಯವಂತನೆಂದೂ ದಾಕ್ಷಿಣ್ಯವನ್ನು ನೋಡದೆ, ಅವನನ್ನು ಚಾವಡಿಗೆ ಹಿಡತರಿಸಿದನು. ಆ ಹಿಂಸಕನಾದ ಅರಸು ತಾನು ಮಾಡಿದ ಅಪರಾಧವನ್ನು ಒಪ್ಪಿಕೊಂಡನು. ಆಗ ನ್ಯಾಯಾಧಿಪತಿಯು ಮೇದರವನನ್ನು ನೋಡಿ, —ಅಯ್ಯಾ, ಈ ಅರಸು ತನ್ನನ್ನು ಬಿಟ್ಟರೆ ಇನ್ನು ಸರಿಯೇ ಇಲ್ಲವೆಂದು ಅಹಂಕಾರದಲ್ಲಿ ಉಬ್ಬಿಹೋಗಿದಾನೆ. ಆದ್ದರಿಂದ ಬಡವರನ್ನು ಕಂಡರೆ

ಲಕ್ಷ್ಯವಿಲ್ಲದೆ ಇಂಥಾ ಪಾತಕವನ್ನು ಮಾಡಿದಾನೆ. ಇವನು ಶುದ್ಧವಾಗಿ ಅಪ್ರಯೋಜಕನೆಂತಲೂ ನೀಚನೆಂತಲೂ ಅವನಿಗೆ ತೋರಿಸಿಕೊಡ ಬೇಕು, ಅವನು ತನ್ನ ನಿಜವಾದ ಯೋಗ್ಯತೆಯನ್ನು ತಾನಾಗಿಯೇ ತಿಳಿದುಕೊಳ್ಳುವುದಕ್ಕೆ ನಾನು ಒಂದು ಯೋಚನೆ ಮಾಡಿದೇನೆ. ಆ ಯೋಚನೆ ಸಾಗುವುದಕ್ಕೆ ನೀನು ಸಹಕಾರಿಯಾಗಿ ನಾನು ಹೋಗು ಎಂದಕಡೆಗೆ ನೀನು ಹೋಗಬೇಕು, ಹೀಗೆಂದು ಹೇಳಿದನು.

ಆದಕ್ಕೆ ಮೇದರವನು—ಸ್ವಾಮಿ, ನನಗೆ ಇದ್ದ ಐಶ್ವರ್ಯ ಅಷ್ಟ ರಲ್ಲಿಯೇ ಇತ್ತು. ಇದ್ದ ಅಲ್ಪಸ್ವಲ್ಪವೂ ಈ ನೀಚನ ಚೇಷ್ಟೆಯಿಂದ ಹಾಳಾಗಿ ಹೋಯಿತು. ನಾನು ಪೂರ್ತಿಯಾಗಿ ಮುಳುಗಿಹೋದೆ, ಇನ್ನೊಂದು ಗಳಿಗೆಗೆ ಹಸಿವಾದರೆ ಒಂದು ಮುದ್ದೆ ಹಿಟ್ಟಿಗೆ ಸಹಿತವಾಗಿ ನನಗೆ ಗತಿಯಿಲ್ಲ. ಈ ಮನುಷ್ಯ ಮಾಡಿದ ಅಪಕಾರಕ್ಕೆ ತಕ್ಕದ್ದನ್ನು ಮಾಡುವುದು ನನಗೇನೋ ಇಷ್ಟವಿಲ್ಲ. ಆದರೆ ನ್ಯಾಯವೂ ದಯಾ ರಸವೂ ಇಂಥಾದ್ದೆಂದು ತೋರಿಸಿಕೊಟ್ಟು ಇನ್ನು ಮುಂದಕ್ಕೆ ಬಡವ ರನ್ನು ವೇಧಿಸದ ಹಾಗೆ ಇವನಿಗೆ ಬುದ್ಧೀ ಕಲಿಸಬೇಕೆಂದು ನನಗೆ ಇಷ್ಟ ವುಂಟು, ಎಂಬದಾಗಿ ನುಡಿದನು.

ಕೂಡಲೆ—ಒಂದು ಹಡಗಿನಮೇಲೆ ಇವರಿಬ್ಬರನ್ನೂ ಕೂರಿಸಿ ಸಮುದ್ರದಮೇಲೆ ಕರೆದುಕೊಂಡುಹೋಗಬೇಕು; ಅಲ್ಲಿ ಒಂದು ಎಡ ತಿಟ್ಟನ್ನು ಹುಡುಕಬೇಕು; ಅಲ್ಲಿನ ಜನರು ನಾಗರಿಕವನ್ನು ಅರಿಯದೆ ಒರಟರಾಗಿ, ಐಶ್ವರ್ಯ ಎನ್ನುವುದನ್ನು ಕಿವಿಯಲ್ಲಿಯೂ ಕೇಳದೆ, ಜೀವಿ ಸುವಂಥವರಾಗಿರಬೇಕು; ಆ ಎಡತಿಟ್ಟು ಈ ಸ್ವಭಾವದ್ದಾಗಿರಬೇಕು; ದೂರವಾಗಿರತಕ್ಕ ಅಂಥಾ ಒಂದು ಟಾಪಿನ ಮೇಲೆ ಈ ಮೇದರವನನ್ನೂ ಅರಸನನ್ನೂ ಬಿಟ್ಟುಬಿಡಬೇಕು, ಎಂದು ಅಧಿಕಾರಿಯು ಅಪ್ಪಣೆ ಮಾಡಿ ದನು. ಅಧಿಕಾರಿಯ ಅಪ್ಪಣೇ ಪ್ರಕಾರ ನಾವಿಕರು ಅವರಿಬ್ಬರನ್ನೂ ಕರೆದುಕೊಂಡು ಹೋಗಿ ಒಂದಾನೊಂದು ದ್ವೀಪದಲ್ಲಿ ಬಿಟ್ಟು ಹೊರಟು ಹೋದರು.

ಈ ಮಧ್ಯೆ ತನ್ನ ಕೈಕೆಳಗೆ ಸಂಬಳಕ್ಕಿರುವ ಅಧಿಕಾರಿಯು ತನ್ನ ಅಳಿಯನನ್ನೇ ದಂಡಿಸಿದನಲ್ಲಾ ಎಂಬ ದ್ವೇಷದಿಂದ, ಆ ಮಧುಪುರಿಯ

ದೊರೆಯು ಸರ್ವಾಧಿಕಾರಿಯನ್ನು ಕೆಲಸದಿಂದ ತೆಗೆದು ತನ್ನ ಅಳಿಯ ನನ್ನು ಹಿಂದಕ್ಕೆ ಕರೆಯಿಸಲು ಯತ್ನಿಸಿದನು. ಈ ದೊರೇ ಅಳಿ ಯನ ತುಂಟತನವನ್ನೂ ದೊರೆಯ ಅವಿವೇಕವನ್ನೂ ಕೇಳಿ, ಪರ ರಾಜರು—ಯಾರೋ ಕುಮಂತ್ರಿ ಸೇರಿಕೊಂಡಿದಾನೆ; ಇಂಥಾ ವಿಪ ರೀತಕಾರ್ಯಗಳು ನಡೆಯುತಿವೆ; ಈ ರೀತಿಯಲ್ಲಿ ಮಂತ್ರಿಯು ಕೆಟ್ಟಹಾದಿಗೆ ಎಳೆಯುವುದೂ, ದೊರೆಯು ನ್ಯಾಯವನ್ನು ಬಿಟ್ಟು ಬಡ ಬಗ್ಗರ ಯೋಗಕ್ಷೇಮವನ್ನು ನೋಡದೇ ಸ್ವಜನಪಕ್ಷಪಾತಿಯಾಗು ವುದೂ, ಇಂಥಾ ನಡತೆಗಳೆಲ್ಲಾ ರಾಜ್ಯ ಕೆಡುವುದಕ್ಕೆ ಕಾರಣ; ನಮಗೆ ಆ ರಾಜ್ಯವನ್ನು ಗೆಲ್ಲುವುದಕ್ಕೆ ಇದೇ ಸಮಯ ಎಂದು ಯೋಚಿಸಿ ಕೊಂಡು, ದಂಡೆತ್ತಿ ಬಂದು ಮಧುಪುರಿಗೆ ಮುತ್ತಿಗೇ ಹಾಕಿದರು. ದೊರೆಯು ಇದೆಲ್ಲಾ ತನ್ನ ಅವಿವೇಕದ ಫಲವೆಂದು ತಿಳಿದು ಕೆಲಸ ದಿಂದ ತೆಗೆದಿದ್ದ ಅಧಿಕಾರಿಯನ್ನು ಕರೆಯಿಸಿ ಅವನಿಗೆ ಬಹುಮಾನ ಮಾಡಿ,—ತಾವು ನ್ಯಾಯ ಪಕ್ಷಪಾತಿಗಳು; ತಮ್ಮಂಥಾ ಸತ್ಯವಂತರು ನನ್ನ ರಾಜ್ಯದಲ್ಲಿ ಇರುವವರೆಗೂ ನನಗೆ ಯಾವ ಕೇಡೂ ಸಂಭವಿಸ ಲಿಲ್ಲ; ಈಗ ನನಗೆ ಬಂದಿರುವ ವಿಪತ್ತನ್ನು ಪರಿಹರಿಸಬೇಕು, ನನ್ನಿಂದ ತಪ್ಪಾಯಿತು, ಕ್ಷಮಿಸಬೇಕು, ಎಂದು ಅತಿದೈನ್ಯದಿಂದ ಹೇಳಿಕೊಂಡನು. ಅಧಿಕಾರಿಯು ಕನಿಕರದಿಂದ ಶತ್ರುಗಳನ್ನು ಜಯಿಸುವ ಉಪಾಯ ಮಾಡಿ, ಅವರನ್ನು ಆಚೆಗೆ ಅಟ್ಟಿ ಎಂದಿನಂತೆ ಅರಸು ರಾಜ್ಯಭಾರ ವನ್ನು ಮಾಡುವಂತೆ ಆತನಿಗೆ ತಕ್ಕ ವಿವೇಕ ಹೇಳಿ, ಮಂತ್ರಿತ್ವವನ್ನು ವಹಿಸಿದನು. ದೊರೆಯು ಸ್ವಲ್ಪ ದಿವಸಗಳು ಕಳೆದ ಮೇಲೆ ತನ್ನ ಮಂತ್ರಿ ಯನ್ನು ಕುರಿತು, ತನ್ನ ಮಗಳು ಬಹಳವಾಗಿ ಅಳುತಾಳೆ; ಅಳಿಯ ನನ್ನು ಏನಾದರೂ ಮಾಡಿ ಹಿಂದಕ್ಕೆ ಕರೆಸಬೇಕೆಂದು ಹೇಳಿದನು. ಅದಕ್ಕೆ ಅಧಿಕಾರಿಯು—ಆತನನ್ನು ದ್ವೀಪಾಂತರಕ್ಕೆ ಸಾಗಿಸಿದ್ದು ಅವ ನಿಗೆ ವಿವೇಕಭರಲಿ, ತನ್ನ ಐಶ್ವರ್ಯಮದದಿಂದ ಬಡವರನ್ನು ಹಿಂಸಿ ಸದೆ ಇರಲಿ ಎಂದೇ ಹೊರತು ಅವನಿಗೆ ಕೇಡು ಸಂಭವಿಸಲೆಂದು ಅಲ್ಲ; ಆತನನ್ನು ಹಿಂದಕ್ಕೆ ಕರೆಯಿಸುವ ಸಮಯ ಕೂಡಲೆ ಬರುವುದು, ಸ್ವಲ್ಪ ತಡೆಯಬೇಕು; ತಾವು ಈ ಪ್ರಸ್ತಾಪವನ್ನು ಮಾಡದಿದ್ದಾಗ್ಯೂ ನಾನೇ

ಆತನನ್ನು ಕರೆಯಿಸುತಿದ್ದೆ ಎಂದು ಹೇಳಿದನು.

ಅತ್ತ ದ್ವೀಪಾಂತರಕ್ಕೆ ಗಡೀಪಾರಾಗಿ ಕಳುಹಿಸಲ್ಪಟ್ಟಿದ್ದ ಮಧು ವರ್ಮನು ತನಗೆ ಬಂದ ಕಷ್ಟಕ್ಕೆ ಗೋಳಾಡುತಾ ಇದ್ದನು. ಇವನಿಗೆ ಯಾರ ಸಹಾಯವೂ ಇಲ್ಲ; ಇತ್ತಬಾ ಎನ್ನುವರಿಲ್ಲ, ಇವನ ಇರವನ್ನು ಕೇಳುವರಿಲ್ಲ. ಆ ದ್ವೀಪದ ಜನರು ಬಹು ಒರಟರು, ಅವರ ಭಾಷೆ ಇವನಿಗೆ ತಿಳಿಯದು. ಇಂಥಾ ಜನರ ಕೈಗೆ ಇವ ಸಿಕ್ಕಿದ. ಹಲವು ಬಗೆಯಲ್ಲಿಯೂ ಕಷ್ಟ ಬಂತು. ಇದೆಲ್ಲವನ್ನೂ ಕಂಡು ಪೇಚಾಡುತಾ, ದುಃಖಪಡುತಾ, ಕೈ ಕೈ ಮುರಿದುಕೊಳ್ಳುತಾ, ಕೆಟ್ಟಮುಖವನ್ನು ಹಾಕಿಕೊಂಡು ಅಳುತಾ ಮಧುವರ್ಮ ಕುಕ್ಕರಿಸಿದ್ದನು. ಇವನ ಸಂಗಡ ಆ ದ್ವೀಪಕ್ಕೆ ಹೋಗಿ ಇಳಿದ ಮೇದರವನಿಗೆ ಇದು ಯಾವುದೂ ಕಷ್ಟ ವಾಗಿ ತೋರಲಿಲ್ಲ. ಬಾಲ್ಯದಿಂದಲೂ ಕಷ್ಟಪಟ್ಟು ಇವನಿಗೆ ಅಭ್ಯಾಸ ವಿತ್ತು. ಆ ದ್ವೀಪದ ಒರಟು ಜನರನ್ನು ಈ ಮೇದರವನು ಕಂಡು, ತಾನು ಅವನಿಗೆ ಶತ್ರುವಾಗಿ ಬಂದಿಲ್ಲ, ಅವರು ಹೇಳಿದ ಕೆಲಸವನ್ನು ಮಾಡಿಕೊಂಡು ಇರುತೇನೆ, ತನಗೆ ಹೊಟ್ಟೆಗೆ ಹಾಕಿದರೆ ಸಾಕು, ಎಂದು ಕೈಸನ್ನೆಯಿಂದ ತಿಳಿಸಿದನು. ಅವರು ಇವರಿಬ್ಬರನ್ನೂ ನೋಡಿ, ಭಯ ಪಡತಕ್ಕ ಅಗತ್ಯವಿಲ್ಲ, ತಾವು ಅವರಿಬ್ಬರಿಗೂ ಏನೂ ಕೇಡ ಮಾಡುವು ದಿಲ್ಲ; ಆದರೆ ತಮ್ಮ ಜೊತೆಯಲ್ಲಿ ಅವರು ಮಾನ ಹಿಡಿಯಬೇಕು, ಮರದ ತುಂಡುಗಳನ್ನು ಹೊರಬೇಕು, ಎಂದು ಕೈಸನ್ನೆಯಿಂದ ತಿಳಿಸಿ ದರು.

ತರುವಾಯ ಆ ಕಾಡುಜನರು ಹೇಳಿದ ಚಾಕರಿಗೆ ಇವರಿಬ್ಬರೂ ಒಪ್ಪಿಕೊಂಡರು. ಆಮೇಲೆ ಅವರ ಸಂಗಡಲೇ ಕಾಡಿಗೆ ಹೋದರು. ಅಲ್ಲಿ ಮರದ ತುಂಡುಗಳು ರಾಸಿರಾಸಿಯಾಗಿ ಬಿದ್ದಿದ್ದವು. ಆ ಕಾಡು ಜನರು ಆ ಮರದ ತುಂಡುಗಳನ್ನು ಮನೆಗೆ ಹೊತ್ತುಕೊಂಡು ಹೋಗ ಬೇಕೆಂದು ಇಬ್ಬರಿಗೂ ಹೇಳಿದರು. ಅದೇ ಪ್ರಕಾರ ಅವರಿಬ್ಬರೂ ಕೆಲ ಸಕ್ಕೆ ಅನುವಾದರು. ಬಡವನಾದ ಮೇದರವನು ಬಲಶಾಲಿಯಾಗಿ ಶ್ರಮ ಪಡುವ ರೂಢಿವುಳ್ಳವನಾದಕಾರಣ, ತನಗೆ ಹಂಚಿಹಾಕಿದ್ದ ತನ್ನ ಪಾಲಿನ ತುಂಡುಗಳನ್ನು ಜಾಗ್ರತೆಯಾಗಿ ಸಾಗಿಸಿದನು. ಕೈ ಕಾಲು

ಕದಿರುಕಡ್ಡಿಯಾಗಿ ಹೊಟ್ಟೆ ಪಿಟ್ಟೀಕಾಯಿಯಾಗಿ ಬೊಜ್ಜು ಬೆಳಸಿ ಕೊಂಡಿದ್ದ ದೊರೇ ಅಳಿಯಂದಿರಾದ ಶ್ರೀಮಂತರಿಗೆ ಯಾವ ಕೆಲಸ ವನ್ನೂ ಮಾಡಿದ ಅಭ್ಯಾಸವೇ ಇಲ್ಲದ ಕಾರಣ, ಇವರ ಹಸಿಗೆಗೆ ಬಂದ ತುಂಡುಗಳಲ್ಲಿ ನಾಲ್ಕರಲ್ಲಿ ಒಂದು ಭಾಗವೂ ಸಾಗಲಿಲ್ಲ. ಇದೆಲ್ಲವನ್ನೂ ನೋಡುತಿದ್ದ ಕಾಡುಜನರು ತಮ್ಮ ಕೆಲಸಕ್ಕೆ ಮೇದರವನು ಉಪಯೋ ಗಿಸುತಾನೆಂದು ಮೆಚ್ಚಿ, ಒಳ್ಳೇದಾಗಿರುವ ಒಂದು ವಿಾನನ್ನೂ ತಮ್ಮ ಕಾಡಿನಲ್ಲಿ ಸಿಕ್ಕುವ ಒಳ್ಳೇ ಗಡ್ಡೆ ಗೆಣಸುಗಳನ್ನೂ ತಂದು ಅವನಿಗೆ ಕೊಟ್ಟರು. ಮಧುವರ್ಮನಿಗೆ ಕೆಲಸಮಾಡಲು ಸಾಮರ್ಥ್ಯವಿಲ್ಲವೆಂತ ತಿಳಿದುಕೊಂಡು ಅವನಿಗೂ ಕ್ಷುತ್ತು ಪರಿಹಾರವಾಗಲು ಏನೋ ಸ್ವಲ್ಪ ತಿಂಡಿಯನ್ನು ಕೊಟ್ಟರು. ಆ ದಿನವೆಲ್ಲಾ ಅನ್ನವಿಲ್ಲದೆ ವಿಶೇಷವಾಗಿ ಕೆಲಸಮಾಡಿ ಆಯಾಸಪಟ್ಟಿದ್ದಕಾರಣ ಮಧುವರ್ಮನಿಗೆ ಹೆಚ್ಚಾಗಿ ಹಸಿವಾಗಿತ್ತು; ಆ ಜನರು ಕೊಟ್ಟ ತಿಂಡಿಯನ್ನು ತಿಂದನು. ಆ ತಿಂಡಿಯು ತನ್ನ ಮಾವನ ಖಾಸಾಪಜ್ತಿಯಲ್ಲಿ ಇವ ತಿನ್ನುತಿದ್ದ ಮೃಷ್ಟಾನ್ನಕ್ಕಿಂತಲೂ ರುಚಿಯಾಗಿ ತೋರಿತು.

ಹೀಗೆಯೇ ಕೆಲವು ತಿಂಗಳು ಕಳೆದವು. ತರುವಾಯ ಮಧುಪುರಿಯ ಮಂತ್ರಿಯಾಗಿ ಇವರಿಬ್ಬರಿಗೂ ಶಿಕ್ಷೆಯನ್ನು ವಿಧಿಸಿದ್ದ ಅಧಿಕಾರಿಯು ಅವರನ್ನು ಹಿಂದಕ್ಕೆ ಕರೆತರುವಂತೆ ಅಪ್ಪಣೆ ಮಾಡಿದನು. ಸಾವಿಕರು ಹೋಗಿ ಅವರನ್ನು ಕರೆತಂದು ಮಂತ್ರಿಯ ಮುಂದೆ ನಿಲ್ಲಿಸಿದರು. ಆತನು ಅಲ್ಲಿ ನಡೆದ ಸಮಾಚಾರವನ್ನೆಲ್ಲಾ ಕೇಳಿ ದೊರೇ ಅಳಿಯನನ್ನು ಕೋಪ ದಿಂದ ನೋಡಿ—ಈಗ ನಿನಗೆ ಬುದ್ಧಿ ಬಂತೆ? ನಿನ್ನ ಯೋಗ್ಯತೆ ನಿನಗೆ ಗೊತ್ತಾಯಿತೆ? ನಿನ್ನಿಂದ ಹಿಂಸೆಯನ್ನು ಹೊಂದಿದ ಆ ಬಡಮೇದರವನಿ ಗಿಂತಲೂ ನಿನ್ನ ಯೋಗ್ಯತೆ ಎಷ್ಟು ಕಡಮೆಯಾಗಿದೆ, ತಿಳಿದುಕೊಂಡೆಯ? ಅವನಿಗೆ ನೀನು ಹಿಂದೆ ಮಾಡಿದ ಅಪರಾಧಕ್ಕೆ ತಕ್ಕ ಪರಿಹಾರವನ್ನು ನಿನ್ನಿಂದ ಅವನಿಗೆ ಕೊಡಿಸಬೇಕಾಗಿದೆ. ನೀನು ಅವನ ವಿಷಯದಲ್ಲಿ ಬೇಕೆಂದು ಮಾಡಿದ ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ಮಾಡಿವರೆ, ನಿನ್ನ ಆಸ್ತಿಯನ್ನೆಲ್ಲಾ ಅವನಿಗೆ ಕೊಡಿಸಿ ಅವನಿಗೆ ನೀನು ಮಾಡಿದ ಹಾಗೆ ನಿನಗೂ ಜೀವನೋಪಾಯಕ್ಕೆ ಮಾರ್ಗವಿಲ್ಲದಂತೆ ಮಾಡುವುದೇ ಧರ್ಮ.

ಆದರೆ ಇನ್ನು ಮೇಲಾದರೂ ಜನರ ಯೋಗ್ಯತೆಯನ್ನು ಅರಿತು ಸ್ವಪ್ರತಿಷ್ಠೆಯನ್ನು ಬಿಟ್ಟು ಎಲ್ಲರಲ್ಲಿಯೂ ದಯಾರಸಉಳ್ಳವನಾಗಿ, ನಿನ್ನ ಆಸ್ತಿಯ ನಾಲ್ಕರಲ್ಲಿ ಒಂದು ಭಾಗವನ್ನು ಅವನಿಗೆ ನೀನು ಕೊಡ ತಕ್ಕದ್ದು. ಹೀಗೆಂದು ಅಧಿಕಾರಿಯು ಅಪ್ಪಣೆ ಮಾಡಿದನು.

ಇದೆಲ್ಲವನ್ನೂ ಕೇಳಿ, ಆ ಮೇದರವನು—ಸ್ವಾಮಿ ತಾವು ಮಾಡಬೇಕೆಂದಿರುವ ಉಪಕಾರಕ್ಕೆ ನಾನು ಕೃತಜ್ಞನಾಗಿದೇನೆ. ನಾನು ಬಡತನದಲ್ಲಿಯೇ ಹುಟ್ಟಿ ಬಡತನದಲ್ಲಿಯೇ ಬೆಳೆದೆ; ಕೆಲಸಮಾಡಿ ನನಗೆ ಅಭ್ಯಾಸವಾಗಿದೆ. ಐಶ್ವರ್ಯವಂತನಾಗಬೇಕೆಂಬ ಇಚ್ಛೆ ನನಗೆ ಇಲ್ಲ. ಅಥವಾ ಐಶ್ವರ್ಯ ಬಂದರೂ ಅದನ್ನು ಉಪಯೋಗಿಸುವ ಮಾರ್ಗ ನನಗೆ ತಿಳಿಯದು. ನನಗೆ ಬೇಕಾದ್ದೆಲ್ಲಾ ಏನೆಂದರೆ, ನಾನು ಮೊದಲು ಯಾವ ಸ್ಥಿತಿಯಲ್ಲಿದ್ದೆನೋ ಅದೇ ಸ್ಥಿತಿಯಲ್ಲಿ ಈ ಹಣಗಾರನು ನನ್ನನ್ನು ಇಡಬೇಕು; ಈತನಿಗೆ ಹೆಚ್ಚಾಗಿ ದಯಾರಸವಿರಬೇಕು; ಇಷ್ಟೇ ಹೊರತು ಮತ್ತೇನೂ ಇಲ್ಲ, ಎಂದು ಅರಿಕೆ ಮಾಡಿದನು.

ಈ ಮೇದರವನ ಧಾರಾಳವಾನ ಮನಸ್ಸನ್ನು ನೋಡಿ ಮಧುವರ್ಮನಿಗೆ ಅತ್ಯಾಶ್ಚರ್ಯವುಂಟಾಯಿತು. ಅರಸುಮಗನು ತನಗೆ ಬಂದ ಕಷ್ಟದಿಂದ ವಿವೇಕವನ್ನು ಕಲಿತುಕೊಂಡು, ತನ್ನ ಜೀವಮಾನಾವಧಿ ಆ ಮೇದರವನನ್ನು ತನ್ನ ಪರಮಾಪ್ತನಂತೆ ಭಾವಿಸಿ, ತನ್ನ ಐಶ್ವರ್ಯವನ್ನೆಲ್ಲಾ ಬಡಬಗ್ಗರ ಕಷ್ಟವನ್ನು ನಿವಾರಣ ಮಾಡುವುದಕ್ಕೆ ಉಪಯೋಗಿಸಿದನು.

---

## ೪ನೆ ಅಧ್ಯಾಯ

ಮೇಲೆ ಹೇಳಿದ ರೀತಿಯಲ್ಲಿ ಸುಮತಿಯು ಕಥೆಯನ್ನು ಓದಿ ಮುಗಿಸಿದನು. ಅದನ್ನು ಮದನಕುಮಾರ ಕೇಳಿ ಬಹಳ ಸಂತೋಷಪಟ್ಟು ನಾನು ಆ ಮೇದರವನಾಗಿದ್ದರೆ ದುಷ್ಟನಾದ ಆ ದೊರೇ ಅಳಿಯ

ನಿಂದ ಅವನ ಐಶ್ವರ್ಯವನ್ನೆಲ್ಲಾ ಕಿತ್ತುಕೊಂಡು ಇರಿಸಿಕೊಳ್ಳುತಿದ್ದೆ ಎಂದನು.

ಕೂಡಲೆ ಸುಮತಿಯು—ಆ ದೊರೇ ಅಳಿಯನ ಹಾಗೆ ಅಹಂಕಾರಿಯಾಗಿಯೂ ದುಷ್ಟನಾಗಿಯೂ ಜಡನಾಗಿಯೂ ನಾನು ಎಲ್ಲಿಯಾದರೂ ಆದೇನಲ್ಲಾ ಎಂಬ ಭಯದಿಂದ ಅವನ ಆಸ್ತಿ ನನಗೆ ಬೇಡವೆನ್ನುತಿದ್ದೆ, ಎಂದನು.

ಅಲ್ಲಿಂದ ಮುಂದಕ್ಕೆ ರಾಮಜೋಯಿಸನೂ ಈ ಇಬ್ಬರು ಹುಡುಗರೂ ಸಹಾ ಬೆಳಗಿನ ಹೊತ್ತು ತೋಟದಲ್ಲಿ ಕೆಲಸ ಮಾಡುತಲೇ ಇದ್ದರು. ಅವರಿಗೆ ಆಯಾಸವಾದಾಗ ಗುಡಿಲಿಗೆ ಹೋಗಿ ವಿಶ್ರಮಿಸಿಕೊಳ್ಳುವುದು, ಅಲ್ಲಿ ಸುಮತಿಯು ಯಾವುದಾದರೂ ಒಂದು ಇಂಪಾದ ಕಥೆಯನ್ನು ನಿತ್ಯವೂ ಓದುವುದು, ಮದನಕುಮಾರನು ಅದನ್ನು ಕಿವಿಗೊಟ್ಟು ಕೇಳಿ ಆನಂದಪಡುವುದು, ಹೀಗೆಯೇ ನಡೆಯುತಿತ್ತು. ಒಂದಾನೊಂದು ಕಾಲದಲ್ಲಿ ಸುಮತಿಯು ತನ್ನ ಅಕ್ಕನ ಮದುವೆಗೋಸ್ಕರ ೧೫ ದಿವಸಗಳ ಮಟ್ಟಿಗೆ ಗುರುವಿನ ಮನೆಯನ್ನು ಬಿಟ್ಟು ತನ್ನ ತಂದೇ ಮನೆಗೆ ಹೊರಟುಹೋಗಲಾಗಿ, ರಾಮಜೋಯಿಸ ಮದನಕುಮಾರ ಇವರಿಬ್ಬರೇ ನಿಂತರು.

ಸುಮತಿ ಹೊರಟುಹೋದ ಮಾರನೇ ದಿವಸ ಇವರಿಬ್ಬರೂ ತೋಟದಲ್ಲಿ ಕೆಲಸಮಾಡಿ ಎಂದಿನಂತೆ ಗುಡಿಲಿಗೆ ಬಂದರು. ಆಗ ಮದನನು ಯಥಾಪ್ರಕಾರವಾಗಿ ಓದತಕ್ಕ ಕಥೆಯನ್ನು ರಾಮಜೋಯಿಸನು ಓದುವನೆಂದು ತಿಳಿದುಕೊಂಡಿದ್ದನು. ಆದರೆ ಜೋಯಿಸನು ಹಾಗೆ ಓದದೆ ಬೇರೇ ಕೆಲಸವಾಗಿದ್ದನು. ಮಾರನೇ ದಿನವೂ ಮೂರನೇ ದಿನವೂ ಹೀಗೆಯೇ ೧೫ ದಿವಸಗಳವರೆಗೂ ಓದುಗಾರಿಕೆ ಏನೇನೂ ಆಗಲಿಲ್ಲ. ಇದನ್ನು ಕಂಡು ಮದನನಿಗೆ ಬಹಳ ಅಸಮಾಧಾನವಾಯಿತು. ಇವನು ತನ್ನ ಮನಸ್ಸಿನಲ್ಲಿ—ಏನೋ ನಿತ್ಯವೂ ಹೀಗಾಗುತಿದೆ. ಕಥೆಯನ್ನು ಕೇಳಬೇಕೆಂಬ ಆಶೆ ನನಗೆ ಉಂಟು. ಆದರೆ ಓದುವವರು ಯಾರೂ ಇಲ್ಲ. ಸುಮತಿಯಹಾಗೆ ಓದುವುದಕ್ಕೆ ನಾನೇ ಯಾಕೆ ಕಲಿತುಕೊಳ್ಳಬಾರದು? ನನಗೆ ಅಕ್ಷರ ಬಂದರೆ, ನೀವು ಓದಿ ತಾವು ಓದಿ,

ಎಂದು ನಾನು ಇತರರನ್ನು ಬೇಡಿಕೊಳ್ಳಬೇಕಾದ್ದೇ ಇಲ್ಲ. ನನ್ನ ಮಟ್ಟಿಗೆ ನಾನೇ ಓದಿಕೊಂಡು ಸಂತೋಷಪಡಬಹುದು. ಸುಮತಿ ಏನೋ ಬಹು ಬುದ್ಧಿಶಾಲಿಯೇ ಸರಿ; ಆದರೆ ಅವನಿಗೆ ಓದುವುದಕ್ಕೆ ಯಾರೂ ಹೇಳಿಕೊಡದೆಯೇ ಅವನು ಕಲಿತುಕೊಂಡಿರಲಾರ. ಅವನಿಗೆ ಹೇಳಿಕೊಟ್ಟ ಹಾಗೆ ನನಗೂ ಹೇಳಿಕೊಟ್ಟರೆ, ಅವನಹಾಗೆಯೇ ನಾನೂ ಓದಿಯೇನು. ಆಗಲಿ ನೋಡೋಣ. ಈಸಾರಿ ಅವನು ಇಲ್ಲಿಗೆ ಬರಲಿ, ಈ ವಿಷಯದಲ್ಲಿ ಅವನನ್ನು ಕೇಳಿಯೇ ಸಿದ್ಧ ಎಂದನು.

ಸುಮತಿಯು ೧೫ ದಿವಸಗಳು ಕಳೆದ ಮಾರನೇ ದಿವಸವೇ ಹಿಂತಿರುಗಿ ಬಂದನು, ಇವನ ಆಗಮನವನ್ನೇ ನಿರೀಕ್ಷಿಸಿಕೊಂಡಿದ್ದ ಮದನಕುಮಾರನು,—ಸುಮತಿ, ನೀನು ಓದಲಿಕ್ಕೆ ಹೇಗೆ ಕಲಿತುಕೊಂಡೆ?

ಸುಮತಿ—ರಾಮಜೋಯಿಸರು ಮೊದಲು ನನಗೆ ಅಕ್ಷರಗಳನ್ನೆಲ್ಲಾ ಹೇಳಿಕೊಟ್ಟರು, ತರುವಾಯ ಅಕ್ಷರಗಳನ್ನು ಸೇರಿಸುವುದಕ್ಕೂ, ಆಮೇಲೆ ಹೆಸರಕ್ಷರವನ್ನು ಬರೆಯುವುದಕ್ಕೂ ಕಲಿಸಿಕೊಟ್ಟರು; ಹಾಗೆಯೇ ನಾನು ಓದುವುದಕ್ಕೆ ಕಲಿತುಕೊಂಡೆ.

ಮದನ—ನನಗೂ ಅಕ್ಷರಗಳನ್ನು ಹೇಳಿಕೊಡುತೀಯ?

ಸುಮತಿ—ಅಗತ್ಯವಾಗಿ ಆಗಲಿ.

ಹೀಗೆ ಈ ಹುಡುಗರಿಬ್ಬರೂ ಮಾತನಾಡಿಕೊಂಡರು. ಆಗ ಸುಮತಿಯು ಅವನಿಗೆ ಅಕ್ಷರವನ್ನು ಹೇಳಿಕೊಟ್ಟನು. ಮದನ ೫ನೆ ವರ್ಷದಲ್ಲಿ ಕ್ರಮವಾಗಿ ಅಕ್ಷರಾಭ್ಯಾಸವಾಗಿದ್ದಾಗ್ಯೂ ಇವನು ಒಂದು ದಿವಸವಾದರೂ ಕೂತು ಒಂದು ಅಕ್ಷರವನ್ನೂ ಕಲಿತವನಲ್ಲ. ಆದರೆ ಈಗ ಅಕ್ಷರದ ಮೇಲೆ ಮಮತೆಹುಟ್ಟಿದ ಕಾರಣ ಮದನನು ವರ್ಣಮಾಲೆಯನ್ನೆಲ್ಲಾ ೩ ದಿವಸದಲ್ಲಿ ಕಲಿತುಕೊಂಡನು. ಅಕ್ಷರವೆಲ್ಲಾ ಹೀಗೆ ಜಾಗ್ರತೆಯಾಗಿ ಬರಲು, ಅರಸುಮಗನಿಗೆ ಅತ್ಯಂತ ಸಂತೋಷವಾಯಿತು. ಈ ಸಂತೋಷವನ್ನು ರಾಮಜೋಯಿಸನಿಗೆ ಆತುರದಿಂದ ಓಡಿಹೋಗಿ ಹೇಳಬೇಕೆಂದು ಮದನನಿಗೆ ಮನಸ್ಸು ಹುಟ್ಟಿತು. ಆದರೆ ಉಂಡೆಯಾದ ಒಂದು ಕಥೆಯನ್ನು ಆತನ ಮುಂದೆ ಓದಿ ಆತನಿಗೆ ಇನ್ನೂ ಆಶ್ಚರ್ಯ ಹೆಚ್ಚಾಗುವಂತೆ ಮಾಡಬೇಕೆಂದು ಆಗ್ಗೆ ಸುಮ್ಮನಾದನು.

ಆದಕಾರಣ ಮದನನು ವಿಶೇಷಾಸಕ್ತಿಯಿಂದ ಓದುವುದಕ್ಕೆ ತೊಡಗಿದನು. ತನ್ನ ಜೊತೆಗಾರನಿಗೆ ಓದು ಹೇಳಿಕೊಡುವ ವಿಷಯದಲ್ಲಿ ಸುಮತಿಯು ಸ್ವಲ್ಪವೂ ಪಾಲಮಾರಲಿಲ್ಲ. ಇದಕ್ಕೆ ಅನುಗುಣವಾಗಿ ಇವನಲ್ಲಿ ಬೋಧನಾಶಕ್ತಿಯೂ ಚೆನ್ನಾಗಿತ್ತು. ಎರಡು ತಿಂಗಳೊಳಗಾಗಿ ಸುಮತಿಯ ಶಿಕ್ಷೆಯಲ್ಲಿ ಮದನನು ಕೈಗೆ ಕೊಟ್ಟ ಕಾಗದವನ್ನು ಚೆನ್ನಾಗಿ ಓದುವ ಮಟ್ಟಿಗೆ ಕಲಿತುಕೊಂಡು, ತನ್ನ ಪಾಂಡಿತ್ಯವನ್ನು ರಾಮಜೋಯಿಸನ ಮುಂದೆ ತೋರಿಸಿಕೊಳ್ಳಬೇಕೆಂದು ನಿಷ್ಕರ್ಷೆ ಮಾಡಿಕೊಂಡನು. ಅದೇ ಪ್ರಕಾರ ನಡಸಲು ಒಂದು ಸಮಯ ದೊರೆಯಿತು. ಒಂದು ದಿನ ಅವರು ಮೂರು ಜನರೂ ಗುಡಿಲಿನಲ್ಲಿ ಸೇರಿರುವಾಗ್ಗೆ ಕಥೆ ಓದುವುದಕ್ಕೋಸ್ಕರ ರಾಮಜೋಯಿಸನು ಸುಮತಿಯ ಕೈಗೆ ವಹಿಯನ್ನು ತೆಗೆದುಕೊಟ್ಟನು. ಆಗ ಮದನನು ಎದ್ದುನಿಂತು—ಜೋಯಿಸರೆ ತಮ್ಮ ಅಪ್ಪಣೆಯಾದರೆ ಆ ಕಥೆಯನ್ನು ನಾನು ಓದುತ್ತೇನೆ ಎಂದನು. ಅದಕ್ಕೆ ಜೋಯಿಸನು—ಆಹಾ! ಅಗತ್ಯವಾಗಿ ಆಗಲಿ, ಎಂದು ಹೇಳಿಯೇನು; ಆದರೆ ನನಗೆ ಗೊತ್ತಾಗಿದೆ, ನೀನು ಓದುಗೀದುವುದು ಸಟೆ; ಬೇಕಾದರೆ ಕೈಲಿರುವ ಪುಸ್ತಕವನ್ನು ಬಿಸಾಟು ಓಡಿಹೋಗುತೀಯೆ ಎಂದನು. ಆ ಮಾತಿಗೆ ರಾಜಪುತ್ರನು ನಸುನಕ್ಕು, ಅದನ್ನು ತಾನು ಓದುತ್ತೇನೆಂಬ ನಂಬಿಕೆಯಿಂದ ಪುಸ್ತಕವನ್ನು ಕೈಗೆ ತೆಗೆದುಕೊಂಡು ಓದಿದ್ದು ಹೇಗೆಂದರೆ—

## ಎರಡು ನಾಯಿಗಳ ಕಥೆ

ಒಂದಾನೊಂದು ಊರಿನಲ್ಲಿ ತೋಳ ಹುಲಿ ಮೊದಲಾದ ಕಾಡು ಮೃಗಗಳ ಉಪದ್ರವು ಬಹಳವಾಗಿತ್ತು. ಆ ಊರಿನಲ್ಲಿರುವ ಒಬ್ಬ ಬಡ ಒಕ್ಕಲಿಗನು ಎತ್ತರವಾಗಿಯೂ ಧೈರ್ಯವಾಗಿಯೂ ಇರುವ ಎರಡು ನಾಯಿಮರಿಗಳನ್ನು ತಂದು ಸಾಕಿದನು. ಅವುಗಳಲ್ಲಿ ಒಂದಕ್ಕೆ ಸಂಪಗೆ ಎಂತಲೂ ಮತ್ತೊಂದಕ್ಕೆ ಮಲ್ಲಿಗೆ ಎಂತಲೂ ಹೆಸರಿಟ್ಟಿದ್ದನು. ಈ ನಾಯಿಗಳು ನೋಡುವುದಕ್ಕೆ ಸುಂದರವಾಗಿ ಸಮಯದಲ್ಲಿ ಕೆಲಸಕ್ಕೆ ಬರತಕ್ಕವುಗಳಾಗಿದ್ದ ಕಾರಣ, ಆ ಒಕ್ಕಲಿಗನು ಅವುಗಳಲ್ಲಿ ಒಂದನ್ನು

ತಾನು ಉಳುವೆ ಮಾಡತಕ್ಕ ಭೂಮಿಯ ಒಡೆಯನಾದ ಗೌಡನಿಗೆ ಒಪ್ಪಿಸಿದನು; ಮತ್ತೊಂದನ್ನು ತನ್ನ ಕುರೀಮಂದೆ ಕಾಯುವುದಕ್ಕಾಗಿ ಇರಿಸಿಕೊಂಡನು.

ಅದು ಮೊದಲುಗೊಂಡು ಈ ಎರಡು ಮರಿಗಳ ರೀತಿಯೂ ವಿಶೇಷವಾಗಿ ಬದಲಾಯಿಸಿತು. ಒಡೆಯನಿಗೆ ಕೊಟ್ಟ ಸಂಪಗೆ ಎಂಬ ನಾಯಿಯು ಗೌಡನ ಮನೆಗೆ ಹೋಗಿ ಅಲ್ಲಿನ ಅಡಿಗೆಯವರ ಸಂಗಡಲೂ ಆಳುಗಳ ಸಂಗಡಲೂ ವಿಶೇಷವಾಗಿ ಸಲಿಗೆಯಾಗಿ, ಅವರೊಡನೆ ಆಟ ವಾಡುತ ಅನೇಕ ಚೇಷ್ಟೆಯನ್ನು ಕಲಿತುಕೊಂಡಿತು. ಇದು ಮಾಡುವ ಚೇಷ್ಟೆಗಳನ್ನು ನೋಡಿ ಅಲ್ಲಿನ ಆಳುಗಳು ಸಂತೋಷಪಟ್ಟು, ಅದಕ್ಕೆ ಬೇಕಾದಷ್ಟು ಹಿಟ್ಟನ್ನೂ ಮಾಂಸವನ್ನೂ ಆಗಾಗ್ಗೆ ಹಾಕಿ, ಅದನ್ನು ಎಲ್ಲರೂ ಆದರದಿಂದ ಸಾಕುತಿದ್ದರು. ಹೀಗೆ ತಿಂದು ತಿಂದು ಸಂಪಗೆಯು ದಪ್ಪವಾಗಿ ಬೆಳೆದು ದುಂಡುದುಂಡಾಗಿ ನೋಡುವುದಕ್ಕೆ ಬಹು ಚೆನ್ನಾಗಿತ್ತು. ಆದರೆ ಮೈ ಹೊತ್ತುಕೊಂಡು ನಡೆಯಲಾರದೆ ಇರುತಿತ್ತು; ಇದರಲ್ಲಿ ಹೇಡಿತನ ಬಹು ಹೆಚ್ಚಾಗಿತ್ತು; ಒಂದು ಸಣ್ಣ ನಾಯಿಯನ್ನು ಕಂಡರೂ ಹೆದರಿಕೊಂಡು ಓಡಿಹೋಗುತಿತ್ತು; ಹೆಚ್ಚಾಗಿ ತಿಂಡಿ ತಿಂದು ಅಭ್ಯಾಸವಿದ್ದ ಕಾರಣ ತಿಂಡೀ ಪದಾರ್ಥ ಯಾವುದು ಎಲ್ಲಿ ಬಿದ್ದಿದ್ದಾಗ್ಯೂ ಕದ್ದು ತಿನ್ನುತಿತ್ತು. ಆದಾಗ್ಯೂ ಪಾದಚಾರಿಗಳಾಗಿ ಹೋಗುತಿದ್ದ ಯಾರನ್ನು ಕಂಡರೂ ಬಾಲವನ್ನು ಅಲ್ಲಾಡಿಸುತಾ ಅವರ ಹಿಂದೆಯೇ ಹೋಗುತಿತ್ತು. ಅವರ ಮೈಮೇಲಕ್ಕೆ ಸಂತೋಷದಿಂದ ಅಡರುವುದು, ಎರಡು ಕಾಲಿನಲ್ಲಿ ನಿಂತುಕೊಳ್ಳುವುದು, ಯಾರಾದರೂ ಕಡ್ಡಿಯನ್ನಾಗಲಿ, ಬಟ್ಟೆಯನ್ನಾಗಲಿ, ಲಾಂದ್ರವನ್ನಾಗಲಿ, ಬಾಯಿಗೆ ಕೊಟ್ಟರೆ ಅದನ್ನು ಕಚ್ಚಿಕೊಂಡು ಹಿಂದೆಯೇ ಹೋಗಿ ಅವರಿಗೆ ಕೊಡು ವುದು, ಹೀಗೆಲ್ಲಾ ಮಾಡುತಿದ್ದ ಕಾರಣ, ಆ ಸುತ್ತುಮುತ್ತಿನ ಜನರೆಲ್ಲರ ಪ್ರೇಮಕ್ಕೆ ಇದು ಪಾತ್ರವಾಗಿತ್ತು.

ಒಕ್ಕಲಿಗನ ಮನೆಯಲ್ಲಿದ್ದ ಮಲ್ಲಿಗೆಯಾದರೋ, ಅವನ ಗುಡಿಲಿನ ಬಾಗಿಲ ಜಗಲಿಯ ಮೇಲೆಯೇ ಬಿದ್ದಿರುತಿತ್ತು. ಇದರ ಮೈ ಸ್ವಲ್ಪ ಒಣಗಿಕೊಂಡೇ ಇತ್ತು. ಸಂಪಗೆ ಮಾಡುತಿದ್ದ ಚೇಷ್ಟೆ ಯಾವುದೂ

ಇದರಲ್ಲಿ ಇರಲಿಲ್ಲ. ಇದರ ಒಡೆಯನಾದ ಒಕ್ಕಲಿಗನು ಬಡವನಾದ್ದರಿಂದ ಅದರ ಹೊಟ್ಟೆಗೆ ಎಷ್ಟು ಬೇಕೋ ಅಷ್ಟು ತಿಂಡಿಯನ್ನು ಮಾತ್ರ ಹಾಕುತಿದ್ದನು. ಹೆಚ್ಚಾಗಿ ಹಾಕುತಿರಲಿಲ್ಲ. ಮಲ್ಲಿಗೆಯು ಅದನ್ನು ತಿಂದು ಜೀರ್ಣಿಸಿಕೊಳ್ಳುತಿತ್ತು. ಹೆಚ್ಚು ತಿಂಡಿಯನ್ನು ತಿಂದ ಅಭ್ಯಾಸವೇ ಅದಕ್ಕಿರಲಿಲ್ಲ. ತನ್ನ ಜೊತೇ ನಾಯಿಯಹಾಗೆ ಮನೆಯಲ್ಲಿಯೇ ಓಡಿಯಾಡಿಕೊಂಡು ಮಡಕೇಹುಲಿಯಾಗಿರದೆ ಯಾವಾಗಲೂ ಒಕ್ಕಲಿಗನ ಸಂಗಡ ಹೊಲದಲ್ಲಿಯೇ ಓಡಿಯಾಡಿಕೊಂಡಿರುತಾ, ಹೊಟ್ಟೆಗೆ ಸಾಲದೆ ಶ್ರಮಪಡುತಾ, ಅಲ್ಲಿಬಿದ್ದು ಇಲ್ಲಿಬಿದ್ದು ಗಟ್ಟಿರಾಸಾಗಿ, ಬಹಳ ಚಟುವಟಿಕೆಯುಳ್ಳದ್ದಾಗಿತ್ತು. ಒಕ್ಕಲಿಗನ ಕುರೀಮಂದೆಯನ್ನು ಕಾಡಿನಲ್ಲಿ ಕಾದುಕೊಂಡಿರುವಾಗ್ಗೆ ತೋಳಗಳ ಸಂಗಡ ಜಗಳಕ್ಕೆ ಹೋಗಿ ಇದಕ್ಕೆ ಅಲ್ಲಲ್ಲಿ ಗಾಯವೂ ಆಗಿತ್ತು. ಹೀಗೆ ಆಗಾಗ್ಗೆ ಕಾದಿಕಾದಿ ಅಭ್ಯಾಸವಾಗಿದ್ದ ಕಾರಣ, ಮಲ್ಲಿಗೆಗೆ ಧೈರ್ಯ ಹೆಚ್ಚಿ ಇದು ಯಾತಕ್ಕೂ ಹೆದರದೇ ಇರುತಿತ್ತು. ಇದು ಮಂದೆ ಕಾಯುವುದಕ್ಕೆ ಮೊದಲುಮಾಡಿದ ಕಾಲದಿಂದ ಒಂದು ಕುರಿಯೂ ಹೋಗದೆ ಎಲ್ಲವೂ ಒಕ್ಕಲಿಗನ ಮನೆಗೆ ಕ್ಷೇಮವಾಗಿ ಸಾಯಂಕಾಲಕ್ಕೆ ಬಂದು ಸೇರುತಿದ್ದವು. ಯಾವ ತಿಂಡಿ ಎಲ್ಲಿ ಬಿದ್ದಿದ್ದಾಗ್ಯೂ ಅದನ್ನು ಮುಟ್ಟುತಿರಲಿಲ್ಲ. ಒಕ್ಕಲಿಗನಿಗೆ ಮನೆಯಿಂದ ಅವನ ಹೆಂಡತಿ ಹಿಟ್ಟನ್ನು ತಂದು ಹೊಲದ ಭಾವೀತಡಿಯಲ್ಲಿ ಇರಿಸಿ ಆಚೆ ಈಚೆ ಹೋದರೆ, ಆ ಹಿಟ್ಟನ್ನು ಕಾಗೆಮೊದಲಾಗಿ ಯಾವುದೂ ಮುಟ್ಟದಹಾಗೆ ಮಲ್ಲಿಗೆಯು ದೂರಾ ಕೂತು ನೋಡಿಕೊಳ್ಳುತಿತ್ತೇ ಹೊರತು ಅದನ್ನು ಮುಟ್ಟುತಿರಲಿಲ್ಲ. ತನ್ನ ಒಡೆಯ ಬಂದಮೇಲೆ ಅವನು ಆಹಾರವನ್ನು ತಿಂದು ಉಳಿದುದನ್ನು ಇದಕ್ಕೆ ಹಾಕಿದರೆ ಅದನ್ನು ತಿಂದು ತೃಪ್ತಿಯಾಗುತಿತ್ತು. ಯಾವಾಗಲೂ ಹೊರಗೆ ಇದ್ದು ಗಾಳಿ ಮಳೆಗಳಿಂದ ಬಡಿಸಿಕೊಂಡ ಅಭ್ಯಾಸವಾಗಿದ್ದಕಾರಣ, ಯಾವ ಬಿರುಗಾಳಿಗೂ ಹೆದರದೆ ಕುರಿಯನ್ನು ಕಾಯುತಿತ್ತು. ಎಷ್ಟೇ ಚಳಿಯಾಗಿರಲಿ, ನೀರು ಎಷ್ಟೇ ಆಳವಾಗಿರಲಿ ಯಜಮಾನನ ಸನ್ನೆ ನೋಡಿಕೊಂಡು ನೀರಿನೊಳಕ್ಕೆ ಹೋಗಿ ಬೀಳುತಿತ್ತು.

ಒಂದಾನೊಂದುದಿನ ಈ ಒಕ್ಕಲಿಗನ ಒಡೆಯನಾದ ಗೌಡನು

ತನ್ನ ಭೂಮಿಯನ್ನು ನೋಡಿಕೊಂಡು ಬರಬೇಕೆಂದು ಹೊರಟು ಸಂಪಗೆ ಯನ್ನು ತನ್ನ ಜೊತೆಯಲ್ಲಿಯೇ ಕರೆತಂದನು. ಹೊಸಜನರು ಯಾರಾ ದರೂ ಬಂದರೆ ನಾಯಿಗಳು ಎದ್ದು ಅವರ ಸುತ್ತಮುತ್ತಲೂ ಸುತ್ತಿ ಯಾಡುವುದು, ಅವರನ್ನು ಮೂಸಿನೋಡುವುದು ಹೀಗೆಲ್ಲಾ ಮಾಡು ವುದು ಉಂಟಷ್ಟೆ. ಅದೇ ಪ್ರಕಾರ ಗೌಡ ಅಲ್ಲಿಗೆ ಬಂದು ತಲಪಿದ ಕೂಡಲೆ ಮಲ್ಲಿಗೆಯು ಇವನನ್ನು ಮೂಸಿನೋಡಿ ಅಲ್ಲಲ್ಲಿ ಸುಳಿದಾಡಿತು. ಆಗ ಗೌಡನು ಒರಟಾಗಿ ಪರಪರಕಲಾಗಿ ಕಾಣಿಸಿಕೊಳ್ಳುತಿದ್ದ ಈ ಮಲ್ಲಿಗೆಯನ್ನು ನೋಡಿ ಅಸಹ್ಯಪಡುತಾ, ಇದನ್ನು ಅಲಕ್ಷ್ಯವಾಗಿ ಕಂಡನು. ಸಂಪಗೆಯಲ್ಲಿದ್ದ ಚಾಕಚಕ್ಯಗಳು ಇದರಲ್ಲಿ ಕಾಣಬರಲಿಲ್ಲ. ಇದು ಒಂದು ಕೆಲಸಕ್ಕೂ ಬಾರದ ಎಂಜಲಹಾಳೀ ನಾಯಿ ಎಂದು ಗೌಡ ತಿಳಿದುಕೊಂಡಿದ್ದನು. ಈ ಸಮಯದಲ್ಲಿ ಈ ದುರಭಿಪ್ರಾಯವನ್ನು ಹೋಗಲಾಡಿಸತಕ್ಕಂಥಾ ಒಂದು ಸಂಗತಿ ಜರುಗಿತು.

ಗೌಡನು ಅಲ್ಲಿಗೆ ಬಂದು ಎರಡು ಮೂರು ದಿವಸವಾದಮೇಲೆ ತನ್ನ ಭೂಮಿಗಳನ್ನೆಲ್ಲಾ ಅಲ್ಲಲ್ಲಿ ನೋಡಿಕೊಳ್ಳುತಾ ಸ್ವಲ್ಪ ಒತ್ತಾದ ಕಾಡಿನಲ್ಲಿ ಹೋಗುತಿದ್ದನು. ಈ ನಾಯಿಗಳೆರಡೂ ಅವನ ಹಿಂದೆ ಹೋಗುತಿದ್ದವು. ಸಮೀಪವಾದ ಒಂದು ಹೊದರಿನಲ್ಲಿ ಒಂದಾನೊಂದು ಸಿವಂಗಿಯು ಹೊಟ್ಟೆಗೆ ಕಾಣದೆ, ಏನಾದರೂ ಸಿಕ್ಕೀತೆ, ಬಾಯಿಗೆ ಹಾಕಿಕೊಂಡೇನೆ, ಎಂದು ಕಾದುಕೊಂಡು ಕೂತಿತ್ತು. ಅದು ಮನುಷ್ಯ ಬರುವ ಸದ್ದನ್ನು ಕೇಳಿ ಹೊದರಿನಿಂದ ಈಚೆಗೆ ಹೊರಟು ಹಾರಿಹಾರಿ ಬರುತಾ ನೆಗೆದು ಈ ಗೌಡನ ಮೇಲೆ ಬೀಳುವುದಕ್ಕೆ ಬಂತು. ಇವನಿಗೆ ಕಕಮಕ ಹಿಡಿಯಿತು. ಏನೂ ತೋರಲಿಲ್ಲ. ಈ ಗಾಬರಿಗೆ ಅನು ಸಾರವಾಗಿ, ಜೊತೆಯಲ್ಲಿ ಬರುತ್ತಿದ ಮೆಚ್ಚಿನ ಸಂಪಗೆಯು ಒಡೆಯ ನಿಗೆ ಸಮಯದಲ್ಲಿ ಸಹಾಯಮಾಡದೆ ಬಾಲವನ್ನು ಎರಡು ಕಾಲು ಸಂದಿಗೆ ಸೇರಿಸಿಕೊಂಡು ಭಯದಿಂದ ಅರಚಿಕೊಳ್ಳುತಾ ಅವನ ಹಿಂದೆ ಓಡಿಹೋಯಿತು. ಗೌಡನ ಆಶೆ ನಿರಾಶೆಯಾಗುತ ಬಂತು. ಇವನ ಹಿಂದೆಯೇ ಸದ್ದುಮಾಡದೆ ಇವನ ಕಣ್ಣಿಗೆ ಕಾಣಿಸಿಕೊಳ್ಳದೆ ದೂರ ದಲ್ಲಿ ಮೆಲ್ಲಗೆ ಬರುತಿದ್ದ ಮಲ್ಲಿಗೆಯು ಕ್ಷಣಮಾತ್ರದಲ್ಲಿ ಅಂಬು

ಎಸೆದಹಾಗೆ ಓಡಿಬಂದು ಬಹುಧೈರ್ಯದಿಂದಲೂ ಚಮತ್ಕಾರದಿಂದಲೂ ಸಿವಂಗಿಯಮೇಲೆ ಹಾರಿ ಬಿತ್ತು. ಇದು ಬಿದ್ದಪೆಟ್ಟಿಗೇ ಸಿವಂಗಿಯು ತತ್ತರಿಸಿಹೋಗಿ ಕೆಳಕ್ಕೆ ಬಿತ್ತು; ತರುವಾಯ ಚೇತರಿಸಿಕೊಂಡು ಕೂಡಲೆ ಎದ್ದು ತನ್ನ ಪಂಜದಿಂದ ಅತಿ ಬಿರುಸಾಗಿ ನಾಯಿಯ ಮುಖದಮೇಲೆ ಒಂದು ಏಟಹಾಕಿತು. ಮಲ್ಲಿಗೆಯು ಅದನ್ನು ತಪ್ಪಿಸಿಕೊಂಡು ತನ್ನ ಹಲ್ಲುಗಳಿಂದ ಸಿವಂಗಿಯ ಕತ್ತನ್ನು ಕಡಿಯಿತು. ಹೀಗೆ ಇವೆರಡಕ್ಕೂ ಘೋರವಾದ ಜಗಳ ಹತ್ತಿತು. ಬಹಳ ಹೊತ್ತು ಕಾದಿ-ಕಾದಿ ಎರಡೂ ತಟ್ಟಾಗಿ ಹೋದವು. ಎರಡರ ಮೈಯೂ ರಕ್ತಮಯವಾಯಿತು. ಮಲ್ಲಿಗೆಯು ಸಿವಂಗಿಯ ಆಯಸ್ಥಳವನ್ನು ಹಿಡಿದು ಕಚ್ಚಲು, ಸಿವಂಗಿಯು ಬಿದ್ದು ಪ್ರಾಣವನ್ನು ಬಿಟ್ಟಿತು. ದೂರದಲ್ಲಿ ನಿಂತು ಈ ಘೋರವಾದ ಕದನವನ್ನು ನೋಡುತಿದ್ದ ಗೌಡನ ಸಮೀಪಕ್ಕೆ ಮಲ್ಲಿಗೆಯು ಓಡಿಬಂತು. ಅದಕ್ಕೂ ಪೂರಾ ಏಟು ಬಿದ್ದಿತ್ತು. ಗೌಡನು ಆ ದಿನ ಪ್ರಾಣ ಉಳಿದುದಕ್ಕೆ ಸಂತೋಷಪಡುತಾ ಮಲ್ಲಿಗೆಯ ಮೈ ರಕ್ತವನ್ನು ಒರಸಿ ಅದನ್ನು ಆದರಿಸಿದನು. ಇದರಿಂದ-ಯಾರೂ ಮೇಲೆ ಮೇಲೆ ನೋಡಿ ಮೋಸ ಹೋಗಕೂಡದು; ಹೊರಗಡೆ ಎಷ್ಟು ಪರಕಲಾಗಿದ್ದರೂ ಒಳಗೆ ಉತ್ತಮವಾದ ಯೋಗ್ಯತೆ ಇರಬಹುದು; ಪ್ರಾಸಾದವಾಸಿಗಳಲ್ಲಿ ಶುದ್ಧಶೂನ್ಯವಾಗಿರುವ ಸದ್ಗುಣಗಳು ಗುಡಿಸಿಲಿನ ಬಡವರಲ್ಲಿ ಕಂಡು ಬರಬಹುದು, ಎಂದು ಆ ಗೌಡನು ಅನುಭವದಿಂದ ತಿಳಿದುಕೊಂಡನು.

ಈ ರೀತಿಯಲ್ಲಿ ಓದಿ ನಿಲ್ಲಿಸಲು, ರಾಮಜೋಯಿಸನು—ಬಹು ಚೆನ್ನಾಗಿದೆ; ಸಂತೋಷವಾಯಿತು. ಹುಡುಗರು ಶ್ರಮಪಟ್ಟರೆ ದೊಡ್ಡವರು ಮಾಡತಕ್ಕಕೆಲಸಗಳನ್ನು ಅವರಿಗೆ ಸಮಸಮವಾಗಿ ಮಾಡಿಯಾರು. ಇದು ಹಾಗಿರಲಿ ಮದನ, ಈಗ ನೀನು ಓದುತಿದ್ದ ಕಥೆ ಹೇಗಿದೆ? ನೋಡುವುದಕ್ಕೆ ಸುಂದರವಾಗಿ ಒಲಪುಮಾಡುತಿದ್ದು ತನ್ನೊಡೆಯನನ್ನು ಸಿವಂಗಿ ತಿಂದುಕೊಳ್ಳಲೆಂದು ಬಿಟ್ಟು ಬಿಟ್ಟು ಓಡಿಹೋದ ಸಂಪಗೆಯಂಥಾ ನಾಯಿ ನಿನಗೆ ಬೇಕೆ? ಇಲ್ಲ, ಯಾರೂ ಲಕ್ಷ್ಯಮಾಡದೆ ತೆಳ್ಳಗೆ ಪರಕಲಾಗಿದ್ದು ಯಜಮಾನನಿಗೋಸ್ಕರ ತನ್ನ ಪ್ರಾಣವನ್ನು ಒಪ್ಪಿ

ಸಲು ಹೋದ ಮಲ್ಲಿಗೆಯಂಥಾ ನಾಯಿ ನಿನಗೆ ಬೇಕೆ? ಎಂದು ಜೋಯಿಸ ಕೇಳಿದನು. ಆಗ ಮದನನು ಉಪಾಧ್ಯಾಯನನ್ನು ಕುರಿತು —ನನಗೆ ಮಲ್ಲಿಗೆಯಂಥಾ ನಾಯಿಯೇನೋ ಬೇಕು. ಆದರೆ ಅದಕ್ಕೆ ಮೈ ತೊಳೆದು ಒಳ್ಳೇ ಆಹಾರವನ್ನು ಕೊಟ್ಟು ಅದನ್ನು ಸುಖವಾಗಿ ಇಟ್ಟುಕೊಂಡಿರುತಿದ್ದೆನೇ ಹೊರತು, ಹೀಗೆ ಅದನ್ನು ಕಂಡರೆ ಲಕ್ಷ್ಯವಿಲ್ಲದೆ ಬಿಟ್ಟು ಬಿಡುತಿರಲಿಲ್ಲ, ಎಂದನು. ಕೂಡಲೆ ಜೋಯಿಸನು—ನೀನು ಹಾಗೆ ಮಾಡಿದ್ದರೆ, ಮಲ್ಲಿಗೆಯೂ ಸಂಪಗೆಯಂತೆಯೇ ದಪ್ಪವಾಗಿ ಇದ್ದ ಕಡೆಯಲ್ಲಿಯೇ ಇರುತ್ತಾ ಹೇಡಿಯಾಗುತಿತ್ತು. ಆದರೆ ಈ ಕಥೆ ಇನ್ನೂ ಮುಂದಕ್ಕೆ ಇದೆಯಷ್ಟೇ ; ಅದನ್ನು ಕೊನೆಗಾಣಿಸು, ಮುಂದಕ್ಕೆ ಏನಾಗುವುದೋ ನೋಡೋಣ, ಎಂದನು. ಆಗ ಮದನಕುಮಾರನು ಕಥೆಯನ್ನು ಮುಂದಕ್ಕೆ ಸಾಗಿಸಿದನು—

ಮಲ್ಲಿಗೆಯ ಗುಣಾತಿಶಯಗಳನ್ನು ಕಂಡು ಗೌಡನಿಗೆ ಬಹು ಸಂತೋಷವಾಯಿತು; ಆದಕಾರಣ ತನ್ನ ಸಮೀಪದಲ್ಲಿಯೇ ಅದನ್ನು ಇರಿಸಿಕೊಳ್ಳಬೇಕೆಂಬ ತಾತ್ಪರ್ಯದಿಂದ, ತನಗೆ ಮಲ್ಲಿಗೆಯನ್ನು ಇನಾಮಾಗಿ ಕೊಡೆಂದು ಒಕ್ಕಲಿಗನನ್ನು ಕೇಳಿಕೊಂಡನು. ಒಕ್ಕಲುಮಗನಿಗೆ ಗೌಡನ ಅಪೇಕ್ಷೆಯಂತೆ ಮಲ್ಲಿಗೆಯನ್ನು ಅವನ ಸಂಗಡ ಕಳುಹಿಸಿ ಕೊಡುವುದು ಇಷ್ಟವಿಲ್ಲದ್ದಿದ್ದಾಗ್ಯೂ, ಯಜಮಾನನ ಮಾತನ್ನು ಮೀರುವುದಕ್ಕಾಗಲಿಲ್ಲ. ಗೌಡನು ಹೇಡಿಯಾದ ಸಂಪಗೆಯ ಮೇಲೆ ಅತ್ಯಾಗ್ರಹಗೊಂಡು, ಅದನ್ನು ಬೈದು, ಕಾಡಿನಲ್ಲಿಯೇ ಬಿದ್ದಿರಲಿ, ಅದಕ್ಕೆ ಆಹಾರವನ್ನು ಹಾಕಬೇಡವೆಂದು ಹೇಳಿ, ಮಲ್ಲಿಗೆಯನ್ನು ಕರೆದುಕೊಂಡು ಊರಿಗೆ ಹೊರಟು ಹೋದನು.

ಗೌಡ ಹೊರಟುಹೋದ ತರುವಾಯ, ಒಕ್ಕಲಿಗನು ಸಂಪಗೆಗೆ ಹಿಟ್ಟನ್ನು ಹಾಕದೆ, ಈ ಕೆಟ್ಟ ನಾಯಿ ಸತ್ತು ಹೋಗಲೆಂದು ಸುಮ್ಮನಿದ್ದನು. ಆದರೆ ಅದರ ಆಕಾರವೂ, ರೂಪೂ, ಒಕ್ಕಲಿಗನನ್ನು ಕಂಡಾಗಲೆಲ್ಲಾ ಬಾಲವನ್ನು ಅಲ್ಲಾಡಿಸಿಕೊಂಡು ಅವನ ಕಾಲನ್ನು ನೆಕ್ಕುವುದಕ್ಕೆ ಬರುವ ವಿನ್ಯಾಸವೂ ಇವನ ಮನಸ್ಸನ್ನು ಕರಗಿಸಿತು. ಮತ್ತು ಇದನ್ನು ಕಂಡವರೆಲ್ಲಾ ಅದರ ಮೇಲಿನ ಪ್ರೀತಿಯಿಂದ ಅದಕ್ಕೆ ಆಹಾರವನ್ನು

ಹಾಕೆಂದು ಆ ರೈತನಿಗೆ ಹೇಳಿದರು. ಆಗ ಒಕ್ಕಲಿಗನು ಬೇರೇ ಗುಣ ಉಂಟಾಗಲಾರದೆ. ನೋಡಬೇಕೆಂದು ನಿಶ್ಚಯಿಸಿಕೊಂಡು, ಮಲ್ಲಿಗೆಗೆ ಹಾಕುತ್ತಿದ್ದ ಹಾಗೆಯೇ ಸ್ವಲ್ಪ ಹಿಟ್ಟುಸೊಪ್ಪನ್ನು ಹಾಕಿ ಸಾಕುತಿದ್ದನು. ಮೊದಲಿಗೆ ಈಗ ಆಹಾರ ಕಡಮೆಯಾಯಿತು; ಮೈ ಸಣ್ಣಗಾಯಿತು; ಲವಲವಿಕೆ ಹೆಚ್ಚಾಯಿತು. ಒಂದು ದಿವಸ ಸಂಪಗೆಯು ಮಳೆಯಲ್ಲಿ ನೆನೆದು ಮನೆಗೆ ಓಡಿಬಂದು ಬೆಂಕಿ ಉರಿಯುತಿದ್ದ ಒಲೇ ಹತ್ತಿರಕ್ಕೆ ಹೋಯಿತು. ಹೀಗೆ ಮಳೆಯಲ್ಲಿ ನೆನದಾಗಲೆಲ್ಲಾ ಬೆಂಕೀ ಕಾಸಿ ಕೊಳ್ಳುವುದಕ್ಕೆ ಒಲೆಯ ಹತ್ತಿರಕ್ಕೆ ಹೋಗುವ ಅಭ್ಯಾಸ ಇದಕ್ಕಿತ್ತು. ಆದಕಾರಣ ಹಿಟ್ಟನ್ನು ಮಾಡುತಾ ಕೂತಿದ್ದ ಒಕ್ಕಲಿಗನ ಹೆಂಡತಿಯ ಹತ್ತಿರ ಹೋಗಿ ಮೈಯನ್ನೂ ತಲೆಯನ್ನೂ ಝಾಡಿಸುತಾ ಒಲೆಯ ಮುಂದೆ ಮಲಗಿಕೊಂಡಿತು. ಆ ಹೆಂಗಸು ಅದನ್ನು ಆಚೆಗೆ ಅಟ್ಟಿ ಬಿಟ್ಟಳು. ಚಳಿಯಲ್ಲಿ ಶುನಕವು ಆಚೆಗೆ ಹೊರಟುಹೋಗಬೇಕಾಗಿ ಬಂತು. ನಿತ್ಯವೂ ಹೀಗೆಯೇ ಮಳೆಯಲ್ಲಿಯೂ ಗಾಳಿಯಲ್ಲಿಯೂ ನಡುಗಿ ನಡುಗಿ ಗಟ್ಟಿಯಾಯಿತು. ಎಷ್ಟು ಚಳಿಯಾದರೂ ತಡೆದುಕೊಳ್ಳುವ ಅಭ್ಯಾಸ ಹುಟ್ಟಿತು.

ಪೂರ್ವಕ್ಕಿಂತಲೂ ಈಚೆಗೆ ಇದರ ಅಭ್ಯಾಸಗಳೆಲ್ಲಾ ಬದಲಾಯಿಸಿ ದವು. ಆದರೂ ಈ ಸಂಪಗೆಗೆ ಕಾಡುಮೃಗಗಳ ವಿಷಯದಲ್ಲಿ ಏನೋ ಭಯವಿತ್ತು. ಒಂದು ದಿವಸ ಕಾಡಿನಲ್ಲಿ ಈ ನಾಯಿ ಒಂದೇ ಹೋಗು ತಿರಲು, ಒಂದು ತೋಳ ಇದನ್ನು ದೂರದಿಂದ ಕಂಡು, ಓಡಿ ಬಂದು ಸಂಪಗೆಯಮೇಲೆ ಬಿದ್ದು ಅದರ ಕತ್ತನ್ನು ಹಿಡಿದುಕೊಂಡಿತು. ನಾಯಿ ತಪ್ಪಿಸಿಕೊಂಡು ಹೊರಡಬೇಕೆಂದು ಪ್ರಯತ್ನ ಮಾಡಿದರೂ ತೋಳ ಬಿಡಲಿಲ್ಲ. ಯಾರಾದರೇನು? ಸಮಯ ಬಂದಾಗ ಹೇಡಿಗಳೂ ಕೂಡ ಶೂರರಾಗುತ್ತಾರೆ. ಅತ್ತಿತ್ತ ಅಡ್ಡಾಡುವುದಕ್ಕೆ ಆಸ್ಪದವಿಲ್ಲದೆ ಸಂಪಗೆಯು ಗರ್‍ರನೆ ತಿರುಗಿ ಉಪಾಯವಾಗಿ ತನ್ನ ಶತ್ರುವಿನ ಕತ್ತನ್ನು ಬಲವಾಗಿ ಹಿಡಿದು ಕಚ್ಚಿತು. ತೋಳವು ಒಂದು ಗಳಿಗೆಯಲ್ಲಿ ಸತ್ತು ಒರಗಿತು. ನಾಯಿಯನ್ನು ಒಕ್ಕಲಿಗನು ಹುಡುಕುತಾ ಬಂದು ಅದನ್ನು ಕಂಡು ಸಂತೋಷದಿಂದ ಅದರ ಮೈ ತಡವರಿಸಿ, ಅದಕ್ಕೆ ಸಂತೋಷವಾಗುವಂತೆ

ಮಾತನಾಡಿದನು. ಇಷ್ಟರ ಮಟ್ಟಿಗೆ ಅದನ್ನು ಒಕ್ಕಲಿಗನು ಯಾವಾ ಗಲೂ ಮುದ್ದಿಸಿರಲಿಲ್ಲ. ತನ್ನ ಯಜಮಾನನಿಗೆ ಸಂತೋಷ ಉಂಟಾ ದ್ದನ್ನು ಕಂಡು ನಾಯಿಗೆ ಬಹು ಪ್ರೋತ್ಸಾಹವಾಯಿತು. ಇದಕ್ಕೆ ಪೂರ್ವ ದಲ್ಲಿ ಎಷ್ಟು ಅಧೈರ್ಯವಿತ್ತೋ ಈಚೆಗೆ ಅಷ್ಟು ಧೈರ್ಯ ಹೆಚ್ಚಿತು. ಆ ಸುತ್ತಲೂ ಸಂಪಗೆಯ ಹೆಸರು ಎತ್ತಿದರೆ ಕ್ಷುದ್ರ ಮೃಗಗಳಿಗೆಲ್ಲಾ ಗಡ ಗಡನೆ ನಡುಗುವ ಮಟ್ಟಿಗೆ ಆಯಿತು.

ಅತ್ತ ಮಲ್ಲಿಗೆಯು ಗೌಡನ ಊರಿಗೆ ಹೋಗಿ, ಯಾವಬೇಟೆಯೂ ಇಲ್ಲದೆ ಗೌಡನ ಮನೆಯಲ್ಲಿ ತಿನ್ನುವುದು ಅವನ ಜಗಲೀ ಮೇಲೆ ಮಲ ಗಿರುವುದು, ಇಷ್ಟು ಕೆಲಸದಲ್ಲಿ ಕಾಲವನ್ನು ಕಳೆಯುತಿತ್ತು. ಯಜ ಮಾನನಿಗೆ ಪೂರ್ವದಲ್ಲಿ ಇದು ಮಾಡಿದ ಉಪಕಾರಸ್ಮರಣೆಯಿಂದ ಎಲ್ಲರೂ ಇದನ್ನು ಆದರಿಸಿ ಹೆಚ್ಚಾಗಿ ಉಪಚಾರವನ್ನು ಮಾಡುತಿದ್ದರು. ಸಾಧನೆ ಇಲ್ಲದಿದ್ದರೆ ಎಂಥಾ ಸುಗುಣವಾದರೂ ಮಸಣಿಸಿ ಹೋಗುವುದು. ಸಂಪ ಗೆಗೆ ಪೂರ್ವದ ಧೈರ್ಯವೂ ಶಕ್ತಿಯೂ ಕಡಮೆಯಾಯಿತು, ಪಾಲುಮಾರಿಕೆ ಗುಣ ಹೊಸದಾಗಿ ಬಂತು.

ಒಂದಾನೊಂದು ದಿವಸ ಗೌಡನು ಪುನಃ ತನ್ನ ಭೂಮಿಯನ್ನು ನೋಡಿಕೊಂಡು ಹೋಗಬೇಕೆಂದು ಹಳ್ಳಿಗೆ ಹೋದನು. ಮಲ್ಲಿಗೆಯು ತನ್ನ ರಕ್ಷಣೆಗಾಗಿ ಇರಲೆಂದು ಅದನ್ನು ಕರೆದುಕೊಂಡು ಬಂದನು. ಆ ಗ್ರಾಮದ ಸಮೀಪದಲ್ಲಿ ಹೊಸದಾಗಿ ಒಂದು ಕಿರುಬ ಬಂದು ಸೇರಿ ಕೊಂಡು ದನಕರುಗಳಿಗೂ ಕುರಿಗಳಿಗೂ ಬಹುಬಾಧೆಯನ್ನು ಮಾಡು ತಿತ್ತು. ಇದನ್ನು ಕೇಳಿ ಗೌಡನು ಸಂಪಗೆಯನ್ನು ಕರೆದುಕೊಂಡು ಹೋಗಿ ಆ ಕಿರುಬವನ್ನು ಬೇಟೆಯಾಡಲು ಬಿಟ್ಟನು. ಕಿರುಬ ಕೊನೆಗೆ ಸಿಕ್ಕಿತು. ಅದು ಆರ್ಭಟೆ ಮಾಡಿದ್ದನ್ನು ಕೇಳಿ ಮಲ್ಲಿಗೆ ಹೆದರಿಕೊಂಡು ಗೌಡನ ಹಿಂದುಗಡೆಗೆ ಓಡಿಹೋಯಿತು. ಗ್ರಾಮಸ್ಥರ ಸಂಗಡ ಬಂದಿದ್ದ ಸಂಪಗೆಯು ಕೂಡಲೇ ಹಾರಿ ಹೊದರಿಗೆ ಹೊಕ್ಕು ಆ ಕಿರುಬವನ್ನು ಹಿಡಿದು ಕೊಂದುಹಾಕಿತು. ಗೌಡನಿಗೆ ಸಂಪಗೆಯ ಗುರುತೇ ಸಿಕ್ಕಲಿಲ್ಲ. ಇದು ಯಾವುದು ಎಂದು ಅವನು ಕೇಳಲು ಒಕ್ಕಲಿಗನು ಸಂಪಗೆಯೆಂದು ಹೇಳಿದನು ಅದನ್ನು ಕೇಳಿದ ಕೂಡಲೆ ಗೌಡನಿಗೆ ಆಶ್ಚರ್ಯವುಂಟಾಗಿ,

ಮುಸಂಡಿಯಾಗಿ ಇದ್ದ ಕಡೆಯಲ್ಲಿಯೇ ಇರತಕ್ಕವನಿಗೆ ಇದ್ದ ಧೈರ್ಯವೂ ಹೋಗುವುದು; ಗುಣವಿದ್ದರೇನು? ಅದಕ್ಕೆ ತಕ್ಕ ಸಾಧನೆ ಇರಬೇಕು, ಎಂದು ನುಡಿದನು.

---

## ೫ನೆ ಅಧ್ಯಾಯ

ಮೇಲೆ ಕಂಡ ರೀತಿಯಲ್ಲಿ ಕಥೆ ಮುಗಿಯಿತು. ಆಗ ರಾಮ ಜೋಯಿಸನು ಹೇಳಿದ್ದೇನೆಂದರೆ—ಮದನ ಕುಮಾರನು ಓದುವ ಮಟ್ಟಿಗೆ ಪಾಂಡಿತ್ಯವನ್ನು ಸಂಪಾದಿಸಿದ್ದನ್ನು ನೋಡಿ ನಾನು ಸಂತೋಷ ಪಟ್ಟೆ. ಈಗ ಓದುವ ವಿಷಯದಲ್ಲಿ ಅವನಿಗೆ ಸಹಾಯಬೇಡ. ಎಲ್ಲಿ ಯಾದರೂ ಸರಿಯೆ ಕೂತುಕೊಂಡು ಗ್ರಂಥವನ್ನು ಓದಿ ಸಂತೋಷಪಡ ಬಲ್ಲ. ನಮ್ಮ ಭಾಷೆಯಲ್ಲಿರತಕ್ಕ ಸಮಸ್ತ ಗ್ರಂಥಗಳೂ ಇಲ್ಲಿಂದ ಮುಂದಕ್ಕೆ ಅವನಿಗೆ ಸ್ವಾಧೀನವಾಗುವುವು. ಈ ದಿನ ನಾವು ಓದಿಸಿ ದಂಥಾ ಚಿಕ್ಕ ಕಥೆಗಳಾದರೂ ಸರಿಯೆ, ಮಹಾತ್ಮರ ಚರಿತ್ರೆಯಾದರೂ ಸರಿಯೆ, ದೇಶಾಂತರಗಳಲ್ಲಿ ಸಿಕ್ಕುವ ಪಶು ಪಕ್ಷಿ ಮೃಗಾದಿಗಳ ಸ್ವಭಾವ ವನ್ನು ಕುರಿತು ಬರೆದಿರುವ ಲೇಖನಗಳಾದರೂ ಸರಿಯೆ, ಯಾವುದಾ ದರೂ ಇತಃಪರ ಆತ ಓದಬಹುದು ಮುಖ್ಯವಾಗಿ ಇನ್ನು ಮುಂದಕ್ಕೆ ಅವನ ಕೈಲಾಗದೇ ಇರತಕ್ಕದ್ದು ಇಂಥಾದ್ದು ಎಂದು ಹೇಳುವುದಕ್ಕೆ ಯಾವುದೂ ತೋರಲಿಲ್ಲ. ಈತನು ಮುಂದಕ್ಕೆ ತಾನೂ ದೊಡ್ಡ ಪಂಡಿತ ನಾಗಿ ಇತರರಿಗೂ ಪಾಂಡಿತ್ಯವನ್ನು ಉಂಟುಮಾಡಲು ಶಕ್ತಿಯುಳ್ಳವ ನಾಗಬಹುದೆಂದು ನನಗೆ ಕೋರಿಕೆ ಇದೆ, ಎಂದನು.

ಹೀಗೆ ಜೋಯಿಸನು ಸ್ತೋತ್ರ ಮಾಡಿದ್ದನ್ನು ಕೇಳಿ ಮದನ ಕುಮಾರನು ಉಬ್ಬಿ ಹೋಗಿ ನುಡಿದದ್ದೇನೆಂದರೆ,—ನಾನು ಪಾಂಡಿತ್ಯ ದಲ್ಲಿ ಯಾರಿಗೂ ಕಡಮೆಯಲ್ಲವೆನ್ನಿಸಿಕೊಳ್ಳಬೇಕೆಂದು ಖಂಡಿತಮಾಡಿ

ಕೊಂಡಿದೇನೆ. ನಾನು ಈಗ ಹುಡುಗನಾಗಿದ್ದಾಗ್ಲೂ ದೊಡ್ಡವರಿಗಿಂತಲೂ ಎಷ್ಟೋ ಬುದ್ಧಿವಂತ. ನಮ್ಮ ಅರಮನೆಯಲ್ಲಿ ನೂರಾರು ಜನ ಆಳುಗಳಿದಾರೆ, ಒಬ್ಬನಿಗಾದರೂ ನನ್ನ ಮಟ್ಟಿಗೆ ಓದುವುದಕ್ಕೆ ಬಾರದು, ಎಂದು ಅಹಂಕಾರಪಟ್ಟನು. ಈ ಮಾತನ್ನು ಜೋಯಿಸ ಕೇಳಿ ಆ ನಿಮ್ಮ ಆಳುಗಳಿಗೆ ಮಠವನ್ನಿಟ್ಟು ಓದಿಸಿದವರು ಯಾರು ಹೇಳು, ಎಂದನು. ಯಾರೂ ಇಲ್ಲ ಎಂದು ಮದನನು ಉತ್ತರ ಕೊಟ್ಟನು. ಕೂಡಲೆ ಉಪಾಧ್ಯಾಯನು ಆ ಬಾಲಕನನ್ನು ದುರಗುಟ್ಟಿಕೊಂಡು ನೋಡುತಾ—ಆದ ಕಾರಣ ಅವರು ದಡ್ಡರಾಗಿದ್ದರೆ ಏನು ಆಶ್ಚರ್ಯ? ನಿನಗೆ ಏನನ್ನೂ ಹೇಳಿಕೊಡದಿದ್ದರೆ ಬಹುಶಃ ನಿನಗೂ ಏನೂ ಬರುತಿರಲಿಲ್ಲ. ಈಗ ತಾನೆ ನಿನಗೆ ಏನು ಬರುತ್ತೆ? ಏನೇನೂ ಬಾರದು ಎಂದು ಹೇಳಿ ಮೂದಲಿಸಿದನು.

ಈ ರೀತಿಯಲ್ಲಿ ರಾಮಜೋಯಿಸನು ಮದನಕುಮಾರನ ವಿದ್ಯಾಭ್ಯಾಸವನ್ನು ಮೊದಲು ಮಾಡಿದನು. ಮದನನಾದರೊ ಸಹಜವಾಗಿ ಒಳ್ಳೇಸ್ವಭಾವ ಉಳ್ಳವನು. ಆದರೆ ಈ ಬಾಲಕನಿಗೆ ದುಸ್ವಭಾವಗಳನ್ನು ಕಲಿಸಿದ್ದರು. ಇದರಿಂದ ಅವನ ಸುಗುಣಗಳು ಈಚೆಗೆ ಒಂದೂ ಪ್ರಕಾಶಿಸದ ಹಾಗೆ ಅಡ್ಡಿಯಾಗಿತ್ತು. ಈ ಹುಡುಗನಿಗೆ ಯಾವಾಗಲೂ ಸ್ವಲ್ಪ ಮಾತಿಗೆಲ್ಲಾ ಅತಿಯಾಗಿ ಕೋಪಬರುತಿತ್ತು; ತನ್ನಂತೆ ಡಂಭವಾಗಿ ಬಟ್ಟೆಯನ್ನು ಹಾಕಿಕೊಳ್ಳದೆ ಮಾಸಲ ಬಟ್ಟೆಯನ್ನು ಹಾಕಿಕೊಂಡಿದ್ದವರೆಲ್ಲಾ ತನ್ನ ಚಾಕರರೆಂದು ತಿಳಿದುಕೊಂಡಿದ್ದನು.

ಆಗ ಒಂದಾನೊಂದು ಸಂಗತಿ ನಡೆಯಿತು. ಮದನನು ಒಂದು ದಿನ ಚೆಂಡನ್ನೂ ದಾಂಡನ್ನೂ ತೆಗೆದುಕೊಂಡು ಆಡುತಾ ಇರಲು, ಆ ಚೆಂಡು ಬೇಲಿಯಮೇಲೆ ಹಾರಿ ಒಂದು ತೋಟದೊಳಕ್ಕೆ ಬಿತ್ತು. ಮದನನು ಆ ತೋಟದಲ್ಲಿ ಒಂದು ಹರಕು ಬಟ್ಟೆಯನ್ನು ಸೊಂಟಕ್ಕೆ ಸುತ್ತಿಕೊಂಡು ಗಿಡಗಳಿಗೆ ನೀರು ಹಾಕುತಿದ್ದ ಒಬ್ಬ ಒಕ್ಕಲಿಗರ ಹುಡುಗನನ್ನು ನೋಡಿ,

ಮದನ—ಎಲಾ ಆ ಚಂಡನ್ನು ತೆಗೆದುಕೊಂಡು ಬಾರೆಲಾ.

ಆ ಚಿಕ್ಕ ಹುಡುಗನು ಇವ ಹೇಳಿದ ಮಾತನ್ನು ಕಿವಿಯಮೇಲೆ

ಹಾಕಿಕೊಳ್ಳದೆ ತನ್ನ ಕೆಲಸವನ್ನು ತಾನು ನೋಡುತಿದ್ದನು. ಅರಸು ಮಗನಿಗೆ ಆಗ್ರಹಬಂತು.

ಮದನ—ಏನೋ, ನಾನು ಹೇಳಿದ್ದು ನಿನ್ನ ಕಿವಿಗೆ ಬೀಳಲಿಲ್ಲ ವೇನೆಲಾ ?

ಹುಡುಗ—ನಾನೇನೂ ಕಿವಡನಲ್ಲ, ನೀನು ಹೇಳಿದ್ದು ಕೇಳಿತು.

ಮದನ—ಹಾಗಾದರೆ ಚಂಡನ್ನು ಎತ್ತಿಕೊಂಡುಬಾ.

ಹುಡುಗ—ನಾನು ಅದನ್ನು ತರಬೇಕೆಂದು ನನಗೆ ಅಗತ್ಯವಿಲ್ಲ.

ಮದನ—ನಿನಗೆ ಅಗತ್ಯ ಉಂಟಾಗುವ ಹಾಗೆ ಮಾಡಲೋ ? ಎರಡು ಬಿಸಿಬಿಸಿಯಾಗಿ ಬೇಕೊ ?

ಹುಡುಗ—ನೀನು ಬಡಪಾಯಿ, ನಿನ್ನ ಕೈಲೇನಾದೀತೆಲೆ ?— ಹೀಗೆಂದು ತಿರಸ್ಕರಿಸಿ ಅವ ಆಡಿದ ಮಾತನ್ನು ಕೇಳಿ ರಾಜಪುತ್ರನಿಗೆ ರೇಗಿಹೋಯಿತು; ಕೂಡಲೆ ಆ ಬಡ ಹುಡುಗನನ್ನು ಹಿಡಿದು ಹೊಡೆಯ ಬೇಕೆಂದು ಮದನ ಬೇಲಿಯನ್ನು ಹಾದು ಹೋಗಲು, ಕಾಲು ಜಾರಿ ಬಿದ್ದನು, ಒಂದೆರಡು ಮುಳ್ಳು ಮೈಗೆ ಬಲಿದುಕೊಂಡಿತು ; ತೊಟ್ಟಿದ್ದ ಮಖಮಲ್ಲಿನ ಅಂಗಿ ಹರಿದು ಹೋಯಿತು ; ಮೈಯೆಲ್ಲಾ ಮಣ್ಣಾಯಿತು. ಮಂಡಿ ತರೆದು ಹೋಯಿತು. ಅಲ್ಲಿದ್ದ ಒಂದು ಹೆಗ್ಗಣದ ಡೊಗರಿಗೆ ಕಾಲು ದೊಸಕೊಂಡು ಹೋದ್ದರಿಂದ, ಮೇಲಕ್ಕೆ ಏಳಲಾರದೆ ಹೋದನು. ಇವನ ಸ್ಥಿತಿಯನ್ನು ನೋಡಿ ಆ ಬಡ ಹುಡುಗನು ಪರಿತಾಪದಿಂದ ಮದನನನ್ನು ಮೇಲಕ್ಕೆ ಎತ್ತಿ ನಿಲಿಸಿ, ಚುಚ್ಚಿಕೊಂಡಿದ್ದ ಮುಳ್ಳನ್ನು ಕಿತ್ತು ಮಣ್ಣನ್ನು ಕೊಡವಿದನು. ಮದನನಿಗೆ ಬಹು ನಾಚಿಕೆಯಾಯಿತು; ಒಂದು ಮಾತನ್ನೂ ಆಡದೆ ಮನೆಗೆ ಓಡಿಹೋದನು. ರಾಮುಜೋಯಿ ಸನು ಇವನ ರೀತಿಯನ್ನು ಕಂಡು ರಾಜಪುತ್ರನಿಗೆ ಏನೋ ದೊಡ್ಡ ಪೆಟ್ಟಾಯಿತೆಂದು ತಿಳಿದು, ಹತ್ತಿರಕ್ಕೆ ಬಂದು ನೋಡಿ, ನಡೆದ ಸಂಗತಿ ಯನ್ನೆಲ್ಲಾ ಕೇಳಿ ನಗುತಾ, ಬಡ ಹುಡುಗರನ್ನು ಹಾಗೆ ಹೊಡೆಯುವು ದಕ್ಕೆ ಇನ್ನು ಮೇಲೆ ಹೋಗಬೇಡವೆಂದು ಮದನನಿಗೆ ಬುದ್ಧಿ ಹೇಳಿದನು.

ಮಾರನೇ ದಿನ ರಾಮುಜೋಯಿಸ, ಸುಮತಿ, ಮದನಕುಮಾರ, ಈ ಮೂರು ಮಂದಿಯೂ, ಎಂದಿನಂತೆ ತೋಟದ ಗುಡಿಸಿಲಿನಲ್ಲಿ ಸೇರಿ

ದರು. ಉಪಾಧ್ಯಾಯನು ಒಂದು ಕಥೆಯನ್ನು ಓದು ಎಂದು ಸುಮತಿಗೆ ಹೇಳಲು, ಅವನು ಓದಿದ್ದು ಹೇಗೆಂದರೆ :—

## ಕಯು, ಸಿಂಹ

ಅಸುರವುರವೆಂಬ ಒಂದು ಗ್ರಾಮದಲ್ಲಿ ಸಕ್ರೂರನೆಂಬ ಒಬ್ಬ ಹಣವಂತನಿದ್ದನು. ಇವನಿಗೆ ವಿಶೇಷವಾಗಿ ಭೂಸ್ಥಿತಿ ಇತ್ತು. ಈ ಭೂಮಿಗಳನ್ನು ವ್ಯವಸಾಯ ಮಾಡುವುದಕ್ಕಾಗಿ ತನ್ನ ಕೈಕೆಳಗೆ ಅನೇಕ ಜೀತಗಾರರನ್ನು ಇಟ್ಟುಕೊಂಡಿದ್ದನು. ಈ ಜೀತಗಾರರಿಗೆ ಒಡೆಯನು ಇಲ್ಲದ ಹಿಂಸೆಯನ್ನೆಲ್ಲಾ ಕೊಟ್ಟು ಅವರನ್ನು ಗೋಳು ಹುಯಿದುಕೊಳ್ಳುತಿದ್ದನು. ಅವರಲ್ಲಿ ಕಯನೆಂಬ ಒಬ್ಬ ಜೀತಗಾರನು ಯಜಮಾನನ ಹಿಂಸೆಯನ್ನು ತಡೆಯಲಾರದೆ ತನ್ನ ಮನಸ್ಸಿನಲ್ಲಿ—

ಇನ್ನು ಈ ಬಾಧೆಯನ್ನು ಸಹಿಸಲಾರೆ. ಕೊನೆಗೆ ಬಂತು. ಇಂಥಾ ಕಷ್ಟದಲ್ಲಿ ಬಾಳು ಬಾಳುವುದಕ್ಕಿಂತಲೂ, ಸಾಯುವುದು ಲೇಸು. ಇಂಥಾ ಒಡೆಯನ ಸೇವೆಯನ್ನು ಬಿಟ್ಟು ಎಲ್ಲಿಯಾದರೂ ಓಡಿಹೋಗಬೇಕು ; ಮತ್ತೆ ಇವನ ಕೈಗೆ ಏನಾದರೂ ನಾನು ಸಿಕ್ಕಿದರೆ ನನ್ನನ್ನು ಜೀವಸಹಿತ ಬಿಡುವುದಿಲ್ಲ. ತಲೆತಪ್ಪಿಸಿಕೊಂಡು ಎಲ್ಲಿಗಾದರೂ ಓಡಿಹೋದರೆ ಕಾಡಿಗೆ ಹೋಗಬೇಕು ; ಅಲ್ಲಿಯೂ ಕೂಡ ಕಾಡು ಮೃಗಗಳ ಕಾಟ, ಆದರೆ ಮನುಷ್ಯರ ಹಿಂಸೆಗಿಂತಲೂ ಕಾಡುಮೃಗಗಳ ಬಾಧೆ ಉತ್ತಮ. ಹಿಂಸೆ ಕೊಡುವ ಇಂಥಾ ಜೀತಕ್ಕಿಂತಲೂ ಮೃಗಗಳ ಬಾಯಿಗಾದರೂ ಹೋಗಿ ಬಿದ್ದೇನು, ಎಂದುಕೊಂಡನು.

ಹೀಗೆ ನಿಶ್ಚಯಮಾಡಿಕೊಂಡು, ಒಂದು ದಿವಸ ಸಮಯವನ್ನು ನೋಡಿ ಒಡೆಯನ ಮನೆಯನ್ನು ಬಿಟ್ಟು ಕಾಡಿಗೆ ಓಡಿಹೋದನು. ಅಲ್ಲಿ ಒಂದು ವಿಧವಾದ ಕಷ್ಟಹೋಗಿ ಮತ್ತೊಂದು ವಿಧವಾದ ಕಷ್ಟ ಬಂತು. ಬೇಲಿಗಳಲ್ಲಿಯೂ, ಮುಳ್ಳುಪೊದೆಗಳಲ್ಲಿಯೂ ನುಸಿದು, ಮೈಯೆಲ್ಲಾ ತರೆದು ಹೋಗಿ ಬಹಳ ರಕ್ತ ಸುರಿಯುತಿತ್ತು. ಹೊತ್ತು ಹೊತ್ತಿಗೆ ಹಸಿವು ಹೆಚ್ಚಿತು. ಕಾಡಿನಲ್ಲಿ ಯಾವ ಆಹಾರವೂ ಸಿಕ್ಕಲಿಲ್ಲ. ಆಯಾಸ ಬಲವಾಯಿತು. ಕೊನೆಗೆ ಕಯನು ಸಾಯಬೇಕೆಂದು ಮನಸ್ಸಿ

ನಲ್ಲಿ ದೃಢಮಾಡಿಕೊಂಡು ಸಮೀಪದಲ್ಲಿ ಆಕಸ್ಮಾತ್ತಾಗಿ ಸಿಕ್ಕಿದ ಒಂದು ಗುಹೆಯೊಳಕ್ಕೆ ಹೋದನು—

ಈ ರೀತಿಯಲ್ಲಿ ಕಥೆಯನ್ನು ಓದಿ ನಿಲ್ಲಿಸಲು, ಅದರಲ್ಲಿ ಹೇಳಿರುವ ವ್ಯಸನಕರವಾದ ಸಂಗತಿಗೆ ಸುಮತಿಯ ಮನಸ್ಸು ಕರಗಿ,—ಅಯ್ಯೋ ಪ್ರಾಣಿ, ಅಂಥವ ನನಗೆ ಸಿಕ್ಕಿದರೆ, ನನ್ನ ಎಡೆ ಅನ್ನವನ್ನು ಅವನಿಗೆ ಇಕ್ಕಿ ನನ್ನ ಪಂಚೆಯನ್ನು ಅವನಿಗೆ ಕೊಡುತಿದ್ದೆ. ಜೋಯಿಸರೆ, ಆ ಸಕ್ರೂರನೆಂಬ ಒಡೆಯನು ಯಾಕೆ ಅಷ್ಟು ಕಾಠಿಣ್ಯವನ್ನು ತೋರಿಸ ಬೇಕು? ಆ ಜೀತಗಾರನು ಅಷ್ಟು ಕಷ್ಟವನ್ನಾದರೂ ಪಟ್ಟುಕೊಂಡು ಯಾಕೆ ಜೀತವನ್ನು ಮಾಡಬೇಕು? ಇದಕ್ಕೆ ಕಾರಣ ಅಪ್ಪಣೆಯಾಗಲಿ ಎಂದು ಕೇಳಿದನು.

ಮದನಕುಮಾರನು—ಸುಮತಿ, ಲೋಕದಲ್ಲಿ ಕೆಲವರು ಐಶ್ವರ್ಯ ವಂತರಾಗಿ ಹುಟ್ಟುತ್ತಾರೆ. ಅವರು ಇತರರಿಗೆ ಆಜ್ಞೆಮಾಡಲೇಬೇಕು. ಕೆಲವರು ಚಾಕರರಾಗಿ ಹುಟ್ಟುತಾರೆ. ಅವರು ಹೇಳಿದ ಹಾಗೆ ಕೇಳಿ ಕೊಂಡು ಚಾಕರಿ ಮಾಡುತಾ ಬಿದ್ದಿರಲೇಬೇಕು. ನಮ್ಮ ಅರಮನೆ ಯಲ್ಲಿ ಅನೇಕ ಚಾಕರರಿದಾರೆ, ಅವರೆಲ್ಲಾ ನಮ್ಮ ಗುಲಾಮರಾಗಿರು ವುದಕ್ಕೆ ಹುಟ್ಟಿದವರೆಂದು ನಮ್ಮ ಅಮ್ಮೈಯ್ಯ ಹೇಳಿದರು. ನಾನು ಅವರನ್ನು ಹೊಡೆಯುತೇನೆ; ಒದೆಯುತೇನೆ; ಕೋಪಬಂದಾಗ ಕೈಗೆ ಸಿಕ್ಕಿದ್ದನ್ನು ತೆಗೆದುಕೊಂಡು ಅವರ ಮುಖದ ಮೇಲೆ ಎಸೆಯುತ್ತೇನೆ. ಆದರೂ ಅವರು ಎದುರುಮಾತನಾಡುವುದು ಎಂದರೇನು? ಹೇಳಿದ ಹಾಗೆ ಕೇಳಿಕೊಂಡು ಸತ್ತನಾಯಿಯ ಹಾಗೆ ಸುಮ್ಮನೇ ಬಿದ್ದಿರಬೇಕಾ ದದ್ದೇ ಅವರ ಹಣೇಬರಹ.

ಜೋಯಿಸ—ಅಯ್ಯಾ ಮಗು, ಅವರು ಚಾಕರರು ಯಾಕೆ ಆದರು? ಹೇಳು.

ಮದನ—ಯಾಕೆಂದರೆ, ನಮ್ಮ ಅಪ್ಪಾಜಿ ಅವರಿಗೆ ತಿಂಗಳ ಸಂಬಳಗಳನ್ನು ಕೊಡುತಾರೆ. ಇಲ್ಲ ಪಡಿ ಕೊಡುತಾರೆ.

ಜೋಯಿಸ—ಹಾಗಾದರೆ ಸಂಬಳವನ್ನು ತೆಗೆದುಕೊಳ್ಳತಕ್ಕವರೆ ಲ್ಲರೂ ಚಾಕರರಷ್ಟೆ?

ಮದನ— ಹವುದು.

ಜೋಯಿಸ—ಹಾಗಾದರೆ ಸಂಬಳವನ್ನು ಕೊಡತಕ್ಕವರು ಚಾಕರರನ್ನು ಹೊಡೆಯಬಹುದು, ಒದೆಯಬಹುದು ತಮ್ಮ ಮನಸ್ಸು ಬಂದ ಹಾಗೆ ಮಾಡಬಹುದಷ್ಟೆ ?

ಮದನ—ಬೇಕಾದ್ದನ್ನು ಮಾಡಬಹುದು.

ಜೋಯಿಸ—ಸೂರ್ಯಭಟ್ಟರ ಮನೆಯಲ್ಲಿ ನೀನು ಚಾಕರಿಗೆ ಇದ್ದರೆ, ಅವರು ನಿನ್ನನ್ನು ಬೇಕಾದಹಾಗೆ ಹಿಂಸಿಸಬಹುದಷ್ಟೆ ?

ಮದನ—ಅವರು ನನ್ನನ್ನು ಚಾಕರಿಗೆ ಇರಿಸಿಕೊಳ್ಳುವುದಕ್ಕೆ ಕಾರಣವಿಲ್ಲ; ಅಥವಾ ಇರಿಸಿಕೊಂಡಾಗ್ಯೂ ಹಿಂಸೆ ಮಾಡುವುದಕ್ಕೆ ಕಾರಣವಿಲ್ಲ.

ಜೋಯಿಸ—ಹಾಗಾದರೆ ಸಂಬಳಕ್ಕೆ ಆಳುಗಳನ್ನು ಇರಿಸಿಕೊಂಡ ಮಾತ್ರಕ್ಕೇ ಅವರನ್ನು ಹಿಂಸಿಸಲು ಕಾರಣವಿಲ್ಲವಷ್ಟೆ ? ಆ ಪಕ್ಷಕ್ಕೆ ನಿಮ್ಮ ತಂದೆ ಆ ಜೀತಗಾರನನ್ನು ಚಾಕರಿಗೆ ಇರಿಸಿಕೊಳ್ಳಲು ಕಾರಣವೇನು ?

ಮದನ—ಅವರೆಲ್ಲಾ ಬಡವರು. ಅವರಿಗೆ ಏನೂ ಗತಿ ಇಲ್ಲ. ನಾವು ದೊರೆಗಳು, ಐಶ್ವರ್ಯವಂತರು.

ಜೋಯಿಸ— ಐಶ್ವರ್ಯವಂತರು ಎಂದರೇನು ?

ಮದನ—ಹಾಗೆಂದರೆ, ನಮ್ಮ ಅಪ್ಪಾಜಿಯ ಹತ್ತಿರ ಗಾಡಿಯಿದೆ, ಕುದುರೆ ಇದೆ, ಬೇಕಾದಷ್ಟು ಹಣ, ಒಡವೆ, ಇದೆಲ್ಲಾ ಇದೆ; ಒಳ್ಳೇ ಅರಮನೆ ಇದೆ.

ಜೋಯಿಸ—ಇದೆಲ್ಲವನ್ನೂ ಯಾರಾದರೂ ಕಿತ್ತುಕೊಂಡು ಹೋಗಿ, ನೀನೂ ಬಡವನಾದರೆ, ಆಗ ನಿನ್ನನ್ನು ಯಾರಾದರೂ ಚಾಕರಿಗೆ ಇರಿಸಿಕೊಂಡು, ನಿನ್ನನ್ನು ಬೈದು, ಹೊಡೆದು, ಬೇಕಾದ ಹಿಂಸೆಯನ್ನೆಲ್ಲಾ ಮಾಡಬಹುದಷ್ಟೆ ?

ಮದನ—ಇತರರು ನನ್ನನ್ನು ಹಿಂಸೆಮಾಡಕೂಡದು; ಅದು ಸರಿಯಲ್ಲ.

ಜೋಯಿಸ—ಹಾಗಾದರೆ ಒಬ್ಬ ಮನುಷ್ಯ ಮತ್ತೊಬ್ಬನನ್ನು ಹಿಂಸೆಮಾಡಕೂಡದೊ ?

ಮದನ—ಕೂಡದು.

ಜೋಯಿಸ—ಆ ಪಕ್ಷಕ್ಕೆ, ಒಬ್ಬ ಮನುಷ್ಯನು ಮತ್ತೊಬ್ಬನನ್ನು ಚಾಕರಿಗೆ ಇರಿಸಿಕೊಳ್ಳಕೂಡದು ; ಹಾಗೆ ಇರಿಸಿಕೊಂಡರೆ ಅವರಿಗೆ ಹಿಂಸೆಮಾಡಿದಹಾಗಾಯಿತು ; ಆದ್ದರಿಂದ ಇನ್ನುಮೇಲೆ ಚಾಕರರನ್ನು ಇರಿಸಿಕೊಳ್ಳಲೇಕೂಡದಾಯಿತು.

ಮದನ—ಇಲ್ಲ, ಜೋಯಿಸರೆ, ಹಾಗೆ ಹೇಳಕೂಡದು; ಇನ್ನು ಮೇಲೆ ಚಾಕರರಿಗೆ ನಾನು ಹಿಂಸೆ ಮಾಡುವುದಿಲ್ಲ: ಅವರನ್ನು ಬೈದು ಹೊಡೆಯುವುದಿಲ್ಲ.

ಜೋಯಿಸ—ಹಾಗಾದರೆ ನೀನು ಒಳ್ಳೇಹುಡುಗನಾದೆ. ಮುಂದೆ ಕಥೆ ಏನಾಯಿತು, ಕೇಳೋಣ.—

ಆ ಅದೃಷ್ಟಹೀನನಾದ ಕಯನು ಸಂಕಟಪಡುತ್ತಾ ಗುಹೆಯಲ್ಲಿ ಸ್ವಲ್ಪ ಹೊತ್ತು ಮಲಗಿದ್ದ. ಅಷ್ಟರಲ್ಲಿಯೇ ಭಯಂಕರವಾದ ಒಂದು ಶಬ್ದಕೇಳಿತು. ಆಗ ಕಯನು ಬೆಚ್ಚಿಬಿದ್ದು ಗಾಬರಿಯಿಂದ ಎದ್ದು ಯಾವುದೋ ಕಾಡುಮೃಗದ ಆರ್ಭಟವಿರಬಹುದೆಂದು ನಡುಗುತಾ, ಅಲ್ಲಿಂದ ಆಚೆಗೆ ಓಡಿ ಹೋಗಬೇಕೆಂದು ಯೋಚಿಸಿ ಗುಹೆಯ ಬಾಗಿಲಿಗೆ ಹೋಗುವಷ್ಟರಲ್ಲಿಯೇ, ಒಂದು ದೊಡ್ಡ ಸಿಂಹವು ಗುಡುಗುಡಾಯಿಸಿಕೊಂಡು ಬಂದು ಇವನನ್ನು ಆಚೆಗೆ ಬಿಡದೇ ಹೋಯಿತು. ಜೀತಗಾರನು ತನ್ನ ಹಣೇಬರಹ ಅಲ್ಲಿಗೆ ತೀರಿತೆಂದು ತಿಳಿದುಕೊಂಡು ಹಿಂದ ಹಿಂದಕ್ಕೆ ಹೋದನು. ಸಿಂಹವು ಸ್ವಲ್ಪವೂ ಆಗ್ರಹವಿಲ್ಲದೆ ಮೆಲ್ಲ ಮೆಲ್ಲಗೆ ಅವನ ಸಮೀಪಕ್ಕೆ ಬರುತಿತ್ತು. ಕಯನ ಮನಸ್ಸು ಸ್ವಭಾವವಾಗಿ ಸ್ವಲ್ಪ ಗಟ್ಟಿಮನಸ್ಸು; ಇದರಮೇಲೆ ಧೈರ್ಯವನ್ನು ತಂದುಕೊಂಡನು. ಸಿಂಹವು ಅವನ ಹತ್ತಿರಕ್ಕೆ ಮೆಲ್ಲಗೆ ಕುಂಟುತಾ ಬರುತಿತ್ತು. ಅದರ ಒಂದು ಕಾಲು ಬಹಳವಾಗಿ ಬಾತುಕೊಂಡಿತ್ತು. ಈ ಮೃಗರಾಜನ ಒಳ್ಳೇತನವನ್ನು ಕಂಡು ಕಯನಿಗೆ ಇನ್ನೂ ಧೈರ್ಯ ಹೆಚ್ಚಿತು. ಆಗ ಅದು ಹತ್ತಿರ ಬಂದು ನಿಂತು ಕುಂಟುಗಾಲನ್ನು ಮೇಲಕ್ಕೆ ಎತ್ತಿ ಯಾತ

ನೆಗೆ ಒದರುವುದನ್ನು ಕಂಡು, ಕಯನು ಆ ಕಾಲನ್ನು ತಾನು ಹಿಡಿದು ಮೇಲಕ್ಕೆ ಎತ್ತಿ ನೋಡಲಾಗಿ, ಅಂಗಾಲಿಗೆ ಬಹು ಗಾತ್ರವಾದ ಕಾರೇ ಮುಳ್ಳು ನಾಟಿಕೊಂಡಿತ್ತು. ಇದರಿಂದ ಆ ಯಾತನೆ ಉಂಟಾಗಿರ ಬಹುದೆಂದು ತಿಳಿದು, ಅಂಗಾಲನ್ನು ಹಿಡಿದು ಎರಡು ಕೈಯಿಂದಲೂ ಗಟ್ಟಿಯಾಗಿ ಅದುಮಿದನು; ಆಕ್ಷಣವೇ ಮುಳ್ಳು ಚಿತಕ್ಕನೆ ಈಚೆಗೆ ಹೊರಟಿತು. ಅದನ್ನು ಕೈಯಿಂದ ಕಿತ್ತು ಹಾಕಲು, ಸಂಗಡಲೇ ಕೀವೆಲ್ಲಾ ಈಚೆಗೆ ಬಂತು. ಇದರಿಂದ ಯಾತನೆ ಕೊಂಚ ಕಡಮೆಯಾ ಯಿತು. ಆಗ ಸಿಂಹವು ಅವನ ತಲೇ ಮೇಲೆ ತನ್ನ ಬಾಲವನ್ನು ಆಡಿ ಸುತಾ, ಅವನ ಕತ್ತಿನಮೇಲೆ ತನ್ನ ಕತ್ತನ್ನು ಹಾಕುತಾ, ಅವನ ಬೆನ್ನಿಗೆ ತನ್ನ ಮೈಯನ್ನು ಹಾಕಿ ಮೆಲ್ಲಗೆ ತಿಕ್ಕುತಾ ಹಲವು ವಿಧ ದಲ್ಲಿಯೂ ತನ್ನ ಕೃತಜ್ಞತೆಯನ್ನು ತೋರಿಸುವ ಸನ್ನೆಗಳನ್ನು ಮಾಡಿತು. ಹೀಗೆ ಮೃಗರಾಜನಿಗೂ ಕಯನಿಗೂ ಸ್ನೇಹವಾಯಿತು. ಅದು ಹೊರಗೆ ಹೋದಾಗೆಲ್ಲಾ ಉತ್ತಮವಾದ ಮಾಂಸವನ್ನು ಕಚ್ಚಿಕೊಂಡು ಬಂದು ಇವನ ಮುಂದೆ ಹಾಕುತಿತ್ತು. ಆ ಅಡಗನ್ನೂ ಅಲ್ಲಿದ್ದ ಗಿಡಗಳ ಹಣ್ಣು ಗಳನ್ನೂ ತಿಂದು ಅವನು ಜೀವಿಸುತಿದ್ದನು. ಹೀಗೆ ನಾಲ್ಕಾರು ತಿಂಗ ಳಾಯಿತು, ಒಂದು ದಿನ ಹಾಗೆಯೇ ಅಲಕ್ಷ್ಯವಾಗಿ ಕಾಡಿನಲ್ಲಿ ಸುತ್ತಾ ಡುತಾ ಇರುವಾಗ್ಗೆ, ಸರ್ಕಾರನ ಕಡೇ ಆಳುಗಳು ಹೊಂಚುಹಾಕಿ ಕೊಂಡು ಕಾದಿದ್ದು, ಕಯನನ್ನು ಹಿಡಿದು ಯಜಮಾನನ ಹತ್ತಿರಕ್ಕೆ ಕರೆದುಕೊಂಡು ಹೋದರು. ಅಲ್ಲಿ ಜೀತಗಾರನ ಅಪರಾಧಕ್ಕಾಗಿ ವಿಚಾ ರಣೆಯಾಗಿ, ಇವನನ್ನು ಸಿಂಹನ ಬಾಯಿಗೆ ಕೊಡಬೇಕೆಂದು ಹೇಳಿ ದರು.

ಚಂಡಾಲರು ಇವನ ಆಯುಧವನ್ನು ಕಿತ್ತುಕೊಂಡು ಕೈ ಕಾಲು ಗಳನ್ನು ಕಟ್ಟಿ ಆ ಘೋರಾರಣ್ಯದಲ್ಲಿ ಸಿಂಹ ಬರುವ ಹೊತ್ತಿಗೆ ಸರಿ ಯಾಗಿ ಕರೆದುಕೊಂಡು ಹೋಗಿಬಿಟ್ಟರು. ಸಿಂಹವು ಜೀವಸಹಿತವಾದ ಮನುಷ್ಯನನ್ನು ತಿನ್ನುವ ನೋಟವು ಬಹು ಚೆನ್ನಾಗಿರಬಹುದೆಂದು ಅನೇಕ ಜನರು ನೆರೆದಿದ್ದರು. ಕಂಠೀರವನು ವಿಪರೀತವಾಗಿ ಆರ್ಭಟಿ ಸುತಾ ಕತ್ತಿನ ಮೇಲಿನ ಕೂದಲನ್ನು ಕೆದರಿಕೊಂಡು ಕಂಣನ್ನು

ಕೆಂಪಗೆ ಮಾಡಿಕೊಂಡು ಗುಡಗುಡನೆ ಬಂತು. ಎಲ್ಲರ ದೃಷ್ಟಿಯೂ ಇದರಮೇಲೆ ನಾಟಿಹೋಯಿತು. ಆಗಿನ ಆಶ್ಚರ್ಯವನ್ನು ಏನು ಹೇಳೋಣ! ಅಂಥಾ ಆಟೋಪದಿಂದ ಬಂದ ಸಿಂಹವು ಅಪರಾಧಿಯ ಕಾಲಮೇಲೆ ಬಿದ್ದು ಹೊರಳಾಡುತಾ, ನಯುಗರೆಯುತಾ, ಅತ್ಯಂತ ಪ್ರೀತಿಯನ್ನು ತೋರಿಸಿತು. ಅಲ್ಲಿದ್ದವರೆಲ್ಲಾ ಆಶ್ಚರ್ಯಪಟ್ಟು, ಆ ಮಹಾಮೃಗವು ಹೀಗೆ ಸಾಧುವಾಗುವುದಕ್ಕೆ ಕಾರಣವೇನೆಂದು ಗಟ್ಟಿಯಾಗಿ ಕೂಗಿ ಕಯನನ್ನು ಕೇಳಲು, ಅವನು ತನಗೂ ಸಿಂಹಕ್ಕೂ ಪೂರ್ವದಲ್ಲಿ ಆದ ಸ್ನೇಹದ ಕಥೆಯನ್ನು ಹೇಳಿದನು. ಅದನ್ನು ಕೇಳಿ ಅಲ್ಲಿದ್ದವರೆಲ್ಲಾ ಕಾಡುಮೃಗಗಳಿಗೂ ಕೃತಜ್ಞತೆಯೂ ದಯಾರಸವೂ ಉಂಟಲ್ಲಾ ಎಂದು ಬೆರಗಾಗಿ ಕಯನ ಅಪರಾಧವನ್ನು ಕ್ಷಮಿಸುವ ಹಾಗೆ ಮಾಡಿದರು.

---

## ೭ ನೆ ಅಧ್ಯಾಯ

ಈ ಕಥೆಯನ್ನು ಕೇಳಿ ಮದನಕುಮಾರನು—ಈ ಕಥೆ ಬಹು ಚೆನ್ನಾಗಿದೆ. ಸಿಂಹವು ಇಷ್ಟು ಸಾಧುವಾಗಿರುವುದುಂಟೆ? ಏನಾಶ್ಚರ್ಯ! ಸಿಂಹ, ಹುಲಿ ಮೊದಲಾದ ಈ ಕಾಡುಮೃಗಗಳು ಸಿಕ್ಕಿದ್ದನ್ನೆಲ್ಲಾ ಕೊಂದು ತಿನ್ನುವವು ಎಂದು ಬಲ್ಲೆ. ಇದೇನೋ ಅದ್ಭುತವಾಗಿದೆ, ಎಂದನು. ಆಗ ಉಪಾಧ್ಯಾಯನು—ಹಾಗಲ್ಲ, ಹಸಿವು ಆದಾಗ ಕಾಡು ಮೃಗಗಳು ಸಿಕ್ಕಿದ್ದನ್ನು ಕೊಂದು ತಿನ್ನುವವು. ಹೊಟ್ಟೆ ತುಂಬಿದ್ದಾಗ ಅವು ಯಾರ ತಂಟೆಗೂ ಹೋಗುವುದಿಲ್ಲ; ಕಾರಣವಿಲ್ಲದೆ ಯಾವ ಕೇಡನ್ನೂ ಮಾಡುವುದಿಲ್ಲ; ಕೆಲವು ಜನರೂ, ಕೆಲವು ತುಂಟಹುಡುಗರೂ ನಿಷ್ಕಾರಣವಾಗಿ ಪ್ರಾಣಿಗಳನ್ನು ಹಿಂಸಿಸುವರು. ಇಂಥವರಿಗಿಂತಲೂ ಈ ಕಾಡುಮೃಗಗಳೇ ಉತ್ತಮ.

ಸುಮತಿ—ಹವುದು ಜೋಯಿಸರೆ, ನೀವು ಹೇಳುವುದು ನಿಜ. ನಾನು ಬೀದಿಯಲ್ಲಿ ಹೋಗುತಿರುವಾಗ, ರೋಗದಿಂದ ನರಳುತಾ ಒಂದು ಕಾಲು ಮುರಿದುಹೋಗಿ ಕುಂಟಿಕೊಂಡು ಹೋಗುತಿದ್ದ ಒಂದು ಕತ್ತೆಯನ್ನು ಕಂಡೆ. ದೊಡ್ಡದಾದ ಒಂದು ಕಟ್ಟಿಗೆಯನ್ನು ಹಿಡಿದು ಒಬ್ಬ ಹುಡುಗನು ಅದನ್ನು ಹೊಡೆದು ಅಟ್ಟಿಕೊಂಡು ಹೋಗುತಿದ್ದ.

ಅಯ್ಯೋ, ಹಾಗೆ ಹೊಡೆಯಬಾರದು, ಪ್ರಾಣಿಹಿಂಸೆಯನ್ನು ಮಾಡಬಾರದು. ನಿನಗಿಂತಲೂ ಬಲವಾದವನು ನಿನ್ನನ್ನು ಹಿಡಿದು ಹೀಗೆ ಹೊಡೆದರೆ ಆಗ ಹೇಗೆ ಇರುವುದು? ಎಂದೆ.

ಅದು ತಮ್ಮ ಮನೇ ಅಗಸರವನ ಕತ್ತೆ; ತಾನು ಹೊಡೆಯುತೇನೆ; ನಾನು ಏನಾದರೂ ತಿರುಗಿ ಮಾತಾಡಿದರೆ ಅದೇ ದೊಣ್ಣೆಯಿಂದ ನನ್ನನ್ನೂ ಗಟ್ಟಿಸುತೇನೆಂದು, ಆ ಹುಡುಗ ಗದರಿಸಿದನು.

ಆಗ ನಾನು—ಆ ಕತ್ತೆ ನಿಮ್ಮ ಅಗಸನದಾಗಲಿ, ನಿಮ್ಮ ಅಪ್ಪನದಾಗಲಿ, ನೀನು ಹೊಡೆಯುವುದಕ್ಕೆ ಕಾರಣವಿಲ್ಲ. ದೇವರು ನಮ್ಮನ್ನು ಹೇಗೆ ನಿರ್ಮಾಣಮಾಡಿದನೊ ಅವುಗಳನ್ನೂ ಹಾಗೆಯೇ ನಿರ್ಮಾಣ ಮಾಡಿದಾನೆ. ನಮ್ಮ ಹಾಗೆಯೇ ಆ ಪ್ರಾಣಿಗಳಿಗೂ ಯಾತನೆಯಾಗುವುದು. ಆದ್ದರಿಂದ ಅದನ್ನು ಒಂದು ಏಟು ಹೊಡೆದೀಯೋ, ಜೋಕೆ; ನನ್ನನ್ನು ಹೊಡೆಯುವುದಕ್ಕೆ ಬಂದರೆ, ಹಲ್ಲು ಮುರಿದುಬಿಟ್ಟೇನು, ಎಂದು ಹೇಳಿದೆ.

ಆಗ ಅವ ನನ್ನನ್ನು ಹೊಡೆಯಬೇಕೆಂದು ಬಂದ; ನಾನು ಒಂದು ಹೊಗತಿ ಮಾಡಿದೆ. ಆ ಏಟು ಅವನ ಭುಜದಮೇಲೆಯೇ ಬಿತ್ತು. ಪುನಃ ಹೊಡೆಯುವುದಕ್ಕೆ ಬಂದ; ನಾನು ಅವನ ಸೊಂಟಕ್ಕೆ ನುಗ್ಗಿ ಅವನನ್ನು ಕೆಳಕ್ಕೆ ಎತ್ತಿಹಾಕಿ ಮೇಲೆ ಅಗತುಕೊಂಡೆ. ಆಗ ಅವನು—ನಿನ್ನ ದಮ್ಮಯ್ಯ ಬಿಡು ಎಂದ.

ಜೋಯಿಸ— ದುಷ್ಟರಾಗಿರತಕ್ಕವರೆಲ್ಲರೂ ಹೇಡಿಗಳಾಗಿರುವುದೇನೋ ಲೋಕದಲ್ಲಿ ರೂಢಿಯಾಗಿದೆ. ಆಮೇಲೆ ನೀನು ಏನಮಾಡಿದೆ?

ಸುಮತಿ—ಆಗ ಅವನಿಗೆ ನಾನು ಹೇಳಿದ್ದು ಏನೆಂದರೆ—ಎಲೋ ಹುಡುಗ, ನಿನ್ನನ್ನು ನಾನು ಹೊಡೆಯಬೇಕೆಂದಿರಲಿಲ್ಲ;

ಆದರೆ ನನ್ನ ಗೋಜಿಗೆ ನೀನು ಬಂದಕಾರಣ, ಆ ಬಡಜಂತುವಿನ ತಂಟೆಗೆ ಹೋಗುವುದಿಲ್ಲವೆಂದು ಮಾತುಕೊಡುವತನಕ ನಾನು ಬೇರೇ ನಿನ್ನನ್ನು ಬಿಡುವುದಿಲ್ಲ, ಎಂದೆ. ಆಗ ಕೂಡಲೆ ಅದರ ತಂಟೆಗೆ ತಾನು ಹೋಗುವುದಿಲ್ಲವೆಂದು ಮಾತಕೊಟ್ಟ; ನಾನು ಅವನನ್ನು ಬಿಟ್ಟುಬಿಟ್ಟೆ. ಅವನು ಎದ್ದು ಹೊರಟುಹೋದ.

ಜೋಯಿಸ—ನೀನು ಒಳ್ಳೇ ಕೆಲಸ ಮಾಡಿದೆ. ಮೊನ್ನೆ ಈ ಮದನ ಆ ಬಡಹುಡುಗನನ್ನು ಹೊಡೆಯುವುದಕ್ಕೆ ಹೋಗಿ ಹಳ್ಳಕ್ಕೆ ಉರುಟಿಕೊಂಡಾಗ, ಆ ಬಡಹುಡುಗ ಇವನನ್ನು ಎತ್ತಲು, ಮದನನಿಗೆ ಎಷ್ಟು ಹೀನಾಯವಾಗಿ ತೋರಿ ಅವಮಾನವಾಯಿತೊ, ಹಾಗೆಯೇ ಈ ಹುಡುಗನಿಗೂ ಅವಮಾನವಾಗಿರಬಹುದು.

ಮದನ—ಜೋಯಿಸರೆ, ನಾನು ಬಡಹುಡುಗನನ್ನು ಹೊಡೆಯುವುದಕ್ಕೆ ಹೋಗುತಿರಲಿಲ್ಲ; ಅವ ನನ್ನ ಚಂಡನ್ನು ತಂದುಕೊಡಲಿಲ್ಲ. ಅದರಿಂದ ಅವನನ್ನು ನಾನು ಹೊಡೆಯಹೋದೆ.

ಜೋಯಿಸ—ನಿನ್ನ ಚಂಡನ್ನು ಅವ ತಂದು ಕೊಡಬೇಕೆಂದು ಅವನಿಗೇನು ಅಗತ್ಯ? ಅದನ್ನು ತಂದು ಕೊಡೆಂದು ಅವನನ್ನು ಕೇಳುವುದಕ್ಕೆ ನಿನಗೇನು ಅಧಿಕಾರ?

ಮದನ—ಯಾಕೆ ಎಂದರೆ, ಅವನು ಚಿಂದಿಹುಡುಗ, ನಾನು ದೊರೆಮಗ.

ಜೋಯಿಸ—ಹಾಗಾದರೆ ಚಿಕ್ಕ ಹುಡುಗರು ಚಿಂದಿಯನ್ನು ಹಾಕಿಕೊಂಡು ಬಡವರಾಗಿದ್ದ ಮಾತ್ರಕ್ಕೆ, ಬೇಕಾದವರು ಅವರಿಗೆ ಚಾಕರಿ ಹೇಳಬಹುದೊ?

ಮದನ—ಹೇಳಬಹುದು.

ಜೋಯಿಸ—ನಿನ್ನ ಬಟ್ಟೆಯೆಲ್ಲಾ ಹರಿದು ಹೋಗಿ ಆ ಚಿಂದಿಯನ್ನು ನೀನು ಹಾಕಿಕೊಂಡಿದ್ದರೆ, ಬೇಕಾದವರು ನಿನಗೆ ಕೆಲಸ ಮಾಡೆಂದು ಆಜ್ಞಾಪಿಸಬಹುದಷ್ಟೆ?

ಮದನನು ಪೆಚ್ಚುಮುಖವನ್ನು ಹಾಕಿಕೊಂಡು—ಬೇಲಿಯ ಆಚೇಕಡೆ ಅವ ಇದ್ದದರಿಂದ, ಚೆಂಡನ್ನು ಈಚೇಕಡೆಗೆ ಹಾಕಬಹುದಾಗಿತ್ತು.

ಜೋಯಿಸ—ವಿನಯವಾಗಿ ಅವನನ್ನು ನೀನು ಕೇಳಿಕೊಂಡಿದ್ದರೆ, ಚೆಂಡನ್ನವ ಈಚೆಕಡೆಗೆ ಎಸೆಯುತಿದ್ದರೂ ಎಸೆಯುತಿದ್ದ. ಅಹಂಕಾರದಿಂದ ಮಾತನಾಡತಕ್ಕವನಿಗೆ ಯಾರು ತಾನೆ ಉಪಕಾರ ಮಾಡುತಾರೆ? ಆ ಹುಡುಗ ಬಡವನಾಗಿ ಹರಕಲು ಬಟ್ಟೆಯನ್ನು ಹಾಕಿಕೊಂಡು ಇದ್ದಕಾರಣ, ನಿನ್ನ ಚೆಂಡನ್ನು ತಂದುಕೊಡುವುದಕ್ಕಾಗಿ ಅವನಿಗೆ ಏನಾದರೂ ದುಡ್ಡು ಕೊಟ್ಟೆಯು?

ಮದನ—ಇಲ್ಲ, ನಾನು ಅವನಿಗೆ ಕಾಸು ಕೊಡಲಿಲ್ಲ, ಕೊಡುತೇನೆಂದು ಹೋಗಲೂ ಇಲ್ಲ.

ಜೋಯಿಸ—ಹಾಗಾದರೆ ನಿನ್ನ ಹತ್ತಿರ ಕಾಸು ಏನೂ ಇರಲಿಲ್ಲವೇನೊ! (ಕೆಲವು ಹಣಗಳನ್ನು ತೆಗೆದು ತೋರಿಸುತಾ).

ಜೋಯಿಸ—ಹಾಗಾದರೆ ಆ ಹುಡುಗ ನಿನ್ನ ಹಾಗೆಯೇ ಹಣಗಾರನಾಗಿದ್ದನೋ ಏನೋ.

ಮದನ—ಇಲ್ಲ ಉಪಾಧ್ಯಾಯರೆ, ಶುದ್ಧವಾಗಿ ತಿರುಕೆಯವನಾಗಿದ್ದ, ಅವ ಕಟ್ಟಿಕೊಂಡಿದ್ದ ಕಚ್ಚೇಪಾವಡೆ ಸಹಿತ ಹರಿದು ಹೋಗಿತ್ತು.

ಜೋಯಿಸ—ಓಹೋ! ದೊಡ್ಡ ಮನುಷ್ಯರು, ದೊರೆ ಮಕ್ಕಳು, ಎಂದರೆ ಈಗ ನನಗೆ ಅರ್ಥವಾಯಿತು. ತಮಗೆ ಬೇಕಾದ ಐಶ್ವರ್ಯವಿದ್ದರೆ ಅದೆಲ್ಲವನ್ನೂ ತಾವೇ ಇರಿಸಿಕೊಂಡು ಅನುಭವಿಸಬಹುದು; ಬಡವರು ತಮಗೆ ಬಿಟ್ಟೀ ಕೆಲಸವನ್ನು ಮಾಡಿಕೊಡದೇ ಇದ್ದರೆ ಅವರನ್ನು ಹಿಡಿದು ಹೊಡೆಯುವುದು; ಈ ಬಡವರು ಹೆದರಿಕೊಂಡು ಮಾಡಿದರೂ, ಅವರಿಗೆ ಕೊಂಚವೂ ಪ್ರತ್ಯುಪಕಾರವನ್ನು ಮಾಡದೇ ಇರುವುದು; ಇಂಥಾ ಕೆಲಸಗಳನ್ನು ಮಾಡತಕ್ಕವರೇ, "ದೊರೆ ಮಕ್ಕಳು," "ಜಹಗೀರದಾರರು," "ದೊಡ್ಡ ಮನುಷ್ಯರು," "ಐಶ್ವರ್ಯವಂತರು," "ಭಾಗ್ಯವಂತರು," ಎಂಬ ವಿಧ ವಿಧವಾದ ಹೆಸರುಗಳನ್ನುಳ್ಳವರು! ಈಗ ತಿಳಿಯಿತು. ಹಾಗಾದರೆ, ಆ ಬಡ ಜೀತಗಾರನಿಗೆ ಉಪಕಾರ ಮಾಡಿದ ಸಿಂಹವೇನೋ ದೊಡ್ಡ ಮನುಷ್ಯನಲ್ಲ.

ಈ ಪ್ರಕಾರ ಜೋಯಿಸನು ಮೂದಲಿಸಿ ಹಂಗಿಸುತಾ ಆಡಿದ ಮಾತುಗಳನ್ನು ಕೇಳಿ ಮದನನ ಕಣ್ಣಿನಲ್ಲಿ ಗುಳಗುಳನೆ ನೀರು ಬಂತು.

ಇವನು ಸ್ವಭಾವವಾಗಿ ಒಳ್ಳೆಯವನಾದಕಾರಣ, ತಾನು ಆ ಬಡಹುಡುಗ ನನ್ನು ಎಲ್ಲಿಯಾದರೂ ಕಂಡರೆ, ಅವನಿಗೆ ಏನಾದರೂ ಕೊಡಬೇಕೆಂದು ಮನಸ್ಸಿನಲ್ಲಿ ಮಾಡಿಕೊಂಡನು. ಇದಕ್ಕೆ ಸಮಯವೂ ದೊರೆಯಿತು. ಆ ದಿನವೇ ಹೊತ್ತುಮುಳುಗುವ ಸಮಯದಲ್ಲಿ ಮದನನು ಮನೆಯನ್ನು ಬಿಟ್ಟು ಒಂದು ಬೇಲೀ ಸಮೀಪದಲ್ಲಿ ಹೋಗುತಿರುವಾಗ, ಆ ದಿನ ಸಿಕ್ಕಿದ್ದ ಬಡ ಹುಡುಗ ಬೇಲೀ ಹತ್ತಿರ ಕುಡುಗಲೇ ಹಣ್ಣನ್ನು ಆರಿಸಿ ಕೊಂಡು ತಿನ್ನುತಿದ್ದನು. ಕೂಡಲೆ ಮದನನು ಅವನನ್ನು ಕುರಿತು— ಎಲಪ್ಪ ಹುಡುಗ, ಯಾಕೆ ಇಂಥಾ ಚಿಂದಿಯನ್ನು ಹಾಕಿಕೊಂಡಿ ದ್ದೀಯೆ? ಒಂದು ಕಾಸಿನ ಅಗಲ ಕೂಡ ಗಟ್ಟಿಯಾಗಿಲ್ಲವಲ್ಲ! ನಿನಗೆ ಬೇರೇ ಬಟ್ಟೆಗೆ ಗತಿಯಿಲ್ಲವೆ? ಎಂದನು.

ಹುಡುಗ—ಇಲ್ಲ, ನನಗೆ ಎಲ್ಲಿಂದ ಬಂದೀತು; ನನ್ನ ಒಡಹುಟ್ಟಿ ದವರು ೫ ಜನ ಅಕ್ಕತಂಗಿಯರು, ೬ ಜನ ಅಣ್ಣತಂಮಂದಿರು. ಅವರೆ ಲ್ಲರೂ ನನ್ನ ಹಾಗೆಯೇ ಒಂದು ಚೂರು ಬಟ್ಟೆಗೂ ಗತಿ ಇಲ್ಲದೇ ಇದಾರೆ. ಇದು ಹೋಗಲಿ, ಬಟ್ಟೆ ಇಲ್ಲದಿದ್ದರೆ ಬೇಡ; ಒಪ್ಪೊತ್ತಾದರೂ ನಮಗೆ ಹೊಟ್ಟೆ ತುಂಬಾ ಹಿಟ್ಟು ಸಿಕ್ಕಿದರೆ ಸಾಕು; ಅದಕ್ಕೂ ಗತಿ ಇಲ್ಲವಾಗಿದೆ.

ಮದನ—ಯಾಕೆ ಒಪ್ಪೊತ್ತು ಕೂಡ ನಿಮಗೆ ಹಿಟ್ಟಿಗೆ ಗತಿ ಇಲ್ಲ?

ಹುಡುಗ—ಯಾಕೆಂದರೆ ನಮ್ಮಪ್ಪನಿಗೆ ಜ್ವರ ಬರುತಿದೆ. ತಲೇ ಎತ್ತದೆ ಮಲಗಿದಾನೆ, ಈಗ ಕಣಮನೇ ದಿನ; ನಮ್ಮವ್ವ ಒಬ್ಬೊಂಟಿ ಗಳು. ಆರಂಬದ ಕೆಲಸವನ್ನು ಮಾಡುವರಿಲ್ಲದೆ ಪೈರೆಲ್ಲಾ ಹಾಳಾಯಿತು. ಆದರಿಂದ—ನೀವೆಲ್ಲಾ ಅನ್ನವಿಲ್ಲದೆ ಸಾಯುವ ಹೊತ್ತು ಬಂದಿತಲ್ಲಾ? ನಿಮ್ಮನ್ನು ದೇವರೇ ರಕ್ಷಿಸಬೇಕು, ಎಂದು ನಮ್ಮವ್ವ ಹೇಳಿದಳು.

ಈ ಮಾತನ್ನು ಕೇಳಿ ಮದನಕುಮಾರನು ಏನೂ ಹೇಳದೆ ಸುಮ್ಮನೆ ಜೋಯಿಸರ ಮನೆಗೆ ಜಾಗ್ರತೆಯಿಂದ ಓಡಿಹೋಗಿ, ಮಾಡಿದ್ದ ಅನ್ನವನ್ನೂ ಇತರ ತಿಂಡಿಗಳನ್ನೂ ಈಸುಕೊಂಡು, ತನ್ನ ಹಳೇ ಅಂಗಿ ಗಳೆರಡನ್ನೂ ಒಂದೆರಡು ಪಂಚೆಗಳನ್ನೂ ತೆಗೆದುಕೊಂಡು ಬಂದು, ಆ ಒಕ್ಕಲಿಗರ ಬಡಹುಡುಗನನ್ನು ನೋಡಿ—ಎಲ ಹುಡುಗ, ನೀನು ನನಗೆ ಉಪಕಾರಮಾಡಿದೆ; ಅದರಿಂದ ಇದೆಲ್ಲವನ್ನೂ ನಿನಗೆ ಕೊಡುತೇನೆ,

ಹಿಡಿ. ನಾನು ದೊರೆಮಗ, ನನಗೆ ಬೇಕಾದಷ್ಟಿದೆ, ಎಂದು ಅದೆಲ್ಲ ವನ್ನೂ ಕೊಟ್ಟನು. ಆಗ ಆ ಬಡ ಹುಡುಗನ ಸಂತೋಷಕ್ಕೆ ಪಾರವೇ ಇಲ್ಲದೇ ಹೋಯಿತು. ತಾನು ಉಪಕಾರವನ್ನು ಮಾಡಿ ಔದಾರ್ಯ ವನ್ನು ಮೊಟ್ಟಮೊದಲು ತೋರಿಸಿದೆನಲ್ಲಾ, ಎಂದು ಮದನನಿಗೆ ಉಂಟಾದ ಸಂತೋಷವು ಆ ಒಕ್ಕಲಿಗರ ಹುಡುಗನ ಸಂತೋಷಕ್ಕೆ ಸಮ ವಾಗಿತ್ತು. ಮದನನಿಗೆ ಇದರಿಂದ ಸ್ವಲ್ಪ ಅಹಂಕಾರ ಉಂಟಾಯಿತು. ಇವ ಕೊಟ್ಟದ್ದನ್ನು ತೆಗೆದುಕೊಂಡ ಆ ಹುಡುಗ ಒಂದೆರಡು ಮಾತನಾಡಲು ಬಾಯಿ ಬಿಟ್ಟನೋ ಇಲ್ಲವೋ ಎನ್ನುವಷ್ಟರೊಳಗೆ, ಮದನನು ಬಹು ಅಟ್ಟಹಾಸದಿಂದ ಹೋಗಿ, ಮನೆಗೆ ಬರುತಿದ್ದ ಜೋಯಿಸನನ್ನು ಕಂಡು, ಹಿಗ್ಗಾಡುತಾ ತಾನು ಮಾಡಿದ ಕೆಲಸವನ್ನು ಆತನ ಸಂಗಡ ಹೇಳಿದನು. ಜೋಯಿಸನು ಆತುರಪಡದೆ ನಿಧಾನವಾಗಿ ಬಟ್ಟೆಯನ್ನು ಆ ಹುಡುಗ ನಿಗೆ ನೀನು ಕೊಟ್ಟದ್ದು ಒಳ್ಳೇದಾಯಿತು. ಯಾಕೆಂದರೆ, ಅಂಗಿ ಪಂಚೆಗಳೇನೋ ನಿನ್ನದು. ಅದು ಹಾಗಿರಲಿ, ನನ್ನನ್ನು ಕೇಳದೆ ನನ್ನ ಮನೆಯಿಂದ ತಿಂಡೀ ಸಾಮಾನುಗಳನ್ನು ನೀನು ತಂದುಕೊಡುವುದಕ್ಕೆ ಕಾರಣವೇನು? ಎಂದನು.

ಮದನ—ಆ ಹುಡುಗ ತನಗೆ ಬಹು ಹಸಿವು ಆಗುತ್ತಿದೆ; ತನಗೆ ಅಣ್ಣ ತಮ್ಮಂದಿರೂ ಅಕ್ಕ ತಂಗಿಯರೂ ಬಹುವಾಗಿದಾರೆ. ತನ್ನ ತಂದೇ ಮೈಗೆ ಸ್ವಸ್ಥವಿಲ್ಲ, ಬೆಳಸನ್ನು ರೂಢಿಸುವುದಕ್ಕೆ ಮತ್ತೆ ಯಾರೂ ಗತಿ ಇಲ್ಲ ಎಂದು ಹೇಳಿದ, ಆದಕ್ಕಾಗಿ ಅವನಿಗೆ ಕೊಟ್ಟೆ.

ಜೋಯಿಸ—ನಿನ್ನ ಪದಾರ್ಥವನ್ನು ನೀನು ಕೊಟ್ಟುಬಿಡುವುದಕ್ಕೆ ನೀನು ಹೇಳಿದ್ದೇನೋ ಸರಿಯಾದ ಕಾರಣವೇ ಹೊರತು, ಇತರರದನ್ನು ಕೊಟ್ಟುಬಿಡುವುದಕ್ಕಲ್ಲ. ನಿನ್ನನ್ನು ಕೇಳದೆ ನಿನ್ನ ಬಟ್ಟೆಯನ್ನೆಲ್ಲಾ ತೆಗೆದು ಇನ್ನು ಯಾರಿಗಾದರೂ ಸುಮತಿ ಕೊಟ್ಟುಬಿಟ್ಟರೆ ನೀನು ಏನೆನ್ನುತೀಯೆ

ಮದನ—ಹಾಗೆ ಕೊಟ್ಟುಬಿಟ್ಟರೆ ನಾನು ಸಹಿಸಲಾರೆ. ತಪ್ಪಾ ಯಿತು, ತಮ್ಮ ಅಪ್ಪಣೆ ಇಲ್ಲದೆ ತಮ್ಮ ಪದಾರ್ಥಗಳನ್ನು ಯಾರಿಗೂ ಇನ್ನು? ಮೇಲೆ ನಾನು ಕೊಡುವುದಿಲ್ಲ.

ಜೋಯಿಸ–ಈ ಸಂಗತಿಯಲ್ಲಿ ಒಂದು ಚಿಕ್ಕ ಕಥೆ ಇದೆ, ಅದನ್ನು ನೀನು ಓದಿದರೆ ಒಳ್ಳೇದು.

## ಲೋಹಕನ ಕಥೆ

ಒಬ್ಬಾನೊಬ್ಬ ದೊರೆಗೆ ಲೋಹಕನೆಂಬ ಮಗ ಇದ್ದನು. ಮಗನನ್ನು ದೊಡ್ಡ ವಿದ್ಯಾವಂತನನ್ನಾಗಿ ಮಾಡಿ ದೊರೆತನಕ್ಕೆ ಯೋಗ್ಯನಾಗುವಂತೆ ಮಾಡಬೇಕೆಂಬ ಇಷ್ಟದಿಂದ ಘಟಕರಾದ ಉಪಾಧ್ಯಾಯರ ಮೂಲಕ ತಂದೆಯು ಲೋಹಕನನ್ನು ತಯಾರುಮಾಡಿಸುತಿದ್ದನು. ಒಂದು ದಿನ ತಂದೆಯು ಮಗನನ್ನು ಕರೆದು—ಈ ದಿವಸ ನೀನು ಕಲಿತುಕೊಂಡ ಸಂಗತಿ ಏನು? ಎಂದು ಕೇಳಿದನು. ಲೋಹಕನು–ಜೀಯಾ, ಒಂದು ವ್ಯಾಜ್ಯವನ್ನು ನಾನು ಅನ್ಯಾಯವಾಗಿ ವ್ಯವಸ್ಥೆ ಮಾಡಿದ್ದಕ್ಕೋಸ್ಕರ ನಮ್ಮ ಉಪಾಧ್ಯಾಯರು ನನಗೆ ಶಿಕ್ಷೆ ಮಾಡಿದರು, ಎಂದನು. ದೊರೆಯು—ಮಗುವೆ, ಅದು ಹೇಗೆ? ಎಂದು ಕೇಳಲು ರಾಜಪುತ್ರನು ಹೇಳಿದ್ದೇನೆಂದರೆ:—

ಬೀದಿಯಲ್ಲಿ ಇಬ್ಬರು ಹುಡುಗರು ಹೋಗುತಿದ್ದರು. ಅವರಲ್ಲಿ ಒಬ್ಬ ಚಿಕ್ಕ ಹುಡುಗ, ಒಬ್ಬ ದೊಡ್ಡ ಹುಡುಗ. ದೊಡ್ಡ ಹುಡುಗನ ಹತ್ತಿರ ಒಂದು ಚಿಕ್ಕ ಕುಲ್ಲಾವಿ ಇತ್ತು; ಅವನಿಗೆ ಅದು ಅರ್ಧ ತಲೆಗೂ ಸಾಲುತಿರಲಿಲ್ಲ. ಚಿಕ್ಕ ಹುಡುಗನ ಹತ್ತಿರ ಒಂದು ದೊಡ್ಡ ಕುಲ್ಲಾವಿ ಇತ್ತು; ಅದು ಅವನ ತಲೆಗೆಲ್ಲಾ ಆಗಿ ಕಣ್ಣು ಸಹಾ ಮುಚ್ಚಿಹೋಗುತಿತ್ತು. ಹೀಗಿರುವಲ್ಲಿ ದೊಡ್ಡ ಹುಡುಗನು ಚಿಕ್ಕ ಹುಡುಗನನ್ನು ಕುರಿತು–ನನಗೆ ದೊಡ್ಡ ಕುಲ್ಲಾವಿ ಸರಿಯಾಗಿದೆ, ಅದನ್ನು ನನಗೆ ಕೊಡು; ನಿನಗೆ ಚಿಕ್ಕ ಕುಲ್ಲಾವಿ ಸರಿಯಾಗಿದೆ, ಇದನ್ನು ನೀನು ತೆಗೆದುಕೊ, ಎಂದು ಹೇಳಿದನು. ಅದಕ್ಕೆ ಚಿಕ್ಕಹುಡುಗ ಒಪ್ಪಲಿಲ್ಲ. ತರುವಾಯ ದೊಡ್ಡ ಹುಡುಗನು ಚಿಕ್ಕ ಹುಡುಗನಿಂದ ಬಲವಂತವಾಗಿ ದೊಡ್ಡ ಕುಲ್ಲಾವಿಯನ್ನು ಕಿತ್ತುಕೊಂಡು ಸಣ್ಣ ಕುಲಾವಿಯನ್ನು ತನ್ನ ಪ್ರತಿಕಕ್ಷಿಯ ಮೇಲೆ ಎಸೆದನು. ಅವರಿಬ್ಬರೂ ಹೀಗೆ ಜಗಳವಾಡುತ್ತಿರುವಾಗ, ನಾನು ದಾರಿಯಲ್ಲಿ ಹೋಗುತಿದ್ದೆ. ತಮ್ಮ ನ್ಯಾಯವನ್ನು ತೀರಿಸಿ

ಕೊಡೆಂದು ಅವರು ನನ್ನನ್ನು ಕೇಳಿಕೊಂಡರು. ಆಗ ನಾನು ಚಿಕ್ಕ ಕುಲ್ಲಾವಿ ಚಿಕ್ಕವನಿಗೂ ದೊಡ್ಡ ಕುಲ್ಲಾವಿ ದೊಡ್ಡವನಿಗೂ ಸಲ್ಲತಕ್ಕದ್ದೆಂದು ತೀರ್ಮಾನಮಾಡಿದೆ. ನಾನು ಹೀಗೆ ತೀರ್ಮಾನಮಾಡಿದ್ದಕ್ಕಾಗಿ ನಮ್ಮ ಉಪಾಧ್ಯಾಯರು ನನ್ನನ್ನು ಶಿಕ್ಷಿಸಿದರು.

ಹೀಗೆಂದು ಲೋಹಕನು ಹೇಳಲಾಗಿ, ದೊರೆಯು—ಶಿಕ್ಷಿಸುವುದಕ್ಕೆ ಕಾರಣವೇನು? ದೊಡ್ಡವನು ದೊಡ್ಡ ಕುಲ್ಲಾವಿಯನ್ನೂ ಚಿಕ್ಕವನು ಚಿಕ್ಕ ಕುಲ್ಲಾವಿಯನ್ನೂ ಹಾಕಿಕೊಳ್ಳುವುದು ನ್ಯಾಯವೇ, ಎಂದು ಹೇಳಿದನು. ಕೂಡಲೆ ಅರಸುಮಗನು—ಅಪ್ಪಾಜಿ, ಹವುದು ಹಾಗೆಯೇ ಸರಿ. ಆದರೆ ನಮ್ಮ ಉಪಾಧ್ಯಾಯರು ಹೇಳಿದ್ದು ಬೇರೆ. "ಯಾವ ಕುಲ್ಲಾವಿ ಯಾರ ತಲೆಗೆ ಆಗುವುದು ಎಂಬುವುದನ್ನು ತೀರ್ಮಾನಿಸಿದ್ದು ನ್ಯಾಯ ತೀರಿಸಿದಹಾಗಾಗಲಿಲ್ಲ; ದೊಡ್ಡ ಹುಡುಗ ಚಿಕ್ಕ ಹುಡುಗನ ಕುಲ್ಲಾವಿಯನ್ನು ತೆಗೆದುಕೊಂಡದ್ದು ನ್ಯಾಯವೇ ಅನ್ಯಾಯವೆ? ಎನ್ನುವುದನ್ನು ವ್ಯವಸ್ಥೆಮಾಡತಕ್ಕದ್ದೇ ಅಲ್ಲಿ ಮುಖ್ಯವಾದ ಸಂಗತಿ. ಆದ್ದರಿಂದ ನೀನು ಮಾಡಿದ ತೀರ್ಮಾನ ನ್ಯಾಯವಾದ್ದಲ್ಲ." ಹೀಗೆಂದು ಅವರು ನನಗೆ ಹೇಳಿ ಗದರಿಸಿದರು. ಎಂಬದಾಗಿ ಉತ್ತರ ಕೊಟ್ಟನು.

ಈ ಕಥೆಯು ಮುಗಿಯುವ ಸಮಯಕ್ಕೆ ಸರಿಯಾಗಿ, ಮೈಮೇಲೆ ಕಾಸಿನಗಲ ಬಟ್ಟೆಗೂ ಗತಿ ಇಲ್ಲದ ಒಬ್ಬ ಒಕ್ಕಲಿಗರ ಹುಡುಗನು ಒಂದು ಬಟ್ಟೇಗಂಟನ್ನು ಕಂಕುಳಲ್ಲಿ ಇರುಕಿಕೊಂಡು ಓಡಿಓಡಿ ಹತ್ತಿರಕ್ಕೆ ಬಂದನು. ಆ ಹುಡುಗನಿಗೆ ಮುಂಡಿ ತರೆದುಹೋಗಿ ರಕ್ತ ಸುರಿಯುತಿತ್ತು; ಮೊಳಕೈ ಕೆತ್ತಿಹೋಗಿತ್ತು; ಕಣ್ಣಿನಲ್ಲಿ ಬಂದ ನೀರನ್ನು ಒರಸಿದ ಕಲೆಯೂ ಇನ್ನೂ ಕಣ್ಣಿನಲ್ಲಿ ನೀರು ಬರುವ ಸಂದರ್ಭವೂ ಚೆನ್ನಾಗಿ ಕಾಣುತಿತ್ತು. ಆ ಹುಡುಗನು ಮದನನ ಮುಂದೆ ಬಂದು ನಿಂತು, ಅವನನ್ನು ನೋಡಿ—ಬುದ್ಧಿ, ಈ ನಿಮ್ಮ ಬಟ್ಟೆಗಳನ್ನು ನೀವೇ ತೆಗೆದುಕೊಳ್ಳಿ, ನಾನು ಒಲ್ಲೆ. ಈ ಮಾಳವಾದ ಬಟ್ಟೆ ನನ್ನ ಜೀವನಕ್ಕೆ ಹೊಣೇಬೇಡುವಹಾಗೆ ಮಾಡಿತು, ಎಂದನು.

ಇದನ್ನು ಕಂಡು ಜೋಯಿಸನು, ಮದನ ಕೊಟ್ಟ ಉಪಹಾರದಿಂದ ಏನೋ ವಿಪರ್ಯಾಸ ನಡೆದಿರಬೇಕೆಂದು ತನ್ನ ಮನಸ್ಸಿನಲ್ಲಿ

ಯೋಚಿಸಿಕೊಂಡು,—ಅದೇನು ಸಂಗತಿ? ಎಂದು ಕೇಳಿದನು.

ಅದಕ್ಕೆ ಆ ಶೂದ್ರರ ಹುಡುಗನು—ಸ್ವಾಮಿ ನಾನು ಹೊಲದ ಲ್ಲಿದ್ದೆ, ಈ ಬುದ್ಧಿಯವರು ಚಂಡಾಡುತಾ ಬಂದರು. ಚಂಡು ಬೇಲಿ ಯೊಳಕ್ಕೆ ಬಿತ್ತು. ಅದನ್ನು ಈಚಿಗೆ ತೆಗೆದು ಎಸೆ ಎಂದು ನನಗೆ ಹೇಳಿ ದರು, ನಾನು ಎಸೆಯಲಿಲ್ಲ. ಅದಕ್ಕಾಗಿ ನನ್ನನ್ನು ಹೊಡೆಯುವುದಕ್ಕೆ ಬಂದರು. ನಾನೇನೂ ಇವರ ಚಾಕರನಲ್ಲ; ಇವರ ಸಂಸ್ಥಾಪನಕ್ಕೆ ಸೇರಿದವನಲ್ಲ. ತಮ್ಮ ಹಳೇಪೈಕದವರನ್ನು ಕಂಡಹಾಗೆ ನನ್ನ ಮೇಲೆ ರೇಗಿಕೊಂಡು ಬಂದರು. ಓಡಿಬರುತಾ ದಾರಿಯಲ್ಲಿ ಬಿದ್ದರು. ನಾನು ಎತ್ತಿ ನಿಲ್ಲಿಸಿದೆ. ತರುವಾಯ ಅಂಗಿ ಪಂಚೆಗಳನ್ನು ತಂದು ಇನಾ ಮಾಗಿ ಕೊಟ್ಟರು. ಅಂಗಿಯು ದಿವ್ಯವಾದ್ದು, ವಲ್ಲಿ ಉತ್ತಮವಾದ್ದು, ಕಲಾಪತ್ತು ಬೂಟಿ ದಾರೀದು.* ಅಂಗಿಯನ್ನು ನಾನು ಕೂಡಲೆ ತೊಟ್ಟು ವಲ್ಲಿಯನ್ನು ಹೊದ್ದು ಆಚಿಗೆ ಹೊರಟೆ. ನನ್ನ ಜೊತೆಗಾರರಾದ ಹುಡುಗರೆಲ್ಲಾ ನನ್ನನ್ನು ನೋಡಿ ಆಶ್ಚರ್ಯಪಡುತಾ,—ಎಲೆ ಹೈದಾ, ಎಲೋ ಮಲ್ಲಾ, ಏನೆಲೆ ಮದುವೇ ಗಂಡಿನಹಾಗೆ ಸಿಂಗರಿಸಿಕೊಂಡು ಹೊರಟೆ? ಎಂದು ಹಾಸ್ಯಮಾಡುತಾ, "ಎಲೆ ಮದುವೇಗಂಡು" ಎಂದು ಒಬ್ಬ ಕೂಗುವುದು, "ಎಲೋ ದೊರೆ ಮಗ" ಎಂದು ಮತ್ತೊಬ್ಬ ಕೂಗುವುದು, ಉಳಿದವರು ನನ್ನ ಮೇಲೆ ಮಣ್ಣು ಎರೆಚುವುದು, ಸಗಣಿ ಯನ್ನು ಎಸೆಯುವುದು, ಕಲ್ಲಿನಿಂದ ಹೊಡೆಯುವುದು, ಚಪ್ಪಾಳೆ ಹಾಕಿ ಕೊಂಡು ನಗುತಾ ನನ್ನ ಮುಂದೆ ಬಂದು ಕುಣಿಯುವುದು, ಕೆಲವರು ನನ್ನ ಅಂಗಿಯನ್ನು ಎಳೆದು ಓಡಿಹೋವುದು, "ಎಲೆ ಆಟಗಾರರ ಹೈದಾ" ಎಂದು ಕೂಗುವುದು ಹೀಗೆಲ್ಲಾ ಲೇವಡಿ ಮಾಡಿದರು. ಅವರಲ್ಲಿ ಒಬ್ಬ ದೊಡ್ಡ ಹುಡುಗ ಬಂದು ನನ್ನನ್ನು ಕೆಳಕ್ಕೆ ನೂಕಿಬಿಟ್ಟು ಓಡಿಹೋ ದನು. ನಾನು ಜೋಕುತಿಂದು ಮುಂದಕ್ಕೆ ಮುಗ್ಗರಿಸಿ ಬಿದ್ದೆ. ಮಂಡಿ ಮೊಳಕೈ ಎಲ್ಲಾ ಕಿತ್ತುಹೋಗಿ ರಕ್ತಬಂತು; ಎದೆ ತರೆದು ಹೋಯಿತು. ರಕ್ತಬಂದದ್ದನ್ನು ಕಂಡು ಕೆಲವರು ಹೆದರಿಕೊಂಡು ಓಡಿದರು. ಈ ಹಾಳು

---

* ಬುಟ್ಟೆದಾರದ್ದು.

ಬಟ್ಟೆಗಳಿಂದ ನನಗೆ ಇಂಥಾ ಗತಿ ಬಂತು. ನಾನು ಎಲ್ಲೆಲ್ಲಿ ಹೊಕ್ಕರೂ ಆ ಹುಡುಗರು ನನ್ನನ್ನು ಬಿಡದೆ ಲೇವಡಿಮಾಡುತಾ ಹುಯಿಲುಹಾಕುತಾ ಬಂದರು. ಆದ್ದರಿಂದ ಈ ಬುದ್ಧಿಯುವರ ಬಟ್ಟೆಗಳನ್ನು ಅವರಿಗೆ ಒಪ್ಪಿಸೋಣವೆಂದು ತಂದೆನು, ಹೀಗೆಂದು ಅವರಿಗೆ ಹೇಳಿದನು.

ಜೋಯಿಸ—ಅಯ್ಯೋ ಪಾಪ. ನಿಮ್ಮ ಮನೆ ಎಲ್ಲಿದೆ?

ಹುಡುಗ—ಸ್ವಾಮಿ, ನಮ್ಮ ಮನೆ ಈ ಕಾನಿನ ಆಚೆ ಒಂದು ಕೊಂಬಿನ ಕೂಗು.

ಜೋಯಿಸ—ಸುಮತಿ, ಅಡಿಗೆಯಾದಕೂಡಲೆ ಇವನ ತಂದೆಗೆ ಸ್ವಲ್ಪ ಅನ್ನವನ್ನು ತೆಗೆದುಕೊಂಡು ಹೋಗಿ ಕೊಟ್ಟು ಬರುತೀಯಾ?

ಸುಮತಿ—ಅವರ ಮನೆ ಒಂದಕ್ಕೆ ನಾಲ್ಕರಷ್ಟು ದೂರವಿದ್ದರೂ ಚಿಂತೆ ಇಲ್ಲ, ಅಗತ್ಯವಾಗಿ ಕೊಟ್ಟು ಬರುತೇನೆ.

ಈ ಮಾತನ್ನು ಕೇಳಿ ಜೋಯಿಸನು ಮನೆಯೊಳಕ್ಕೆ ಹೋದನು.

---

## ೭ ನೆ ಅಧ್ಯಾಯ

ಈ ಮಧ್ಯೆ ಮದನನು ಆ ಒಕ್ಕಲಿಗರ ಹುಡುಗನನ್ನು ಸುಮ್ಮನೆ ದುರುಗುಟ್ಟಿಕೊಂಡು ನೋಡುತಾ, ಆ ಹುಡುಗನನ್ನು ಕುರಿತು,—ಅಯ್ಯೋ ಹುಡುಗಾ, ನಾನು ಈ ಹಾಳುಬಟ್ಟೆಗಳನ್ನು ನಿನಗೆ ಕೊಟ್ಟದ್ದರಿಂದ ನಿನಗೆ ಇಂಥಾ ಪೆಟ್ಟಾಯಿತು.

ಹುಡುಗ—ಬುದ್ಧಿ, ತಾವೇನಮಾಡೀರಿ? ನನಗೆ ಕೆಟ್ಟದನ್ನು ಮಾಡಬೇಕೆಂದು ತಾವು ಬಟ್ಟೆಯನ್ನು ಕೊಡಲಿಲ್ಲ. ಏನಮಾಡುವುದು? ಯತ್ನವಿಲ್ಲ. ಈ ಪೆಟ್ಟನ್ನು ನಾನು ಲಕ್ಷ್ಯಮಾಡುವುದಿಲ್ಲ. ಹೀಗೆಂದು ಹೇಳಿ ಹೊರಟುಹೋದನು. ತರುವಾಯ ಮದನನು—ಸುಮತಿ, ಆ ಹುಡುಗ ಒಳ್ಳೆಯವನಾಗಿ ಕಾಣುತಾನೆ; ಅವ ಹಾಕಿಕೊಳ್ಳುವಂಥಾ ಬಟ್ಟೆ ನನ್ನ ಹತ್ತಿರ ಇದ್ದರೆ ಕೊಡಬಹುದಾಗಿತ್ತು.

ಸುಮತಿ—ಅಂಥಾ ಬಟ್ಟೆ ಸಿಕ್ಕುವುದೇನೂ ಕಷ್ಟವಲ್ಲ. ಅಗೋ

ಆ ಗುಡಿ ಕಾಣುವ ಗ್ರಾಮದಲ್ಲಿ ಒಂದು ಜವಳೀ ಅಂಗಡಿ ಇದೆ. ಅಲ್ಲಿ ಬಡವರು ಹಾಕಿಕೊಳ್ಳುವಂಥಾ ಬಟ್ಟೆಗಳನ್ನು ಮಾರುತಾರೆ. ಬೇಕಾದರೆ ನೀನು ಕೊಂಡುಕೊಳ್ಳಬಹುದು.

ಮಾರನೇ ದಿನ ಬೆಳಗ್ಗೆ ಸುಮತಿ ಮದನ ಇಬ್ಬರೂ ಹೊತ್ತಿಗೆ ಮುಂಚೆ ಎದ್ದು ಜವಳೀ ಅಂಗಡಿ ಇರುವ ಗ್ರಾಮಕ್ಕೆ ಹೊರಟರು. ಇವರು ಅರ್ಧದಾರಿಗೆ ಹೋದಕೂಡಲೆ ನಾಯಿ ಬೊಗಳುವ ಶಬ್ದ ಕೇಳಿತು. ತರುವಾಯ ಕಾಲು ನಿಮಿಷಕ್ಕೆ ೮—೧೦ ಸೀಳುನಾಯಿಗಳು ಭರ್ರನೆ ಓಡಿಹೋದವು. ಇದನ್ನು ಕಂಡು ಮದನನು ಇದೇನೆಂದು ಸುಮತಿಯನ್ನು ಕೇಳಿದನು.

ಸುಮತಿ—ಇದು ದೊಡ್ಡಮನೇ ಮಂಜೈಯ ಹೆಗ್ಗಡೆಯ ಹಾವಳಿ. ಇವು ಅವನ ಬೇಟೇನಾಯಿಗಳು ; ಒಂದು ಮೊಲವನ್ನು ಹರಿಸಿಕೊಂಡು ಹೋಗುತಿವೆ. ಯಾಕೆ ಅಂಥಾ ನಿರಪರಾಧಿಯಾದ ಪ್ರಾಣಿಗಳನ್ನು ಕೊಲ್ಲುತಾರೆಯೋ ನಾನರಿಯೆ! ಹಾಗೆ ಬೇಟೆಯಾಡಬೇಕೆಂಬ ಆಶೆ ಇದ್ದರೆ, ಹುಲಿ, ಕಿರುಬ, ಕಾಡಹಂದಿ ಮೊದಲಾದ ದುಷ್ಟಮೃಗಗಳಿಲ್ಲವೆ? ಅವುಗಳನ್ನು ಯಾಕೆ ಹೊಡೆಯಬಾರದು?

ಮದನ—ಅಯ್ಯೋ! ಅಂಥಾ ಮೃಗಗಳ ಗೋಜಿಗೆ ಹೋಗುವುದು ಅಪಾಯಕರ.

ಸುಮತಿ—ಅಪಾಯವೂ ಇಲ್ಲ, ಏನೂ ಇಲ್ಲ. ಹಳ್ಳಿಗಾಡುಗಳಲ್ಲಿ ಹುಲಿ, ಕಿರುಬ ಬಂದು ದನಗಳನ್ನೂ ಕುರಿಗಳನ್ನೂ ಕಚ್ಚಿಕೊಂಡು ಹೋಗುವವು. ಆದ್ದರಿಂದ ಇವುಗಳನ್ನು ಕೊಲ್ಲಬೇಕೆಂದು ಆರೇಳು ಜನ ದುಂಡಾಳುಗಳು ಈಟಿಗಳನ್ನೂ ಕರ್ಣಾಟಕ ಕೋವಿಗಳನ್ನೂ ತೆಗೆದುಕೊಂಡು ಬೆಳಗಿನಜಾವದಲ್ಲಿ ಹೊರಡುತಾರೆ. ಇವರ ಮೈಮೇಲೆ ಬಟ್ಟೆ ವಿಶೇಷವಾಗಿ ಇರುವುದಿಲ್ಲ; ದಟ್ಟಿಯನ್ನು ಮಾತ್ರ ಕಟ್ಟಿಕೊಂಡಿರುತಾರೆ. ಒಬ್ಬೊಬ್ಬ ಒಂದೊಂದು ಈಟಿಯನ್ನು ಹಿಡಿದುಕೊಂಡು ಬೇಟೆ ಇರುವ ಹೊದರು, ಕೊರಕಲು, ಗುಹೆ ಇಲ್ಲೆಲ್ಲಾ ಹುಡುಕುತಾ ಗದ್ದಲ ಮಾಡುತಾರೆ. ಮೃಗವು ಇದನ್ನು ತಡೆಯಲಾರದೆ ಬಾಲವನ್ನು ಅಲ್ಲಾಡಿಸುತಾ ತಲೆಯನ್ನು ಕೊಡವಿಕೊಂಡು ನಿಂತು ಇವರನ್ನು ಕಂಡು ಗುರು

ಗುಟ್ಟುವುದು. ಆಗ ಒಬ್ಬ ಒಂದು ಈಟಿಯಿಂದ ಒಂದು ಪಕ್ಕೆಯನ್ನು ತಿವಿಯುವನು. ಆ ಕ್ಷಣದಲ್ಲಿಯೇ ಹುಲಿಯು ಗಟ್ಟಿಯಾಗಿ ಕೂಗುತಾ ಅವನ ಮೇಲೆ ಹಾರುವುದು.

ಮದನ—ಹಾಗಾದರೆ ಆವನನ್ನು ಹಿಡಿದು ಕೊಂದುಬಿಡುವೆನು.

ಸುಮತಿ—ಇಲ್ಲ, ತಾಳು. ಅದು ಹಾರಿದಕೂಡಲೆ ಅವ ತಪ್ಪಿಸಿ ಕೊಂಡು ಅದರ ಕೈಗೆ ಸಿಕ್ಕದೆ ಪಕ್ಕಕ್ಕೆ ಹಾರುವನು. ಒಡನೆಯೇ ಇನ್ನೊಬ್ಬ ಬೇಟೆಗಾರನು ಅದರ ಇನ್ನೊಂದು ಪಕ್ಕೆಮೇಲೆ ಈಟಿಯಿಂದ ತಿವಿಯುವನು. ಅವನ ಮೇಲೆಯೂ ಹೀಗೆಯೇ ಮೃಗ ಹಾರುವುದು. ಅವನೂ ತಪ್ಪಿಸಿಕೊಳ್ಳುವನು. ಆಗ ಇನ್ನೊಬ್ಬ ತಿವಿಯುವನು. ಹೀಗೆ ಒಬ್ಬೊಬ್ಬರಾಗಿ ೮-೧೦ ಕಡೆ ತಿವಿಯಲು ಕೊನೆಗೆ ಮೃಗವು ಅರಚಿ ಕೊಂಡು ಕೆಳಕ್ಕೆ ಬಿದ್ದು ಗಾಯದಿಂದ ಪ್ರಾಣಬಿಡುವುದು.

ಮದನ—ಈ ನೋಟಾ ನೋಡುವುದಕ್ಕೆ ಬಹು ಚೆನ್ನಾಗಿರ ಬಹುದು. ಮನೆಯಲ್ಲಿ ಕೂತು ಬಾಗಿಲ ಹಾಕಿಕೊಂಡು, ನಮಗೆ ಅದರ ತೊಂದರೆ ಇಲ್ಲದಹಾಗೆ ಕಿಟಕಿಯಿಂದ ಈ ನೋಟವನ್ನು ನೋಡ ಬೇಕೆಂದು ನನಗೆ ಆಶೆ ಇದೆ.

ಸುಮತಿ—ನನಗೆ ಅಂಥಾ ಆಶೆ ಇಲ್ಲ. ಹುಲಿ ನೋಡುವುದಕ್ಕೆ ಎಂಥಾ ಸುಂದರವಾದ ಮೃಗ. ಅದು ಮರಣ ಸಂಕಟಪಡುವುದನ್ನು ನಾವು ಯಾಕೆ ನೋಡಬೇಕು? ಇದು ಹಾಗಿರಲಿ. ಹುಲಿಯಂತೂ ದುಷ್ಟ ಮೃಗ, ಅದನ್ನು ಕೊಲ್ಲುವರು; ಮೊಲ ಯಾರ ತಂಟೆಗೂ ಬರದ ಬಡ ಜಂತುವಷ್ಟೆ. ಅದನ್ನು ಯಾಕೆ ಕೊಲ್ಲಬೇಕು? ಹೊಲಗಳಲ್ಲಿ ಸ್ವಲ್ಪ ಕಾಳುಕಡ್ಡಿಯನ್ನು ತಿಂದುಕೊಂಡು ಹೋಗಬಹುದು. ಅಷ್ಟು ಮಾತ್ರಕ್ಕೇ ಅದರ ಪ್ರಾಣವನ್ನು ಯಾಕೆ ತೆಗೆಯಬೇಕು? ಅಗೋ ನೋಡು ಮೊಲ ಈ ಕಡೆಗೆ ಓಡಿಹೋಯಿತು. ಅವರ ಕೈಗೆ ಸಿಕ್ಕದೇ ಇದ್ದರೆ ಆದೀತು. ಅದು ಎತ್ತಲಾಗಿ ಹೋಯಿತೆಂದು ನನ್ನನ್ನು ಯಾರಾದರೂ ಕೇಳಿದರೆ ನಾನು ಬೇರೆ ಹೇಳುವುದಿಲ್ಲ.

ಇವರಿಬ್ಬರೂ ಹೀಗೆ ಮಾತನಾಡುತಿರುವಾಗ ನಾಯಿಗಳು ಮೊಲ ಹೋದ ಕಡೆಯನ್ನು ಕಾಣದೆ ದಿಕ್ಕುತೋಚದೆ ಬಾಯಿಬಿಟ್ಟುಕೊಂಡು

ನಾಲಗೆಯನ್ನು ಅಲ್ಲಾಡಿಸುತಾ ಏದುತಾ ನಿಂತುಕೊಂಡುವು. ಅವುಗಳ ಹಿಂದೆ ಕುದುರೆಯನ್ನು ಹತ್ತಿಕೊಂಡು ಒಬ್ಬ ಮನುಷ್ಯ ಬಂದು, ಸುಮತಿಯನ್ನು ನೋಡಿ—ಮೊಲ ಎಲ್ಲಿ ಹೋಯಿತೆಲಾ? ಎಂದು ಕೇಳಿದನು. ಸುಮತಿ ಮಾತನಾಡದಿರಲು—ಮೊಲ ಎಲ್ಲಿ, ಜಾಗ್ರತೆಯಾಗಿ ಹೇಳು, ಎಂದು ಗದರಿಸಿದನು. ಸುಮತಿಯು ಅದು ಇಂಥಾಕಡೆಗೆ ಹೋಯಿತೆಂದು ನಾನು ಹೇಳುವುದಿಲ್ಲ, ಎಂದು ನಿಧಾನವಾಗಿ ಹೇಳಿದನು. ಆಗ ಆ ಕುದುರೇ ಸವಾರನು—ನೀನು ಹೇಳದಿದ್ದರೆ ನಾನು ಬಿಟ್ಟೇನೆ? ಎಂದು ಕುದುರೆಯನ್ನು ಇಳಿದು, ಕೈಲಿದ್ದ ಚಾವಟಿಯಿಂದ ಸುಮತಿಯನ್ನು ಹೊಡೆಯಲು ಮೊದಲುಮಾಡಿದನು. ತರುವಾಯ—ಈಗಲಾದರೂ ಹೇಳೀಯ? ಎಂದು ಅವ ಕೇಳಲು, ಸುಮತಿಯು—ಇಷ್ಟಾದರೂ ನಾನು ಹೇಳಲಿಲ್ಲವಂತೆ; ಇನ್ನು ಯಾಕೆ ಹೇಳಿಯೇನು? ನೀನು ನನ್ನ ಪ್ರಾಣತೆಗೆದರೂ ಹೇಳುವುದಿಲ್ಲ ಎಂದನು. ಇದೆಲ್ಲವನ್ನೂ ಕಂಡು ಮದನನು ದೊಡ್ಡದಾಗಿ ಅಳುವುದಕ್ಕೆ ಆರಂಭಿಸಿದನು. ಈ ಹುಡುಗನ ಗೋಳಾಗಲಿ ಆ ಹುಡುಗನ ಧೈರ್ಯವಾಗಲಿ ಆ ನೀಚನ ಕಲ್ಲು ಮನಸ್ಸನ್ನು ಬೇರೆ ಕರಗಿಸಲಿಲ್ಲ. ಇಷ್ಟರೊಳಗೆ ಅದೇ ದಾರಿಯಲ್ಲಿ ಮತ್ತೊಬ್ಬನು ಕುದುರೇಮೇಲೆ ಏರಿಕೊಂಡು ಬಂದು ಅಲ್ಲಿ ನಿಂತು, ಆ ನೀಚನನ್ನು ಕುರಿತು—ಯಾಕೆ ಹೆಗ್ಗಡೆಗಳೆ, ಆ ಹುಡುಗನನ್ನು ಹಾಗೆ ಹೊಡೆಯುತೀರಿ? ಎಂದನು. ಆ ಮಾತಿಗೆ ಮಂಜೈಯಹೆಗ್ಗಡೆಯು—ಅವನನ್ನು ಸೀಳಿ ತೋರಣಾ ಕಟ್ಟುತೇನೆ; ನನ್ನು ಮೊಲ ಹೋದ್ದನ್ನು ಕಂಡಿದಾನೆ, ಎತ್ತಲಾಗಿ ಹೋಯಿತೆಂದರೆ ಹೇಳುವುದಿಲ್ಲವಲ್ಲ! ಎಂದು ಗರ್ಜಿಸಿದನು.

ಆಗ ದಾರಿಮನುಷ್ಯ—ನೋಡಿಕೊಳ್ಳಿ ಹೆಗ್ಗಡೆಗಳೆ, ತಾವು ಮಾಡುವ ಕೆಲಸವನ್ನು ಯೋಚಿಸಿಕೊಂಡು ಮಾಡಿ; ಇಗೋ ನೋಡಿ ಹತ್ತಿರ ನಿಂತಿರುವ ಬಾಲಕ ದೊರೆಮಗ; ಅನಂಗರಾಜರ ಕುಮಾರ; ಆತನ ಗೋಜಿಗೆ ಎಲ್ಲಿಯಾದರೂ ಹೋಗಿ ಇಲ್ಲದ ಆಪತ್ತನ್ನು ತಂದುಕೊಂಡೀರಿ. (ಸುಮತಿಯನ್ನು ನೋಡಿ) ಎಲೋ ಮಗು, ಆ ಮೊಲ ಯಾವ ದಿಕ್ಕಿಗೆ ಹೋಯಿತು? ನೀನು ಅದನ್ನು ಯಾಕೆ ಹೇಳಬಾರದು? ಯಾಕೆ ಏಟತಿನ್ನುತೀಯೆ, ಪ್ರಾಣಿ!

ಸುಮತಿ ಸ್ವಲ್ಪ ಚೇತರಿಸಿಕೊಂಡು—ಆ ಬಡಜಂತುವನ್ನು ಇವರಿಗೆ ಒಪ್ಪಿಸಿ ಕೊಲ್ಲಿಸುವುದಕ್ಕೆ ನನಗೆ ಇಷ್ಟವಿಲ್ಲ.

ದಾರಿಯುವನು—ಈ ಹುಡುಗನ ಬುದ್ಧಿ ಏನು ಅದ್ಭುತವಾಗಿದೆ? ಹೆಗ್ಗಡೆಗಳೆ, ಈ ಬಾಲಕನ ಬುದ್ಧಿಗೆ ಸಮವಾಗಿ ಅವನ ವಯಸ್ಸೂ ದೇಹಶಕ್ತಿಯೂ ಇಲ್ಲದೆ ಇರುವುದು ನಿಮ್ಮ ಪುಣ್ಯವೆಂದು ತಿಳಿಯಿರಿ. ನೀವು ಯಾವಾಗಲೂ ಅತಿ ಕೋಪಿಸ್ತರು.

ಹೀಗೆ ಮಾತನಾಡುತಿರುವಾಗ ಮೊಲ ಹೋದ ದಾರಿಯ ವಾಸನೆಯನ್ನು ತಿಳಿದು ನಾಯಿಗಳು ಆಕಡೆಗೆ ಓಡಲು ಮೊದಲುಮಾಡಿದುವು. ಅದನ್ನು ಕಂಡು ಹೆಗ್ಗಡೆಯು ಕುದುರೆಯನ್ನು ಏರಿ, ತನ್ನ ಜೊತೆಯಲ್ಲಿದ್ದ ಬೇಟೆಗಾರರನ್ನು ಕರೆದುಕೊಂಡು ಹೊರಟುಹೋದನು.

ದೂರದಲ್ಲಿ ನಿಂತು ಇವೆಲ್ಲವನ್ನೂ ನೋಡಿ ಅಳುತಿದ್ದ ಮದನನು ಸುಮತಿಯ ಹತ್ತಿರಕ್ಕೆ ಬಂದು, ಹೇಗೆ ಇದ್ದೀಯೇ? ಎಂದು ಕೇಳಲಾಗಿ ಸುಮತಿಯು—ಮೈಯೆಲ್ಲಾ ಬಾಸುಂಡೆಯಾಯಿತು. ಒಂದೆರಡು ಕಡೆ ರಕ್ತವೂ ಬಂತು, ಏನಮಾಡುವುದು? ಅನುಭವಿಸಬೇಕು.

ಮದನ—ನನ್ನ ಕೈಲಿ ಒಂದು ಕೋವಿ ಇರಬೇಕಾಗಿತ್ತು; ತಿಳಿಯುತಿತ್ತು.

ಸುಮತಿ—ಏನಮಾಡುತಿದ್ದೆ?

ಮದನ—ನಿನ್ನನ್ನು ಅನ್ಯಾಯವಾಗಿ ಹೊಡೆದ ಆ ನೀಚನನ್ನು ಕೊಂದುಹಾಕುತಿದ್ದೆ.

ಸುಮತಿ—ಹಾಗೆ ನೀನು ಮಾಡಿದ್ದರೆ, ಅದು ದೊಡ್ಡ ಅಪರಾಧವಾಗುತಿತ್ತು. ಯಾಕೆಂದರೆ ಅವನು ನನ್ನನ್ನು ಕೊಲ್ಲಬೇಕೆಂದು ಬರಲಿಲ್ಲ. ನಾನು ದೊಡ್ಡವನಾಗಿದ್ದರೆ ಅವನು ನನ್ನ ತಂಟೆಗೆ ಬರುತಿರಲಿಲ್ಲ. ಇನ್ನೇನು? ಅದೆಲ್ಲಾ ಮುಗಿದು ಹೋಯಿತಲ್ಲ, ಹೋಗಲಿ. ನಮ್ಮ ಶತ್ರುಗಳ ಅಪರಾಧವನ್ನು ಕ್ಷಮಿಸಿಬಿಡೋಣ. ಹಾಗೆ ನಾವು ಕ್ಷಮಿಸಿದರೆ, ಅವರೆಲ್ಲಾ ನಮಗೆ ಮಿತ್ರರಾಗುತಾರೆ. ಈ ಮಾತನ್ನು ನಮ್ಮ ಜೋಯಿಸರು ಹೇಳಿದಾರೆ.

ಮದನ—ಅವ ಅಷ್ಟು ಹೊಡೆದರೂ ನೀನು ಅಳಲಿಲ್ಲವಲ್ಲ. ನನಗೆ ಹೆಚ್ಚಾಗಿ ಅಳು ಬಂತು.

ಸುಮತಿ—ಅತ್ತುದರಿಂದ ಪ್ರಯೋಜನವೇನು? ಬಂದ ಕಷ್ಟ ವನ್ನು ಅನುಭವಿಸಿಯೇ ತೀರಬೇಕು.

ಈ ಹುಡುಗರು ಇಬ್ಬರೂ ಈ ರೀತಿಯಲ್ಲಿ ಮಾತನಾಡಿಕೊಳ್ಳುತಾ ಜವಳೀ ಅಂಗಡಿ ಇರುವ ಗ್ರಾಮಕ್ಕೆ ಹೋಗಿ ಅಂಗಡಿಯ ಮುಂದೆ ನಿಂತು, ಬಡಜನರು ಹೊದ್ದುಕೊಳ್ಳುವಂಥಾ ಬಟ್ಟೆಗಳನ್ನು ತೆಗಿ ದಾರಣೇಮಾಡಿ, ಆ ಬಡ ಒಕ್ಕಲಿಗರ ಹುಡುಗನಿಗೂ ಅವನ ಸಹೋದರ ಸಹೋದರಿಯರಿಗೂ ಆಗುವಂತೆ ಬಟ್ಟೆಗಳನ್ನು ಕೊಂಡುಕೊಂಡರು. ಮದನನು ತನ್ನ ಅಂಗಿ ಜೇಬಿನಲ್ಲಿದ್ದ ಹಣವನ್ನು ತೆಗೆದು ಅಂಗಡಿ ಯವನಿಗೆ ಬಟ್ಟೇ ಕ್ರಯಕ್ಕಾಗಿ ಕೊಟ್ಟನು. ಆ ಜವಳಿಯನ್ನು ಗಂಟು ಕಟ್ಟಿಸಿ ಸುಮತಿಯನ್ನು ಕುರಿತು—ಸುಮತಿ ಈ ಗಂಟನ್ನು ಹೊತ್ತು ಕೊಳ್ಳುತೀಯ? ಎಂದನು.

ಸುಮತಿ—ಮದನ, ಇದನ್ನು ನಾನೇನೋ ಅಗತ್ಯವಾಗಿ ಹೊತ್ತು ಕೊಳ್ಳುತೇನೆ. ಆದರೆ ನೀನೇ ಯಾಕೆ ಹೊತ್ತುಕೊಳ್ಳಕೂಡದು? ಹೇಳು.

ಮದನ—ನಾವು ದೊಡ್ಡವರ ಮಕ್ಕಳಾಗಿ ಮೂಟೇ ಹೊತ್ತು ಕೊಳ್ಳುವುದು ಸಮನಲ್ಲ.

ಸುಮತಿ—ಯಾಕೆ ಹೊತ್ತುಕೊಳ್ಳಕೂಡದು? ಅದರಿಂದ ದೊಡ್ಡ ವರ ಮಕ್ಕಳಿಗೆ ಯಾವ ತೊಂದರೆತಾನೆ ಉಂಟಾಗುವುದು? ದೇಹ ದಾರ್ಢ್ಯವೇನೋ ಇರಬೇಕು.

ಮದನ—ಮೂಟೇ ಹೊತ್ತುಕೊಂಡರೆ ಸಾಧಾರಣ ಬಡಜನರ ಹಾಗೆ ಕಾಣಿಸುತೇವೆ.

ಸುಮತಿ—ಹಾಗಾದರೆ ದೊಡ್ಡವರ ಮಕ್ಕಳಿಗೆ ಕೈಕಾಲು, ಕಣ್ಣು ಮೂಗು, ಕಿವಿ, ಬಾಯಿ ಯಾವುದೂ ಇರಕೂಡದು; ಯಾಕೆಂದರೆ ಬಡ ವರಿಗೆ ಈ ಅಂಗಗಳೆಲ್ಲಾ ಇವೆಯಷ್ಟೆ.

ಮದನ—ಓ, ಈ ಅಂಗಗಳೆಲ್ಲಾ ಇದ್ದೇ ತೀರಬೇಕು. ಅವು ಗಳೆಲ್ಲಾ ಉಪಯೋಗವಾಗಿವೆ.

ಸುಮತಿ—ನಂನಮ್ಮ ಕೆಲಸವನ್ನು ನಾವು ನಾವೇ ಮಾಡಿಕೊಳ್ಳು ವುದು ಉಪಯೋಗವಲ್ಲವೊ?

ಮದನ—ಹವುದು. ಆದರೆ ಭಾಗ್ಯವಂತರ ಮನೆಯಲ್ಲಿ ಇಂಥಾ ಕೆಲಸವನ್ನು ಮಾಡುವುದಕ್ಕೆ ಆಳುಗಳು ಇರುತಾರೆ, ಅವರು ಅದನ್ನು ಮಾಡುತಾರೆ.

ಸುಮತಿ—ಹಾಗಾದರೆ ಭಾಗ್ಯವಂತರಾಗಿರುವುದು ಒಳ್ಳೆಯದಲ್ಲ; ಯಾಕೆಂದರೆ, ಎಲ್ಲರೂ ಭಾಗ್ಯವಂತರಾಗಿದ್ದಲ್ಲಿ ಚಾಕರೀ ಮಾಡುವುದಕ್ಕೆ ಯಾರೂ ಇಲ್ಲದೇ ಹೋಗುವರು. ಆಗ ನಾವೆಲ್ಲಾ ಉಪವಾಸ ಸಾಯ ಬೇಕಾಗುವುದು.

ಮದನ—ಉಪವಾಸ ಸಾಯಬೇಕೆ?

ಸುಮತಿ—ಹವುದು ಅನ್ನವನ್ನು ತಿನ್ನದಿದ್ದರೆ ನೀನು ಜೀವಿಸಿ ಕೊಂಡಿರುವುದಕ್ಕಾದೀತೆ?

ಮದನ—ಆಗುವುದಿಲ್ಲ; ಅಷ್ಟು ಬಲ್ಲೆ.

ಸುಮತಿ—ಅಂಥಾ ಅನ್ನವು ಅಕ್ಕಿಯಿಂದಾಗುವುದು, ಅಕ್ಕಿ ಬತ್ತ ದಿಂದ ಸಿಕ್ಕುವುದು. ಬತ್ತ ಗದ್ದೆಯಲ್ಲಿ ಬೆಳೆಯುವುದು.

ಮದನ—ಗದ್ದೆಯಲ್ಲಿ ಬತ್ತದ ಕಾಳುಗಳನ್ನು ಆರಿಸಿ ತಿನ್ನುತೇನೆ.

ಸುಮತಿ—ಆಗಲೂ ನೀನು ಕೆಲಸವನ್ನು ಮಾಡಿದಹಾಗಾಯಿತು. ಬತ್ತವನ್ನು ಕುಟ್ಟಿ ಅಕ್ಕಿಯನ್ನು ತೆಗೆಯಬೇಕು. ಅದರಲ್ಲಿ ಅನ್ನವನ್ನು ಮಾಡಿ ತಿನ್ನಬೇಕು.

ಇವರಿಬ್ಬರೂ ಹೀಗೆ ಮಾತನಾಡಿಕೊಳ್ಳುತಾ ಹೋಗುತಿರುವಾಗ ಸಮೀಪದಲ್ಲಿ ಬಹಳ ಶಬ್ದವಾಯಿತು. ಅದೇನೆಂದು ಹಿಂತಿರುಗಿ ನೋಡಲು ಒಂದು ಕುದುರೆ ಓಡಿಹೋಗುತಿತ್ತು. ಅದರ ಸವಾರನು ಕೆಳಗೆ ಬಿದ್ದು ಅವನ ಕಾಲು ರಿಕಾಪಿಗೆ ಸಿಕ್ಕಿಕೊಂಡಿತ್ತು. ಆ ಕುದುರೆ ಅವನನ್ನು ಎಳೆದುಕೊಂಡು ಹೋಗುತಿತ್ತು. ದೈವಾಧೀನದಿಂದ ಕೆಳ ಗೆಲ್ಲಾ ಒತ್ತಾಗಿ ಹುಲ್ಲು ಬೆಳೆದಿದ್ದಕಾರಣ, ಈ ಸವಾರನಿಗೆ ವಿಶೇಷವಾಗಿ ಪೆಟ್ಟಾಗಲಿಲ್ಲ. ಸುಮತಿಯು ತನಗೆ ಅಪಾಯವಾದೀತೆಂದು ಭಯ ಪಡದೆ ಇತರರಿಗೆ ಉಪಕಾರಮಾಡುವುದರಲ್ಲಿ ಯಾವಾಗ್ಯೂ ಮನಸ್ಸುಳ್ಳ ವನಾಗಿದ್ದನು. ಆದಕಾರಣ ಕುದುರೆಯು ಇಕ್ಕಟ್ಟಾದ ಒಂದು ಸಂದಿ ನಲ್ಲಿ ನುಗ್ಗಿದ್ದನ್ನು ಕಂಡು, ಸುಮತಿಯು ತನ್ನ ಕೈಯಲಿದ್ದ ಗಂಟನ್ನು

ಕೆಳಕ್ಕೆ ಎಸೆದು, ಕುದುರೇ ಎದುರಿಗೆ ತಾನು ಹೋಗಿ ನಿಂತು ಅಡ್ಡಹಾಕಿದನು; ಅದು ನಿಂತುಕೊಂಡಿತು. ಕೂಡಲೇ ಈ ಹುಡುಗನು ಅದರ ಲಗಾಮನ್ನು ಹಿಡಿದುಕೊಂಡನು. ಸ್ವಲ್ಪ ಹೊತ್ತಿಗೆ ಇಬ್ಬರು ಮೂರು ಜನ ಆಳುಗಳೂ ಮತ್ತೊಬ್ಬ ಸವಾರನೂ ಅಲ್ಲಿಗೆ ಬಂದರು; ಕೂಡಲೆ ಕುದುರೇ ಮೇಲಿನಿಂದ ಬಿದ್ದು ರಿಕಾಪಿಗೆ ಕಾಲು ಸಿಕ್ಕಿಕೊಂಡು ಎಳಿಸಿಕೊಂಡು ಹೋಗುತಿದ್ದ ಮನುಷ್ಯನ ಕಾಲ ತೊಡಕನ್ನು ಬಿಡಿಸಿ, ಮೆಲ್ಲಗೆ ಎತ್ತಿ ಕೂರಿಸಿ, ಉಪಚಾರಮಾಡಿದರು. ಅವನೇ ಮಂಜೈಯ ಹೆಗ್ಗಡೆ. ಚೆನ್ನಾಗಿ ಪ್ರಜ್ಞೆಬರಲು, ಸುತ್ತಲೂ ತಿರುಗಿ ನೋಡಿ ಹೆಗ್ಗಡೆಯು—ಈ ಹಾಳಕುದುರೆಯನ್ನು ನಿಲ್ಲಿಸಿದವರು ಯಾರು? ಎಂದು ಕೇಳಿದನು. ಸಮೀಪದಲ್ಲಿದ್ದ ಅವನ ಸ್ನೇಹಿತನು—ಹೆಗ್ಗಡೆಗಳೆ, ಈ ದಿನ ಬೆಳಗ್ಗೆ ನೀವು ಯಾರನ್ನು ಚಾವಟಿಯಿಂದ ಬಾಯಿಗೆ ನೀರಕೇಳುವ ಮಟ್ಟಿಗೆ ಹೊಡೆದರೋ ಅದೇ ಹುಡುಗನೇ ಕುದುರೆಯನ್ನು ನಿಲ್ಲಿಸಿದವನು; ಇಗೋ ಈ ಸುಮತಿ. ಅವನ ಧೈರ್ಯವೂ ಚಮತ್ಕಾರವೂ ನಿಮ್ಮ ಪುಣ್ಯಕ್ಕೆ ಒದಗಿ ಬರದಿದ್ದರೆ, ನಿಮ್ಮ ಆಶೆ ಇಲ್ಲಿಗೆ ತೀರುತಿತ್ತು, ಎಂದನು.

ಆಗ ಖೂಳನಾದ ಆ ಹೆಗ್ಗಡೆಯ ಮುಖದಲ್ಲಿ ದುಷ್ಟತನದ ಕ್ರೌರ್ಯವೂ, ಅಹಂಕಾರವೂ, ಹೀನಾಯದಿಂದ ಉಂಟಾದ ನಾಚಿಕೆಯೂ, ಕಾಣಿಸುತಿದ್ದವು. ತರುವಾಯ ಹೆಗ್ಗಡೆಯು ತನ್ನ ಉಡಿದಾರದ ತಾಯತಿಯ ತಿರುಪನ್ನು ತಿರುಗಿಸಿ ಎರಡು ಚಿನ್ನದ ಹಣವನ್ನು ತೆಗೆದು ಸುಮತಿಯನ್ನು ನೋಡಿ–ಎಲೋ ಹುಡುಗ, ಹಿಂದೆ ನಡೆದದ್ದು ಹೋಗಲಿ. ನೀನು ಕುದುರೇ ನಿಲ್ಲಿಸಿದ್ದಕ್ಕಾಗಿ ಈ ಇನಾಮನ್ನು ಹಿಡಿ, ಎಂದು ಅದನ್ನು ಅವನಿಗೆ ಕೊಡುವುದಕ್ಕೆ ಹೋದನು. ಸುಮತಿಯು ಇದನ್ನು ನೋಡಿ ಅತ್ಯಂತ ತಿರಸ್ಕಾರಭಾವದಿಂದ ಆ ಕಡೆಗೆ ತಿರುಗಿಕೊಂಡು ಯಾವ ಮಾತನ್ನೂ ಆಡದೆ, ಕೆಳಗೆ ಬಿದ್ದಿದ್ದ ಬಟ್ಟೇಗಂಟನ್ನು ಹೊತ್ತುಕೊಂಡು ಮದನನನ್ನೂ ಒಡಗೂಡಿ ಹೊರಟುಹೋದನು.

ಈ ಇಬ್ಬರು ಹುಡುಗರೂ ಮೊದಲು ಚಿಂದೀ ಹಾಕಿಕೊಂಡು ಬಂದಿದ್ದ ಆ ಬಡ ಹುಡುಗನ ಮೊಟ್ಟೇಮನೆಗೆ ಹೋದರು. ಆ ಹುಡುಗನ ತಂದೆಗೆ ಜ್ವರ ಸ್ವಲ್ಪ ಕಡಮೆಯಾಗಿತ್ತು. ಇವರಿಬ್ಬರೂ ಬರುವುದಕ್ಕೆ

ಮುಂಚೆಯೇ ರಾಮಜೋಯಿಸನೂ ಆ ಒಕ್ಕಲಿಗನ ಮನೆಗೆ ಹೋಗಿ, ರೋಗಿಗೆ ಸ್ವಲ್ಪ ಔಷಧವನ್ನು ಕೊಟ್ಟು ಹೊರಟು ಹೋಗಿದ್ದನು. ಆಗ ಮದನನು ತನ್ನ ಪರಿಚಿತನಾದ ಬಡಹುಡುಗನನ್ನು ಕರೆದು—ಎಲಪ್ಪಾ, ನೀನು ಹಾಕಿಕೊಳ್ಳುವಂಥಾ ಬಟ್ಟೆಯನ್ನು ಈಗ ತಂದು ಇದೇವೆ; ಇದನ್ನು ನೀನು ಹಾಕಿಕೊಂಡರೆ, "ಮದುವೇಗಂಡು" ಎಂದು ಯಾರೂ ನಿನ್ನನ್ನು ಕೂಗಲಾರರು; ಇದನ್ನು ಹೊದ್ದುಕೊ, ಎಂದು ಅವನಿಗೆ ಒಂದು ಪಂಚೆಯನ್ನು ಕೊಟ್ಟದ್ದಲ್ಲದೆ, ಅವನ ಮನೇಜನಕ್ಕೆಲ್ಲಾ ಒಂದೊಂದು ಬಟ್ಟೆಯನ್ನು ಕೊಟ್ಟನು. ಆಗ ಆ ಜನರ ಸಂತೋಷಕ್ಕೆ ಪಾರವೇ ಇಲ್ಲದೇ ಹೋಯಿತು. ಮನೇಜನರೆಲ್ಲರೂ ಬಂದು ಮದನನಿಗೂ ಸುಮತಿಗೂ ಅಡ್ಡಬಿದ್ದು ತಮ್ಮ ಕೃತಜ್ಞತೆಯನ್ನು ತೋರಿಸಿದರು. ಅವರ ಸಂತೋಷವನ್ನೂ ದೈನ್ಯವನ್ನೂ ನೋಡಿ ಮದನನ ಕಣ್ಣಿನಲ್ಲಿ ಆನಂದಬಾಷ್ಪ ಸುರಿಯಿತು. ಅದೇಪ್ರಕಾರ ಸುಮತಿಗೂ ಆಯಿತು. ತರುವಾಯ ಅಲ್ಲಿಂದ ಹಿಂತಿರುಗಿ ಮನೆಗೆ ಬರುತ್ತಾ ಮದನನು—ಸುಮತಿ ಇಷ್ಟು ಸಂತೋಷ ಉಂಟಾಗುವಹಾಗೆ ಹಣವನ್ನು ನಾನು ಯಾವಾಗಲೂ ವೆಚ್ಚಮಾಡಲಿಲ್ಲ. ನನಗೆ ಇನ್ನು ಯಾವ ಹಣ ದೊರೆತರೂ ಇಂಥಾ ಪರೋಪಕಾರಕ್ಕೋಸ್ಕರವೇ ಕೊಡುತೇನೆಯೇ ಹೊರತು ತಿಂಡೀ ಸಾಮಾನುಗಳಿಗೂ ಆಟದ ಸಾಮಾನುಗಳಿಗೂ ಖರ್ಚು ಮಾಡುವುದಿಲ್ಲ, ಎಂದು ಹೇಳಿದನು. ಆಗ ಅವರಿಬ್ಬರೂ ಮನೆಗೆ ಬಂದರು. ದಾರಿಯಲ್ಲಿ ಸುಮತಿ—ಲೋಕದಲ್ಲಿ ಅವರವರ ಮಟ್ಟಿಗೆ ಅವರವರು ಕೆಲಸಮಾಡದಿದ್ದರೆ ಅನ್ನ ಸಿಕ್ಕುವುದಿಲ್ಲ.

ಮದನ—ಯಾಕೆ ಸಿಕ್ಕುವುದಿಲ್ಲ? ಧಾನ್ಯ ನೆಲದಲ್ಲಿ ತನ್ನಷ್ಟಕ್ಕೆ ತಾನೇ ಬೆಳೆಯುವುದಿಲ್ಲವೆ?

ಸುಮತಿ--ಧಾನ್ಯವೇನೋ ನೆಲದಲ್ಲಿ ಬೆಳೆಯುವುದು. ಆದರೆ ನೆಲವನ್ನು ಉಳಬೇಕು, ಹಸನುಮಾಡಬೇಕು.

ಮದನ—ಉಳುವುದು ಎಂದರೇನು?

ಸುಮತಿ—ಒಂದು ದೊಡ್ಡಮರದ ತುಂಡಿಗೆ ನೊಗವನ್ನು ಕಟ್ಟಿರುವರು. ಅದನ್ನು ಹೊಲಗಳಲ್ಲಿ ಎರಡು ಎತ್ತು ಎಳೆದುಕೊಂಡು ಹೋಗುವುದನ್ನು ನೋಡಿಲ್ಲವೆ?

ಮದನ—ಹವುದು, ನೋಡಿದೇನೆ, ಅದೆಯೋ ಉಳುವುದು ?

ಸುಮತಿ—ಹಾಗೆ ಉದ್ದವಾದ ಮರದ ತುಂಡಿಗೆ ನೇಗಿಲೆಂದು ಹೆಸರು. ನೇಗಿಲಿನ ಹಿಂಭಾಗದಲ್ಲಿ ಕೆಳಗಡೆ ಮೊನೆಯಾಗಿರುವ ಕಬ್ಬಿಣದ ಗುಳ ಪೆಟ್ಟಿರುವುದು. ಅದಕ್ಕೆ ಮೇಲುಭಾಗದಲ್ಲಿ ಉದ್ದವಾದ ಒಂದು ಗೂಟವಿರುವುದು. ಮನುಷ್ಯನು ಆ ಗೂಟವನ್ನು ಬಲವಾಗಿ ಒತ್ತಿ ಹಿಡಿದುಕೊಂಡು ಎತ್ತುಗಳನ್ನು ಮುಂದಕ್ಕೆ ಹೊಡೆದರೆ, ನೆಲವು ಉದ್ದಕ್ಕೂ ಅಗೆದಹಾಗೆ ಆಗುವುದು. ಅದೇ ಉಳುವುದು. ಮೊದಲು ಉತ್ತ ಸ್ಥಳದ ಹತ್ತಿರಲೇ ಮತ್ತೆ ಉಳಬೇಕು. ಹೀಗೆ ಭೂಮಿಯನ್ನೆಲ್ಲಾ ಉತ್ತು, ಮಣ್ಣು ತಳಮೇಲನಾದ ತರುವಾಯ ಬೀಜವನ್ನು ಚೆಲ್ಲುವರು. ಆ ಮೇಲೆ ಹರತೇ ಹೊಡೆಯುವರು, ಸ್ವಲ್ಪದಿವಸದಲ್ಲಿ ಮೊಳಕೆ ಹೊರಟು ಗಿಡವಾಗುವುದು.

ಮದನ—ಹಾಗಾದರೆ ಬಹು ಆಶ್ಚರ್ಯಕರವಾಗಿದೆ. ನಾನೂ ಸ್ವಲ್ಪ ಬೀಜವನ್ನು ಹಾಕಿ ಅದು ಹೇಗೆ ಗಿಡವಾಗುವುದೊ, ನೋಡಬೇಕು.

ಸುಮತಿ—ಹವುದು ಆಶ್ಚರ್ಯಕರವೇ ಸರಿ. ನೀನು ನಾಳೆ ಭೂಮಿಯನ್ನು ಅಗೆದು ಹಸನುಮಾಡಿಕೊಂಡಿದ್ದರೆ ನಾನು ಬೀಜವನ್ನು ತಂದುಕೊಡುತ್ತೇನೆ. ಅದನ್ನು ಹಾಕಿ ನೀನು ನೋಡುವೆಯಂತೆ,— ಹೀಗೆ ಮಾತನಾಡಿಕೊಂಡು ಇಬ್ಬರು ಹುಡುಗರೂ ಮನೆಗೆ ಹೋದರು.

ಮಾರನೇದಿನ ಪ್ರಾತಃಕಾಲದಲ್ಲಿ ಮದನನು ಎದ್ದು ಹೊಲಕ್ಕೆ ಹೋಗಿ ಸ್ವಲ್ಪಭೂಮಿಯನ್ನು ಕಷ್ಟಪಟ್ಟು ಅಗೆದು, ಮಧ್ಯಾನ್ಹದವರೆಗೂ ಶ್ರಮಪಟ್ಟು, ಮನೆಗೆ ಬಂದು, ಜೋಯಿಸನನ್ನು ಕಂಡು—ಜೋಯಿಸರೆ, ಧಾನ್ಯ ಬೆಳೆಯಬೇಕೆಂದು ಹೊಲದಲ್ಲಿ ಇದುವರೆಗೂ ನಾನು ಕೆಲಸ ಮಾಡಿದೆ, ಆದ್ದರಿಂದ ನಾನು ಒಳ್ಳೇಹುಡುಗನಲ್ಲವೆ? ಎಂದು ಕೇಳಿದನು.

ಜೋಯಿಸ—ಅದು ಹಾಗಿರಲಿ, ನೀನು ಬೆಳೆದ ಧಾನ್ಯವನ್ನು ಹೇಗೆ ಉಪಯೋಗಿಸುತೀಯೋ ಅದರ ಮೇಲೆ ನೀನು ಒಳ್ಳೆಯವನು ಕೆಟ್ಟವನು ಎಂಬ ಸಂಗತಿಯನ್ನು ತೀರ್ಮಾನಿಸಬೇಕಾಗಿದೆ. ಅದನ್ನು ನೀನು ಏನಮಾಡಬೇಕೆಂದು ಯೋಚಿಸಿದ್ದೀಯೆ ?

ಮದನ—ಇದರಲ್ಲಿ ಬತ್ತವನ್ನು ಬೆಳೆದು ಅನ್ನವನ್ನು ಮಾಡಿ ತಿನ್ನಬೇಕೆಂದು ಯೋಚಿಸಿದೇನೆ.

ಜೋಯಿಸ—ನೀನೇ ಬಿತ್ತಿ ಬೆಳೆದುದನ್ನು ನೀನೇ ತಿನ್ನುವಂಥಾ ಒಳ್ಳೇತನ ನಿನ್ನಲ್ಲಿ ಎಲ್ಲಿತರೋಣ? ಇತರ ಜನರೇನೋ ಹಾಗೆಯೇ ಮಾಡಿಕೊಂಡಿದಾರೆ. ಹಾಗೆ ಅವರು ಮಾಡದೇ ಇದ್ದರೆ ಹೊಟ್ಟೆಗೆ ಇಲ್ಲದೇ ಸಾಯಬೇಕಾಗುವುದು.

ಮದನ—ಅಂಥಾವರೆಲ್ಲಾ ಏನು ದೊರೆಮಕ್ಕಳೋ?

ಜೋಯಿಸ—ದೊರೆಮಕ್ಕಳು ಇತರರ ಹಾಗೆಯೇ ಅನ್ನಾ ತಿನ್ನುವುದಿಲ್ಲವೆ? ಇತರರು ಹೇಗೆ ಅನ್ನಕ್ಕಾಗಿ ಶ್ರಮಪಡುತಾರೆಯೋ ಅದನ್ನು ದೊರೆ ಮಕ್ಕಳು ತಿಳಿದುಕೊಳ್ಳತಕ್ಕದ್ದು ಅಗತ್ಯವಲ್ಲವೆ?

ಮದನ—ದೊರೆಮಕ್ಕಳಿಗೆ ಆಳುಗಳಿದಾರೆ; ಅವರು ಬೆಳೆದು ತಂದುಹಾಕುತಾರೆ. ನಮಗೋಸ್ಕರ ನಮ್ಮ ಹಳೇಪೈಕದವರು ಕೆಲಸ ಮಾಡುವುದಿಲ್ಲವೆ?

ಜೋಯಿಸ—ಅವರು ನಿಮಗೋಸ್ಕರ ಯಾಕೆ ಕೆಲಸಮಾಡುತಾರೆ?

ಮದನ—ನಾವು ಅವರಿಗೆ ಕೂಲಿ, ಕಂಬಳಾ ಕೊಡುತೇವೆ; ಅದಕ್ಕೋಸ್ಕರ.

ಜೋಯಿಸ—ಅವರಿಗೆ ಕೂಲಿ ಕಂಬಳಾ ಕೊಡಬೇಕಾದರೆ ಮುಂಚಿತವಾಗಿ ಹಣವಿರಬೇಕಷ್ಟೆ? ಹಣಕ್ಕೆ ಗತಿ ಇಲ್ಲದವರು ತಾವೇ ವ್ಯವಸಾಯಮಾಡಿಕೊಂಡು ಧಾನ್ಯವನ್ನು ಬೆಳೆದುಕೊಳ್ಳಬೇಕಷ್ಟೆ?

ಮದನ—ಹವುದು.

ಜೋಯಿಸ—ದೊರೆಮಕ್ಕಳ ಹತ್ತರ ಯಾವಾಗ್ಯೂ ಹಣವಿರುವುದೊ?

ಮದನ—ಒಂದೊಂದುವೇಳೆ ಇಲ್ಲದೇ ಇರುವುದೂ ಉಂಟು.

ಜೋಯಿಸ—ಅಂಥಾ ವೇಳೆಯಲ್ಲಿ ಧಾನ್ಯವನ್ನು ಸಂಪಾದಿಸುವುದಕ್ಕಾಗಿ ದೊರೆಮಕ್ಕಳು ತಾವೇ ಕೆಲಸಮಾಡಬೇಕಾಗಿ ಬರುತ್ತೆಯೋ ಇಲ್ಲವೊ?

ಮದನ—ಹವುದು.

ಜೋಯಿಸ—ಇದು ಹಾಗಿರಲಿ. ಮೊನ್ನೆ ನಾನು ಒಂದು ಕಥೆಯನ್ನು ಓದಿದೆ, ಬೇಕಾದರೆ ನಿನಗೆ ಅದನ್ನು ಹೇಳುತೇನೆ ಕೇಳು.

## ಇಬ್ಬರು ಅಣ್ಣತಮ್ಮಂದಿರು

ಹಿಸ್ಪವೆಂಬ ಪಟ್ಟಣದಲ್ಲಿ ಅಣ್ಣತಮ್ಮಂದಿರಾದ ಇಬ್ಬರು ಒಡ್ಡರಿದ್ದರು. ಅಣ್ಣನ ಹೆಸರು ಬೀರಾಬೋಯಿ, ತಮ್ಮನ ಹೆಸರು ಮಾರಾಬೋಯಿ. ಇವರಿದ್ದ ಊರಿಗೆ ೫೦ ಗಾವುದ ದೂರದಲ್ಲಿ ಒಂದು ಕಾಡಿತ್ತು. ಆ ಕಾಡಿನಲ್ಲಿ ಚಿನ್ನ ಸಿಕ್ಕುವುದೆಂತಲೂ ಅಲ್ಲಿಗೆ ಹೋಗಿ ಚಿನ್ನವನ್ನು ಅಗೆದು ತಂದು ಅನೇಕರು ಐಶ್ವರ್ಯವಂತರಾದರೆಂತಲೂ ವದಂತಿ ಹರಡಿಕೊಂಡಿತ್ತು. ಇದನ್ನು ಕೇಳಿ ತಮ್ಮನಾದ ಮಾರಾಬೋಯಿಗೆ ಆಶೆ ಹುಟ್ಟಿತು. ತಾನೂ ಆ ಕಾಡಿಗೆ ಹೋಗಿ ಚಿನ್ನವನ್ನು ಅಗೆದು ತಂದು ಐಶ್ವರ್ಯವನ್ನು ಪಡೆಯಬೇಕೆಂದು ಮಾರನು ನಿಶ್ಚೈಸಿಕೊಂಡನು. ಈ ಅಣ್ಣತಮ್ಮಂದಿರಿಬ್ಬರಿಗೂ ಪರಸ್ಪರ ವಿಶೇಷವಾಗಿ ಪ್ರೇಮವಿದ್ದ ಕಾರಣ, ಒಬ್ಬನು ಇನ್ನೊಬ್ಬನಿಗೆ ಹೇಳದೇ ಯಾವ ಕೆಲಸವನ್ನೂ ಮಾಡುತಿರಲಿಲ್ಲ. ಅದೇ ಪ್ರಕಾರ ತಮ್ಮನು ಒಂದು ದಿನ ಅಣ್ಣನನ್ನು ಕುರಿತು—ಅಣ್ಣ, ನಾವು ಎಷ್ಟು ಕೆಲಸವನ್ನು ಮಾಡಿದರೂ ಬರುವ ಕೂಲಿ ಹಿಟ್ಟಿಗೆ ಆದರೆ ಬಟ್ಟೆಗೆ ಇಲ್ಲ, ಬಟ್ಟೆಗೆ ಆದರೆ ಹಿಟ್ಟಿಗೆ ಇಲ್ಲ, ಎನ್ನುವಹಾಗೆ ಇದೆಯೇ ಹೊರತು, ಕೈಕಾಲು ಮೆತ್ತಗಾಗಿ ಎರಡು ದಿನ ಮನೆಯಲ್ಲಿ ಮಲಗಿಕೊಂಡರೆ, ಮುರಿಸಿಕೊಂಡು ತಿನ್ನುವುದಕ್ಕೆ ಮೂರುದುಡ್ಡಿಗೂ ಮಾರ್ಗವಿಲ್ಲ. ಇಂಥಾ ಬಡತನವನ್ನು ನಾವು ಎಷ್ಟು ದಿವಸ ಅನುಭವಿಸಿದರೂ ಅದು ಸಮೆಯುವುದಿಲ್ಲ. ಆದಕಾರಣ ನಮ್ಮ ದಾರಿದ್ರ್ಯವನ್ನು ಹೋಗಲಾಡಿಸಿಕೊಳ್ಳುವುದಕ್ಕೆ ನಾನು ಒಂದು ಉಪಾಯವನ್ನು ಹುಡುಕಿದೇನೆ. ನಾನು ೮—೧೦ ಜನ ಆಳುಗಳನ್ನು ಜೊತೆ ಮಾಡಿಕೊಂಡು ಕಸವರ ಗುಡ್ಡದ ಕಾಡಿಗೆ ಹೋಗಿ ಅಲ್ಲಿ ಚಿನ್ನದ ಗಣಿಯನ್ನು ಅಗೆದು ತೆಗೆದುಕೊಂಡು ಬಂದು ಹಣವಂತನಾಗಬೇಕೆಂದು ಯೋಚಿಸಿಕೊಂಡಿದೇನೆ. ಆದರೆ ಈ ದೊಡ್ಡ ಕೆಲಸಕ್ಕೆ ಅನುಭವಶಾಲಿಯಾದ ನಿನ್ನ ಸಹಾಯವಾಗಬೇಕು. ನೀನು ಏನಹೇಳುತೀಯೆ? ಎಂದು ಕೇಳಿದನು.

ಅಣ್ಣನಾದ ಬೀರಾಬೋಯಿಯು ವಿಶೇಷ ಆಶೆಪಾತಕನಲ್ಲದೆ, ದೇವರು ಕೊಟ್ಟದ್ದರಲ್ಲಿ ತೃಪ್ತಿಪಟ್ಟುಕೊಂಡು ಇರತಕ್ಕ ಸ್ವಭಾವವುಳ್ಳ

ವನು. ಇವನು ಮಾರಾಜೋಯಿಯ ಮಾತನ್ನು ಕೇಳಿ, ತನ್ನ ಮನಸ್ಸಿನಲ್ಲಿ ಸ್ವಲ್ಪ ಹೊತ್ತು ಯೋಚಿಸಿಕೊಂಡು, ತರುವಾಯ ಮಾರನನ್ನು ಕುರಿತು ಅವನ ಪ್ರಯತ್ನ ಸಾಗುವುದಕ್ಕೆ ಇರತಕ್ಕ ಕಷ್ಟಗಳನ್ನು ಹೇಳಿದನು. ಎಷ್ಟೆಷ್ಟು ಬಗೆಯಲ್ಲಿ ಹೇಳಿದರೂ ತಮ್ಮ ಒಪ್ಪದೆ ಮುರಾಡ ಹಾಕಿಕೊಂಡು ಕೂತನು. ಆಗ ಬೀರನು—ತಮ್ಮ! ಎಷ್ಟು ಹೇಳಿದರೂ ನೀನು ಕೇಳುವುದಿಲ್ಲ. ಚಿಂತೆ ಇಲ್ಲ; ನೀನು ಹೇಳಿದ ಪ್ರಕಾರವೇ ನಡೆಯಲಿ; ನಿನ್ನ ಮನಸ್ಸು ಸಮಾಧಾನವಾಗಿರುವುದಕ್ಕಾಗಿ ನಿನ್ನ ಸಂಗಡ ನಾನೂ ಬರುತೇನೆ. ಆದರೆ ನೀನೂ ನಿನ್ನ ಕಡೇ ಜನರೂ ಅಗೆದು ತೆಗೆದ ಚಿನ್ನದಲ್ಲಿ ನನಗೆ ರವೆಯಷ್ಟೂ ಬೇಡ. ನನ್ನ ಸಂಪಾದನೆ ನಿನಗೆ ಬೇಡ, ಹೇಗಿದ್ದರೂ ನಿನ್ನ ಸಾಮಾನುಗಳನ್ನು ಹೇರಿಕೊಂಡು ಹೋಗುವುದಕ್ಕೆ ೩-೪ ಗಾಡಿಗಳನ್ನು ನೀನು ಮಾಡಿಕೊಂಡು ಹೋಗಬೇಕಷ್ಟೆ. ಅದರ ಮೇಲೆ ನನ್ನ ಕೆಲವು ಸಾಮಾನುಗಳನ್ನೂ ಹೇರಿಕೊಂಡು ಹೋಗುವಹಾಗೆ ನೀನು ಮಾಡಿಸಿಕೊಟ್ಟರೆ ಸಾಕು, ಎಂದು ನುಡಿದನು.

ಅಣ್ಣ ತಮ್ಮಂದಿರಿಬ್ಬರೂ ಇದಕ್ಕೆ ಒಪ್ಪಿದರು. ಮಾರನು ತನ್ನ ಮನೆಯಲ್ಲಿದ್ದ ಕುಡಿಕೆ ಮಡಕೆಗಳ ಸಹಿತವಾಗಿ ಮಾರಿ, ಮೊನೆಗುದ್ದಲಿ, ಎಲೆಗುದ್ದಲಿ, ಕಲ್ಲುಳಿ, ಚಮ್ಮಟಿಗೆ, ಕುಕ್ಕೆಗಳು, ಹಗ್ಗ, ಮಚ್ಚುಕತ್ತಿ, ಕೊಡಲಿ, ಕುಡಗೋಲು, ಮೊದಲಾದ ಆಯುಧಗಳನ್ನು ಸಜ್ಜುಮಾಡಿಕೊಂಡು ನಾಲ್ಕು ಗಾಡಿಯನ್ನು ಮಾಡಿ ಸಾಮಾನೆಲ್ಲವನ್ನೂ ಅವುಗಳ ಮೇಲೆ ಹಾಕಿಕೊಂಡು ಹತ್ತು ಜನ ಆಳುಗಳನ್ನು ಕರೆದುಕೊಂಡು ಹೊರಟನು. ಬೀರನಾದರೋ ಗುದ್ದಲಿ, ನೇಗಿಲು, ಕಳೆಕೊಕ್ಕೆ ಮೊದಲಾದ ವ್ಯವಸಾಯಕ್ಕೆ ಅನುಕೂಲವಾದ ಆಯುಧಗಳನ್ನೂ ನಾಲ್ಕಾರು ಕಾಲುನಡೆಗಳನ್ನೂ ತರಹೇವಾರಿ ಬೀಜಗಳನ್ನೂ ತೆಗೆದುಕೊಂಡು ಹೊರಟನು. ತಮ್ಮನಾದ ಮಾರನು ಮುಂಚಿತವಾಗಿಯೇ ಒಪ್ಪಿಕೊಂಡಿದ್ದಂತೆ ಅಣ್ಣನ ಸಾಮಾನುಗಳನ್ನು ತನ್ನ ಗಾಡಿಯ ಮೇಲೆ ಹಾಕಿಕೊಂಡು ಪ್ರಯಾಣ ಮಾಡಿದನು. ಕಸವರಗುಡ್ಡದ ಕಾಡು ಸಮೀಪಿಸಿತು. ಅದರ ಹತ್ತಿರ ಹತ್ತಿರಕ್ಕೆ ಹೋದಹಾಗೆಲ್ಲಾ ಮಾರನ ಆಶೆಯೂ ಕುತೂಹಲವೂ ಹೆಚ್ಚಾದವು. ಈ ವನಪ್ರದೇಶವಾದ ಕೂಡಲೆ ಬೀರಾ

ಬೋಯಿಯು ಸುತ್ತ ಮುತ್ತ ನೋಡಿ ಭೂಗುಣ ಅಲ್ಲಿ ಚೆನ್ನಾಗಿದೆ ಎಂದು ತಿಳಿದು, ಮಾರನನ್ನು ಕುರಿತು—ತಮ್ಮಾ, ಇನ್ನು ನಾನು ಮುಂದಕ್ಕೆ ಬರಲಾರೆ, ನನ್ನ ಸಾಮಾನುಗಳನ್ನು ಈಚೆಗೆ ತೆಗೆದು ಕೊಟ್ಟು ನೀವು ಮುಂದಕ್ಕೆ ಪ್ರಯಾಣಮಾಡಿ, ಚಿನ್ನ ಸಿಕ್ಕುವ ಕಸವರ ಗುಡ್ಡ ಇನ್ನೂ ಹತ್ತು ಗಾವುದದ ಮೇಲಿದೆ. ನೀವೆಲ್ಲಾ ಹೋಗಿಬರುವ ತನಕ, ನಾನು ಇಲ್ಲಿಯೇ ಇರುತೇನೆ, ಎಂಬದಾಗಿ ಹೇಳಿ ತನ್ನ ಸಾಮಾನುಗಳನ್ನು ಈಚೆಗೆ ತೆಗೆದುಕೊಂಡು, ಹಿಂದೆ ನಿಂತನು ; ತಮ್ಮ ಎಷ್ಟು ಹೇಳಿದರೂ ಕೇಳಲಿಲ್ಲ; ಒಂದು ಹೆಜ್ಜೆಯನ್ನಾದರೂ ಮುಂದಕ್ಕೆ ಇಡಲಿಲ್ಲ.

ಆಗ, ಮಾರಾಬೋಯಿಯು ಅಣ್ಣನನ್ನ ಹೆಚ್ಚಾಗಿ ಬಲವಂತ ಮಾಡಲಾರದೆ ಮನಸ್ಸಂಕೋಚಮಾಡಿಕೊಂಡು, ತನ್ನ ಸಾಮಾನು ಗಳನ್ನೂ, ಜನರನ್ನೂ ಮುಂದಕ್ಕೆ ಸಾಗಿಸಿಕೊಂಡು ಹೋಗುತಾ ಅವ ರಲ್ಲಿ ಒಬ್ಬನನ್ನು ಕುರಿತು—ನಮ್ಮಣ್ಣನಲ್ಲಿ ನನಗೆ ಎಷ್ಟೋ ಮರ್ಯಾದೆ ಇತ್ತು. ಈಗ ಆತನ ನಡತೆಯನ್ನು ಕಂಡು ಮನಸ್ಸಿಗೆ ಬಹು ಅಸಮಾ ಧಾನವಾಗಿದೆ. ನಾವು ಮಾಡತಕ್ಕ ಮಹಾಪ್ರಯತ್ನಕ್ಕೆ ತಾನು ಸಹಾಯ ಮಾಡಿ ಐಶ್ವರ್ಯನ್ನು ಸಂಪಾದಿಸಿ ಸುಖವಾಗಿರುವದನ್ನು ಬಿಟ್ಟು, ಹೆಂಗಸರಹಾಗೆ ಹಠವನ್ನು ಮಾಡಿ ಹಿಂದೆ ನಿಂತುಕೊಂಡು ಇದಾನೆ. ಇದು ಯಾವ ಕಾರ್ಯವನ್ನು ಸಾಧನೆಮಾಡುವುದಕ್ಕೋ ಗೊತ್ತಾಗ ಲಿಲ್ಲ. ಆತನ ಮನಸ್ಸಿಗೆ ಬಂದಹಾಗೆ ಮಾಡಲಿ. ನಾವು ಯತ್ನಿಸಿದ ಕಾರ್ಯವನ್ನು ಸಾಧಿಸಿ, ಸಾಹಸಮಲ್ಲರೆನಿಸಿಕೊಳ್ಳೋಣ, ಹಿಂತೆಗೆಯ ಬಾರದು, ಎಂದು ಜೊತೆಗಾರರಿಗೆ ಪ್ರೋತ್ಸಾಹಿಸುತಾ ಮುಂದಕ್ಕೆ ಹೊರಟನು. ಹೋಗು ಹೋಗುತಾ ಗಾಡಿ ಹೋಗುವುದಕ್ಕೆ ದಾರಿಯೇ ಇರಲಿಲ್ಲ. ಅನೇಕ ಜಾತಿ ಮರಗಳು ಹೆಜ್ಜೆ ಹೆಜ್ಜೆಗೂ ಬೆಳೆದು ಗಗನಕ್ಕೆ ಹೋಗಿದ್ದವು. ಕೆಳಗೆಲ್ಲಾ ಕಾಲಿಡುವುದಕ್ಕೆ ಜಾಗವಿಲ್ಲದೆ ಮುಳ್ಳು ಪೊದೆಗಳು ಬೆಳೆದಿದ್ದವು. ಇವುಗಳನ್ನು ಕಡಿದು ಅಲ್ಲಲ್ಲಿ ದಾರಿಯನ್ನು ಸಮಮಾಡಿಕೊಂಡು ಮುಂದಕ್ಕೆ ಹೊರಟರೆ, ಕಾಡೆಮ್ಮೆ ಮುಳ್ಳುಹಂದಿ ಮುಂತಾದ ಕೆಟ್ಟ ಮೃಗಗಳು ಅಲ್ಲಲ್ಲಿ ಇವರ ಗಾಡೀ ಎತ್ತುಗಳನ್ನು

ಒಂದೊಂದಾಗಿ ಎಳೆದುಕೊಂಡು ಹೋಗುತಾಬಂದವು. ಹೀಗೆ ಶ್ರಮ ಪಟ್ಟುಕೊಂಡು ಬೆಟ್ಟವನ್ನು ಹತ್ತಿ, ಹಳ್ಳವನ್ನು ಇಳಿದು, ನದಿಗಳನ್ನು ದಾಟಿ, ಅನ್ನ ನೀರಿಲ್ಲದೆ ಆಯಾಸಪಟ್ಟು, ಕೊನೆಗೆ ಇವರೆಲ್ಲರೂ ಕಸವರ ಗುಡ್ಡವನ್ನು ತಲಪಿದರು. ಅಲ್ಲಿ ವಿಶೇಷವಾಗಿ ಅಗೆದು ಹುಡುಕಲು ಚಿನ್ನದ ಅದಿರುಗಳು ಅನೇಕವಾಗಿ ಸಿಕ್ಕಿದವು. ಅದೆಲ್ಲವನ್ನೂ ಈಚೆಗೆ ತೆಗೆದು ಹೊತ್ತುಕೊಂಡು ಊರಿಗೆ ಬರಬೇಕೆಂದು ನಿಶ್ಚೈಸಿದರು. ಅಷ್ಟು ಹೊತ್ತಿಗೆ, ಇವರ ಸಂಗಡ ತೆಗೆದುಕೊಂಡು ಹೋಗಿದ್ದ ಸಾಮಾನುಗಳೆಲ್ಲಾ ಮುಗಿದು ಎರಡು ಮೂರು ದಿವಸದಿಂದಲೂ ಪೇಚಾಡಿಹೋದರು. ಕೆಲವರು ಹಸಿವಿನಿಂದಲೂ, ಕೆಲವರು ರೋಗದಿಂದಲೂ ಸತ್ತುಹೋಗಿ ಇಬ್ಬರು ಮೂರು ಜನ ಮಾತ್ರ ಉಳಿದರು. ಈ ಜನರೂ ಮಾರನೂ ಚಿನ್ನದ ಅದಿರುಗಳನ್ನು ಹೊತ್ತುಕೊಂಡು ಹಿಂತಿರುಗಿ ಬಹು ಶ್ರಮದಿಂದ ಬೀರಾಬೋಯಿ ಇದ್ದ ಸ್ಥಳಕ್ಕೆ ಬಂದು ಸೇರಿದರು.

ಅತ್ತ ತಮ್ಮನ ಸಂಗಡ ಮುಂದಕ್ಕೆ ಹೊರಡುವುದಿಲ್ಲವೆಂದು ಹೇಳಿ ಕಸವರಗುಡ್ಡದ ಕಾಡಿನ ಮುಂಭಾಗದಲ್ಲಿಯೇ ಉಳಿದುಕೊಂಡ ಬೀರಾ ಬೋಯಿಯು ಅಲ್ಲಿದ್ದು ಒಂದು ಮರದ ಕೆಳಗೆ ಗುಡಿಸಲನ್ನು ಹಾಕಿ ಕೊಂಡು ಇರುತಾ, ಅಲ್ಲಿ ಸ್ವಲ್ಪ ಭೂಮಿಯನ್ನು ಅಗೆದು, ವ್ಯವಸಾಯ ಮಾಡಿ, ತಾನು ತೆಗೆದುಕೊಂಡು ಹೋಗಿದ್ದ ಬಗೆಬಗೆ ಬೀಜಗಳನ್ನು ಬಿತ್ತಿ ತರಕಾರಿಯನ್ನು ಬೆಳೆದು ತುಂಬಿಕೊಂಡು ಇದ್ದನು. ಮತ್ತು ತನ್ನ ಸಂಗಡ ತೆಗೆದುಕೊಂಡು ಹೊಗಿದ್ದ ಕುರಿಗಳೂ ಮೇಕೆಗಳೂ ಬಹಳ ಮರಿಯನ್ನು ಹಾಕಿ ವೃದ್ಧಿಯಾದವು. ದನಗಳೂ ಕರುಗಳನ್ನು ಹಾಕಿ ಇದೇ ರೀತಿಯಲ್ಲಿ ಹೆಚ್ಚಿದವು. ಈ ಕರಾವಿನಿಂದ ಹಾಲು, ಮೊಸರು, ಬೆಣ್ಣೆ, ತುಪ್ಪ, ಮೊದಲಾಗಿ ಸಮೃದ್ಧಿಯಾಗಿತ್ತು.

ಮಾರಾಬೋಯಿಯು ಅಣ್ಣನ ಬಿಡಾರಕ್ಕೆ ಬಂದು-ಅಣ್ಣಾ, ನಾವು ಹೋದ ಅಷ್ಟು ಜನರಲ್ಲಿ ಕಳೆದುಳಿದು ನಾವು ೩ ಜನ ಮಾತ್ರ ನಿಂತೆವು. ಉಳಿದವರೆಲ್ಲಾ ರೋಗದಿಂದಲೂ ಹಸಿವುಬಾಯಾರಿಕೆಯಿಂದಲೂ, ದೇಹ ಶ್ರಮದಿಂದಲೂ, ಸತ್ತುಹೋದರು. ನಾವೂ ಸಹಿತ ಹೊಟ್ಟೆಗೆ ಕಾಣದೆ ಇಂದಿಗೆ ೩-೪ ಉಪವಾಸವನ್ನು ಮಾಡಿಕೊಂಡು ಬಂದಿದೇವೆ. ಮೊದಲು

ನಮಗೆ ಅನ್ನವನ್ನು ಹಾಕಿಸು, ನಡೆದ ಸಂಗತಿಯನ್ನೆಲ್ಲಾ ಆಮೇಲೆ ವಿಸ್ತಾರವಾಗಿ ಹೇಳುತೇನೆ ಎಂದು ನುಡಿದನು.

ಆಗ ಬೀರನು—ತಮ್ಮಯ್ಯ, ಮೊದಲು ನಾನೂ ನೀನೂ ಊರ ಬಿಟ್ಟು ಹೊರಡುವಾಗ ನಿನ್ನ ಸಂಪಾದನೆ ನನಗೆ ಬೇಡ, ನನ್ನ ಸಂಪಾದನೆ ನಿನಗೆ ಬೇಡವೆಂದು ಒಡಂಬಡಿಕೆಯನ್ನು ಮಾಡಿಕೊಂಡದ್ದು ನಿನಗೆ ಜ್ಞಾಪಕವಿದೆಯೆ? ಆ ಪ್ರಕಾರ ಈಗಲೂ ನಾವು ನಡೆದುಕೊಳ್ಳಬೇಕಾಗಿದೆ. ಆದಕಾರಣ ನಾನು ಸಂಪಾದನೆ ಮಾಡಿದ ತಿಂಡೀಸಾಮಾನುಗಳನ್ನು ನಿನಗೆ ನಾನು ಸುಮ್ಮನೇ ಕೊಡುವುದಿಲ್ಲ. ಇದನ್ನು ಖಂಡಿತವಾಗಿ ತಿಳಿ, ಎಂದು ಹೇಳಿದನು. ಚಿನ್ನದ ಅದಿರುಗಳನ್ನೇ ತಂದು ಹಾಕಿಕೊಂಡಿದ್ದ ಮಾರನು ಲಕ್ಷ್ಯವಿಲ್ಲದೆ—ಅಣ್ಣ, ಹಾಗೇ ಆಗಲಿ. ನೀನು ನಮಗೆ ಹಾಕುವ ಅನ್ನಕ್ಕೆ ಬದಲಾಗಿ ಚಿನ್ನವನ್ನು ತೆಗೆದುಕೊ; ಇದರಮೇಲೆ ನಿನ್ನ ಹಂಗೇನು? ಎಂದು ಧಿಕ್ಕರಿಸಿ ಮಾತನಾಡಿ ನಿತ್ಯವೂ ಬೀರಾಬೋಯಿ ಮನೆಯಲ್ಲಿ ಊಟಮಾಡುತಾ, ಆಯಾ ದಿವಸಕ್ಕೆ ತಕ್ಕಷ್ಟು ಚಿನ್ನವನ್ನು ಅವನಿಗೆ ವಾರಡಿಯಾಗಿ ಕೊಡುತಾ ಅಲ್ಲಿಯೇ ೧-೨ ತಿಂಗಳು ಇದ್ದು ಆರಯ್ಕೆ ಮಾಡಿಕೊಂಡು ಚೇತರಿಸಿಕೊಂಡನು. ಇವನು ತಂದಿದ್ದ ಚಿನ್ನವೆಲ್ಲಾ ಮುಗಿದು ಹೋಯಿತು, ಕೈ ಬರಿದಾಯಿತು. ಅಣ್ಣನು ಹಾಕಿದ ೩ ದಿವಸದ ಅನ್ನ ಇವನ ಮೇಲೆ ಬಾಕಿ ನಿಂತಿತು. ಹಣವನ್ನಾಗಲಿ ಚಿನ್ನವನ್ನಾಗಲಿ ಕೊಡು, ಕೊಡು, ಎಂದು ಬೀರನು ವರಾತುಮಾಡುತಿದ್ದನು. ಆಗ ತಮ್ಮನು ತನ್ನ ಸ್ಥಿತಿಯನ್ನು ನೋಡಿಕೊಂಡು ದುಃಖಪಡುತಾ—ಅಯ್ಯೋ, ನನ್ನ ಹಣೆಯಲ್ಲಿ ಹೀಗೆ ಬರೆಯಿತು. ನಾನು ಶ್ರಮಪಟ್ಟು ಸಂಪಾದಿಸಿದ ಚಿನ್ನದಲ್ಲಿ ವೀಸತೂಕವೂ ನನಗೆ ಇಲ್ಲದಹಾಗಾಯಿತು. ಒಡಹುಟ್ಟಿದ ಅಣ್ಣ ಸಹಿತವಾಗಿ ನನಗೆ ಶತ್ರುವಾದ. ಮೊದಲೆಲ್ಲಾ ನಯವಾಗಿ ಮಾತನಾಡಿಕೊಂಡಿದ್ದು ಇಂಥಾ ಸಮಯದಲ್ಲಿ ಕೆಲಸ ಕೊಟ್ಟ. ತಾನು ೮ ದಿವಸ ನನಗೆ ಅನ್ನ ಹಾಕಿದ. ನನ್ನ ಕಷ್ಟಾರ್ಜನೆಯನ್ನೆಲ್ಲಾ ಕಿತ್ತುಕೊಂಡು ನನ್ನನ್ನು ಕಾಡಪಾಲು ಮಾಡಿದ. ಇವ ಎಂಥಾ ಅಣ್ಣ? ದಾಯಾದಿ ಮತ್ಸರವನ್ನು ಹೀಗೆ ತೀರಿಸಿಕೊಂಡ ಅವನೇ ಬದುಕಲಿ. ನಾನು ದೇಶಾಂತರಗತನಾಗಿ ಹೋಗಿ

ಪ್ರಾಣವನ್ನು ಕಳೆದುಕೊಳ್ಳುತ್ತೇನೆ, ಎಂದು ಮಾರನು ಗೋಳಾಡುತ್ತಾ ಆಚೆಗೆ ಹೊರಟನು. ಈ ಸಮಯವನ್ನೇ ನಿರೀಕ್ಷಿಸುತ್ತಿದ್ದ ಬೀರಾಬೋಯಿಯು ಜಾಗ್ರತೆಯಾಗಿ ಹೋಗಿ ತಮ್ಮನ ಕೈ ಹಿಡಿದುಕೊಂಡು—ತಮ್ಮ, ಈ ಪ್ರಪಂಚವೆಲ್ಲಾ ಹೋದರೂ ಹೋಗಲಿ, ಒಡಹುಟ್ಟಿದ ನೀನೊಬ್ಬ ಚೆನ್ನಾಗಿದ್ದರೆ ಸಾಕು. ನಿನ್ನ ಚಿನ್ನವನ್ನೆಲ್ಲಾ ತೆಗೆದುಕೊ; ನನ್ನ ಸಂಪಾದನೆಯೆಲ್ಲವನ್ನೂ ತೆಗೆದುಕೊ, ನನಗೆ ಏನೂ ಬೇಡ. ನೀನು ಸುಖವಾಗಿದ್ದರೆ ಅದೇ ನನಗೆ ಒಂದು ಕೋಟಿ. ನಿನಗೆ ಬುದ್ಧೀ ಕಲಿಸುವುದಕ್ಕೋಸ್ಕರವೇ ನಾನು ಬೇಕೆಂದು ಹೀಗೆ ಮಾಡಿದೆ. ನಾವು ಎಷ್ಟು ಹಣವನ್ನೂ ಚಿನ್ನವನ್ನೂ ಸಂಪಾದಿಸಿದಾಗ್ಯೂ ನಮಗೆ ಬೇಕಾದ ಪದಾರ್ಥಗಳನ್ನು ಕೊಂಡುಕೊಳ್ಳುವುದಕ್ಕೆ ಉಪಯೋಗವೇ ಹೊರತು ಬೇರೆ ಇಲ್ಲ. ಶ್ರಮಪಡತಕ್ಕವನಿಗೆ ಇದ್ದಕಡೆಯಲ್ಲಿಯೇ ಬೇಕಾದ ಪದಾರ್ಥ ಸಿಕ್ಕುವುದು. ಕೃಷಿಯೇ ಮನುಷ್ಯನಿಗೆ ಮುಖ್ಯವಾದ್ದು. ಈ ಅರ್ಥವನ್ನು ನಿನಗೆ ಚೆನ್ನಾಗಿ ತಿಳಿಸಿದೇನೆ. ಈಗ ನಿನಗೆ ಬುದ್ಧಿ ಬಂತೆಂದು ನಂಬಿದೇನೆ. ಈಗಲಾದರೂ ಇಲ್ಲದ ಆಶೆಯನ್ನು ಬಿಟ್ಟು ಬಿಡು, ಎಂದು ಹೇಳಿದನು. ಮಾರಾಬೋಯಿಯು ಇದನ್ನು ಕೇಳಿ ನಾಚಿಕೊಂಡು ಸುಮ್ಮನಾದನು; ಮತ್ತು ಅಣ್ಣನ ಔದಾರ್ಯವನ್ನು ಕಂಡು ಅತ್ಯಾಶ್ಚರ್ಯಪಟ್ಟು, ಅವನಿಗೆ ವಿಶೇಷವಾಗಿ ಕೃತಜ್ಞನಾಗಿರುತ್ತಾ, ಭಂಗಾರದ ಬೆಟ್ಟವಿದ್ದರೂ ಸರಿಯೆ, ಕೃಷಿಗಿಂತಲೂ ಅದು ಉತ್ತಮವಾದ್ದಲ್ಲವೆಂದು ಅನುಭವದಿಂದ ತಿಳಿದುಕೊಂಡನು.

ಅಣ್ಣತಮ್ಮಂದಿರಿಬ್ಬರೂ ೩ ದಿವಸ ಅಲ್ಲಿಯೇ ಇದ್ದು ತಮ್ಮ ಊರಿಗೆ ಹೋದರು. ಮಾರನು ತಾನು ತಂದ ಚಿನ್ನದಲ್ಲಿ ಅರ್ಧವನ್ನು ಸ್ವೀಕರಿಸೆಂದು ಎಷ್ಟು ಹೇಳಿಕೊಂಡಾಗ್ಯೂ ಬೀರನು—ಶ್ರಮಪಟ್ಟು ತನ್ನ ಅನ್ನವನ್ನು ತಾನು ಬೆಳೆದುಕೊಳ್ಳತಕ್ಕವನಿಗೆ ಚಿನ್ನಕ್ಕೆ ಏನೂ ಕಡಮೆ ಇಲ್ಲ. ನಿನ್ನ ಚಿನ್ನ ನನಗೆ ಬೇಡಲೇಬೇಡ ಎಂದು ಖಂಡಿತವಾಗಿ ಹೇಳಿದನು.

---

## ೮ ನೆ ಅಧ್ಯಾಯ

ರಾಮಾಜೋಯಿಸನು ಈ ಕಥೆಯನ್ನು ಮುಗಿಸಿದ ಕೂಡಲೆ, ಮದನನು—ಜೋಯಿಸರೆ, ಬೀರಾಬೋಯಿ ಬುದ್ಧಿವಂತನಾಗಿ ತೋರು ತಾನೆ, ಇವನು ಇಲ್ಲದೇ ಇದ್ದರೆ ಮಾರನೂ ಅವನ ಸಂಗಡ ಇದ್ದವರೂ ಹೊಟ್ಟೆಗೆ ಇಲ್ಲದೆ ಪ್ರಾಣವನ್ನು ಬಿಡಬೇಕಾಗಿತ್ತು. ಅದೇನೊ ಸರಿಯೆ, ಆದರೆ ಅವರು ಕಾಡಿನಲ್ಲಿ ಇದ್ದ ಕಾರಣ ಅವರಿಗೆ ಇಂಥಾ ಕಷ್ಟ ಪ್ರಾಪ್ತ ವಾಯಿತು. ಮಾರ ಮೊದಲಾದವರು ದೊಡ್ಡ ಪಟ್ಟಣದಲ್ಲಿದ್ದರೆ, ಅವರಿಗೆ ಬೇಕಾದಷ್ಟು ಧಾನ್ಯವೂ ಆಹಾರವೂ ದೊರೆಯುವುದಕ್ಕೆ ಸಂದೇಹವಿರ ಲಿಲ್ಲ.

ಜೋಯಿಸ—ಧಾನ್ಯಮೊದಲಾದ ಆಹಾರಗಳು ಎಲ್ಲಿ ದೊರೆಯು ವವೋ ಅಂಥಾ ಕಡೆಯಲ್ಲಿಯೇ ಎಲ್ಲರೂ ಇರುವುದಕ್ಕೆ ಆದೀತೆ?

ಮದನ—ನಾನು ಹಾಗೆಯೇ ತಿಳಿದುಕೊಂಡು ಇದೇನೆ.

ಜೋಯಿಸ—ನಿರ್ಜನವಾಗಿ ಯಾವ ಧಾನ್ಯವೂ ಬೆಳೆಯದೇ ಇರತಕ್ಕ ದೇಶಗಳು ಈ ಪ್ರಪಂಚದಲ್ಲಿ ಇಲ್ಲವೊ?

ಮದನ—ಅಂಥಾ ದೇಶ ಉಂಟು. ಬೀರಮಾರರಿಬ್ಬರೂ ಹೋಗಿದ್ದ ಪ್ರಾಂತ್ಯ ಅಂಥಾದ್ದು.

ಜೋಯಿಸ—ಪ್ರಪಂಚದಲ್ಲಿ ಇನ್ನೂ ಅಂಥಾ ದೇಶಗಳು ಎಷ್ಟೋ ಇವೆ.

ಮದನ—ಜನರು ಅಂಥಾ ದೇಶಗಳಿಗೆ ಯಾಕೆ ಹೋಗಬೇಕು? ತಮ್ಮ ಸ್ವದೇಶದಲ್ಲಿಯೇ ಇರುವುದುತಾನೆ.

ಜೋಯಿಸ—ಹಾಗಾದರೆ ಸಮುದ್ರದಮೇಲೆ ಜನರು ಹೋಗ ಕೂಡದೆಂದಹಾಗಾಯಿತು; ಯಾಕೆಂದರೆ ಹಡಗು ಸಮುದ್ರದ ಮಧ್ಯದಲ್ಲಿ ಒಡೆದು ಹೋಗಬಹುದು. ನಿರ್ಜನವಾಗಿರತಕ್ಕ ಒಂದು ದ್ವೀಪ ಅಲ್ಲಿಗೆ ಹತ್ತಿರವಾಗಿರಬಹುದು. ಹೀಗಾದರೆ ಮನುಷ್ಯನು ಮೆಲ್ಲಗೆ ಈಜಿಕೊಂಡು ಆ ದ್ವೀಪಕ್ಕೆ ಹೋದರೂ ಹೋದಾನು. ಆಹಾರಕ್ಕೆ ಏನಮಾಡಬೇಕು?

ಮದನ—ಇಂಥಾ ಅಪಾಯಗಳು ಯಾವಾಗಲಾದರೂ ಸಂಭವಿ ಸಿದೆಯೆ?

ಜೋಯಿಸ—ಎಷ್ಟೋ ಸಂಭವಿಸಿದೆ. ಒಂದಾನೊಂದು ಸಾರಿ ಮಾಳನೆಂಬ ಒಬ್ಬ ಅಂಬಿಗನು, ಹಡಗು ಒಡೆದುಹೋದಕಾರಣ, ನಿರ್ಜನವಾದ ನಡುಗೆಡ್ಡೆಗೆ ಹೋಗಿ ಬಿದ್ದನು.

ಮದನ—ಇದು ಆಶ್ಚರ್ಯವಾಗಿದೆ. ಅವನಿಗೆ ಆಹಾರ ಹೇಗೆ ಸಿಕ್ಕಿತು ?

ಜೋಯಿಸ—ಅಲ್ಲಿ ಸಿಕ್ಕಿದ ಹಣ್ಣುಗಳನ್ನೂ ಗೆಡ್ಡೆ ಗೆಣಸುಗಳನ್ನೂ ತಿಂದುಕೊಂಡಿದ್ದನು.

ಮದನ—ಹೀಗೆ ಕಷ್ಟಪಡಲಾರದೆ ಅವನು ಸತ್ತುಹೋಗಲಿಲ್ಲವೆ?

ಜೋಯಿಸ-ಇಲ್ಲ. ಆಳು ಮೊದಲಿಗಿಂತಲೂ ಇನ್ನೂ ಬಲವಾದ. ಇದು ಹಾಗಿರಲಿ. ಇನ್ನೊಂದು ವಿಚಿತ್ರವಾದ ಕಥೆ ಇದೆ. ಅದನ್ನು ಈ ವಹಿಯಲ್ಲಿ ಬರೆದು ಇದೇನೆ, ನೀನು ಓದಬಹುದು.

## ನಾಲ್ಕುಜನ ನಾವಿಕರ ಕಥೆ

ಒಂದು ಪಟ್ಟಣದ ಕೆಲವು ಜನರು ಸೇರಿ ದ್ವೀಪಾಂತರದ ವ್ಯಾಪಾರ ಮಾಡಲು ಗೊತ್ತುಮಾಡಿಕೊಂಡರು; ಒಂದು ದೊಡ್ಡ ಹಡಗನ್ನು ಕಟ್ಟಿ ಅದರಲ್ಲಿ ಕೂತು ಹೊರಟರು. ಹಡಗು ಅಲ್ಲಲ್ಲಿ ನಿಂತು, ಆಯಾ ರೇವು ಪಟ್ಟಣಗಳಿಂದ ಬೇಕಾದ್ದನ್ನು ತರುತಾ, ತಂದಿದ್ದ ಪದಾರ್ಥವನ್ನು ಅಲ್ಲಿ ಮಾರುತಾ, ಮುಂದಕ್ಕೆ ಹೋಯಿತು. ದೈವಾಧೀನದಿಂದ ಗಾಳಿ ಹೆಚ್ಚಿ ಈ ನಾವೆಯನ್ನು ಉತ್ತರ ಸಮುದ್ರಕ್ಕೆ ತಳ್ಳಿಕೊಂಡು ಹೋಯಿತು. ಹಡಗು ನಡಸತಕ್ಕವರ ಯತ್ನ ಮೀರಿತು. ಯಾವ ದಿಕ್ಕೂ ತೋಚದೆ ಜನರೆಲ್ಲಾ ಗಾಬರಿಯಾದರು. ತುಫಾನು ಸ್ವಲ್ಪ ಕಡಮೆಯಾದ ಕೂಡಲೆ ದೂರದಲ್ಲಿ ಭೂಮಿ ಇದ್ದ ಹಾಗೆ ಕಾಣಿಸಿತು. ಚಳಿಗಾಲವಾದ್ದರಿಂದ ಸಮುದ್ರದ ನೀರು ಗಟ್ಟಿಯಾಗಿತ್ತು. ಆದರ ಮೇಲೆ ಹಡಗು ನಡೆಯಲಾರದೆ ಹೋಯಿತು. ಹಡಗಿನಲ್ಲಿ ಇದ್ದ ಸಾಮಾನುಗಳು ಕೆಲವು ಮುಗಿದು ಹೋಗಿದ್ದ ಕಾರಣ ದೂರದಲ್ಲಿ ಕಾಣುವ ದ್ವೀಪದಿಂದ ಆ ಸಾಮಾನನ್ನು ತಂದು ತುಂಬಿಕೊಂಡು ಮುಂದಕ್ಕೆ ಪ್ರಯಾಣ ಮಾಡಬೇಕೆಂದು ಯೋಚಿಸಿದರು. ಅಲ್ಲಿಗೆ ಹೋಗಿ ಬರಲು ಘಟಕ

ರಾದ ನಾಲ್ಕು ಜನರನ್ನು ಸಜ್ಜುಮಾಡಿ ಕಳುಹಿಸಿದರು. ಆ ದ್ವೀಪವು ಅಲ್ಲಿಗೆ ಒಂದು ಕೊಂಬಿನ ಕೂಗಿತ್ತು.

ಈ ನಾಲ್ಕು ಜನರೂ ಕೊಡಲಿ, ಮಚ್ಚುಕತ್ತಿ, ಒಂದೆರಡು ಪಾತ್ರೆಗಳು, ಒಂದು ಚೀಲತುಂಬ ಗೋಧೀ ಹಿಟ್ಟು, ಒಂದು ಚೂರಿ, ಚಕ್ಕುಮುಕ್ಕಿ, ದೂದಿ, ಒಂದು ಕರ್ಣಾಟಕ ಕೋವಿ, ಸ್ವಲ್ಪ ಮದ್ದು, ಹನ್ನೆರಡು ಗುಂಡು, ಸ್ವಲ್ಪ ಹೊಗೇಸೊಪ್ಪು, ಇಷ್ಟನ್ನು ಸಂಗಡ ತೆಗೆದುಕೊಂಡರು. ಶೀತವಲಯವಾದ ಆ ಪ್ರಾಂತದಲ್ಲಿ ಹಿಮದಗೆಡ್ಡೆ ಪರ್ವತದ ಹಾಗೆ ಬಿದ್ದಿತ್ತು. ವಾಯುಗುಣ ವ್ಯತ್ಯಾಸವಾಗಿ ಹಿಮವು ಸ್ವಲ್ಪ ಕರಗುವುದಕ್ಕೆ ಮೊದಲಾದರೆ ತಮ್ಮ ಸಾಮಾನಿನ ಭಾರ ಹೆಚ್ಚಾಗಿ, ಹಿಮದಲ್ಲಿ ತಾವು ದೊಸಗೊಂಡು ಸತ್ತುಹೋದೇವೆಂಬ ಭಯದಿಂದ ಇನ್ನೇನನ್ನೂ ತೆಗೆದುಕೊಂಡು ಹೋಗಲಿಲ್ಲ. ಇವರು ಆ ದ್ವೀಪವನ್ನು ತಲಪಿ ಹುಡುಕಲು ಅಲ್ಲಿ ಮನುಷ್ಯರ ಸೆಲೆಯೇ ಇರಲಿಲ್ಲ. ಅಷ್ಟು ಹೊತ್ತಿಗೆ ಸಾಯಂಕಾಲವಾಯಿತು. ಹಿಮದ ಹೊಡೆತ ಹೆಚ್ಚಾಯಿತು. ಚಳಿಯನ್ನು ತಡೆಯಲಾರದೆ ಕೈಕಾಲುಗಳೆಲ್ಲಾ ಬೆರೆತುಕೊಂಡು ಹೋದವು. ಇವರು ಬಂದದಾರಿಯೇ ತಿಳಿಯಲಿಲ್ಲ. ಆಗ ಹತ್ತಿರಿದ್ದ ಒಂದು ಗುಡಿಸಿಲಿನಲ್ಲಿ ಆ ರಾತ್ರೆ ಮಲಗಿದ್ದು ಬೆಳಗಾದ ಮೇಲೆ ಉಳಿದ ಕೆಲಸವನ್ನು ಮಾಡೋಣವೆಂದು ನಾಲ್ಕು ಜನರೂ ಅಲ್ಲಿಗೆ ಹೋಗಿ, ಅಲ್ಲಿ ವಿಶ್ರಮಿಸಿಕೊಂಡು ಸೂರ್ಯೋದಯಕ್ಕೆ ಎದ್ದು ಆ ದ್ವೀಪದ ಸ್ಥಿತಿಯನ್ನು ತಮ್ಮವರಿಗೆ ತಿಳಿಸೋಣವೆಂದು ಬಂದರು. ಅಷ್ಟು ಹೊತ್ತಿಗೆ ಯಾವ ಕಾರಣದಿಂದಲೋ ಗಟ್ಟಿಯಾಗಿದ್ದ ಸಮುದ್ರವೆಲ್ಲಾ ನೀರಾಗಿತ್ತು; ಅದನ್ನು ಕಂಡು ಈ ನಾಲ್ಕು ಜನ ನಾವಿಕರಿಗೂ ಅತ್ಯಂತ ಭಯವಾಯಿತು. ತಮ್ಮ ದೇಶಕ್ಕೆ ಸೇರಲು ಆ ಹಡಗಿನ ಆಶೆಯೊಂದು ಇತ್ತೇ ಹೊರತು ಮತ್ತೇನೂ ಇಲ್ಲ. ಹೇಗೆತಾನೆ ತಮ್ಮ ಜನರ ಮುಖವನ್ನು ಅವರು ನೋಡಿಯಾರು? ಹಿಂದೆ ಹಾಳು, ಮುಂದೆ ಮಹಾಸಮುದ್ರ! ಇನ್ನೇನು ಗತಿ? ಅವರ ಬುದ್ಧಿಗೆ ಮುಂದೆ ಏನೂ ತೋರಲಿಲ್ಲ.

ಹೀಗೆ ಕಥೆಯನ್ನು ಓದಿ ಅಲ್ಲಿಗೆ ನಿಲ್ಲಿಸಿ, ಮದನನು—ಜೋಯಿಸರೆ, ನಿರ್ಮಾನುಷ್ಯವಾದ ಅಂಥಾ ದ್ವೀಪದಲ್ಲಿ ಇವರು ಸೇರಿಕೊಂಡು,

ಏನು ಮಾಡಿಯಾರು? ಇನ್ನು ಗತಿಯೇನು? ಇವರೆಲ್ಲರೂ ಸತ್ತು ಹೋಗಿರಬೇಕಲ್ಲವೆ? ಎಂದನು. ಕೂಡಲೆ ಜೋಯಿಸನು—ಕಥೆಯನ್ನೆಲ್ಲಾ ಓದಿದ ಮೇಲೆ ನಿನಗೆ ಗೊತ್ತಾಗುವುದು. ಅದು ಹಾಗಿರಲಿ. ಒಂದು ಮಾತು ಕೇಳುತೇನೆ ಹೇಳು. ಈ ನಾಲ್ಕು ಜನ ನಾವಿಕರೂ ಆದಿಯಿಂದಲೂ ಕಷ್ಟದಲ್ಲಿ ನುರುಗಿದ್ದರು. ಹಾಗಲ್ಲದೆ ಯಾವ ಕೆಲಸವನ್ನೂ ಮಾಡುವುದಿಲ್ಲವೆಂಪು ದೊರೆಮಕ್ಕಳ ಹಾಗೆ ಸುಮ್ಮನೇ ಕೂತುಕೊಂಡಿದ್ದರೆ, ಅವರಿಗೆ ಯಾರಾದರೂ ಅಲ್ಲಿ ಬಂದು ಸಹಾಯ ಮಾಡುವವರಿದ್ದರೆ? ಎಂದು ಕೇಳಿದನು. ಅದನ್ನು ಕೇಳಿ ಮದನನು—ಯಾವ ಕೆಲಸ ಮಾಡಿಕೊಳ್ಳಬೇಕಾಗಿದ್ದರೂ ಅವರೇ ಮಾಡಿಕೊಳ್ಳಬೇಕು. ಅವರಿಗೆ ಇನ್ನು ಯಾರು ಗತಿ ಇದ್ದರು? ಮೊದಲಿನಿಂದ ಅವರು ಕಷ್ಟಕ್ಕೆ ನುರಿಗಿದ್ದುದೇ ಒಳ್ಳೇದಾಯಿತು, ಎಂದು ನುಡಿದನು.

(ಕಥೆ ಮುಂದಕ್ಕೆ ಸಾಗಿದ್ದು ಹೇಗೆಂದರೆ) :—

ಕಷ್ಟ ಬಂತೆಂದು ಪ್ರಾಣವನ್ನು ಕಳೆದುಕೊಳ್ಳುವುದಕ್ಕಾದೀತೆ? ಇದ್ದುದರಲ್ಲಿ ಜೀವಿಸಿಕೊಂಡಿರುವುದಕ್ಕೆ ಯತ್ನಿಸಬೇಕು. ಇದನ್ನು ಯೋಚಿಸಿ ನಾಲ್ವರೂ ರಾತ್ರೆ ಮಲಗಿದ್ದ ಗುಡಿಸಲಿಗೆ ಹೋದರು. ಗುಡಿಸಲೆಲ್ಲಾ ಮರದ ದಿಮ್ಮಿಯನ್ನು ಸೇರಿಸಿಯೇ ಕಟ್ಟಿತ್ತು. ಒಂದೊಂದು ಕಡೆ ಮಾತ್ರ ಸ್ವಲ್ಪ ಸಂದು ಬಿಟ್ಟಿದ್ದ ಕಾರಣ ತನುವಿನ ಗಾಳಿಯು ಒಳಕ್ಕೆ ನುಗ್ಗಿ ರಾತ್ರೆಯಲ್ಲಿ ಚಳಿಯನ್ನು ಸಹಿಸುವದು ಕಷ್ಟವಾಗಿತ್ತು. ಇದಕ್ಕಾಗಿ ಒಂದು ಉಪಾಯವನ್ನು ಹುಡುಕಿದರು. ಹತ್ತಿರ ಹನ್ನೆರಡೇ ಗುಂಡುಗಳು ಇದ್ದವಷ್ಟೆ. ಅವುಗಳನ್ನು ಹನ್ನೆರಡು ಸಾರಿ ಹಾರಿಸಿ ಆ ಕಾಡಿನಲ್ಲಿದ್ದ ಕೆಲವು ಸಾರಂಗಗಳನ್ನು ಕೊಂದರು. ಉದ್ದವಾದ ಕೊಂಬುಳ್ಳ ಈ ಮೃಗವು ಆ ದ್ವೀಪದಲ್ಲಿ ಬೇಕಾದಷ್ಟು ಸಿಕ್ಕುತಿದ್ದವು. ಇವುಗಳನ್ನು ಚಕ್ರವಿಲ್ಲದ ಗಾಡಿಗೆ ಕಟ್ಟಿ ಮಂಜಿನ ಗಡ್ಡೆಯ ಮೇಲೆ ಆ ಉತ್ತರವಲಯದವರು ಸವಾರಿಮಾಡುವುದುಂಟು. ಇವುಗಳನ್ನು ಕೊಂದು ಮಾಂಸವನ್ನು ತೆಗೆದು ಇರಿಸಿಕೊಂಡರು. ಅದರ ಚಕ್ಕಳದಿಂದ ಗುಡಿಸಲಿನಲ್ಲಿದ್ದ ಸಂದುಗಳನ್ನು ಮುಚ್ಚಿದರು. ತನು ವಿಶೇಷವಾಗಿ ಇದ್ದ ಕಾರಣ ಮಾಂಸ ಸ್ವಲ್ಪವೂ ಕೆಡಲಿಲ್ಲ. ಕೆಲವು ದಿವಸಗಳವರೆಗೂ ಆಹಾರಕ್ಕೆ ಅದು ಅನುಕೂಲಿಸಿತು.

ಆ ದ್ವೀಪದಲ್ಲಿ ಮುಖ್ಯವಾದ ಕ್ಷುದ್ರಮೃಗವು ಬಿಳೀಕರಡಿ, ಇದರ ಬಾಧೆಯನ್ನು ತಪ್ಪಿಸಿಕೊಳ್ಳಲು ಇವರಿಗೆ ಆಯುಧಸಾಮಗ್ರಿ ಅನುಕೂಲ ವಾಗಿರಲಿಲ್ಲ. ಕೋವಿ ಏನೋ ಇತ್ತು. ತಂದಿದ್ದ ಹನ್ನೆರಡು ಗುಂಡೂ ತೀರಿಹೋಗಿತ್ತು. ಆದಕಾರಣ ಕರಡೀ ಬೇಟೆಯಾಡುವುದಕ್ಕೆ ಮತ್ತೊಂದು ಉಪಾಯ ತೋರಿತು. ಸಮಯಬಂದಾಗಲೇ ಮನುಷ್ಯನ ಯುಕ್ತಿಯೂ ಬುದ್ಧಿಯೂ ವೃದ್ಧಿಯಾಗಿ ಪ್ರಕಾಶಕ್ಕೆ ಬರತಕ್ಕದ್ದು. ಪಾಚೆಯಹಾಗಿರತಕ್ಕ ಒಂದು ಬಗೇ ಸಸ್ಯವಿನಾ ಮತ್ತೆ ಯಾವ ಗಿಡವೂ ಅಲ್ಲಿ ಬೆಳೆಯುತಿರಲಿಲ್ಲ. ಆದರೆ ಸಮುದ್ರ ತೀರದಲ್ಲಿ ಒಂದು ವಿಧವಾದ ಕುರುಚುಗಿಡ ಬೆಳೆದಿತ್ತು. ಅದರ ಬೇರು ಬಿಲ್ಲಿನಹಾಗೆ ಬಗ್ಗಿ ಕೊಂಡಿತ್ತು. ಅದನ್ನು ಕಿತ್ತುಕೊಂಡು ಬಿಲ್ಲಿನ ಆಕಾರಕ್ಕೆ ಸಮಮಾಡಿ ಕೊಂಡರು. ಜಿಂಕೆಚಕ್ಕಳದ ಬಾರು ಹೆದೆಯಾಯಿತು. ಸಮುದ್ರತೀರ ದಲ್ಲಿ ಬಿದ್ದಿದ್ದ ತುಂಡುಗಳಿಂದ ದೊಣ್ಣೆಗಳನ್ನು ಮಾಡಿಕೊಂಡು ಅದರ ತುದಿಗೆ ಸಾರಗದ ಸಣ್ಣ ಕೊಂಬುಗಳನ್ನು ಬಲಿದರು. ಅದೇ ಈಟಿಯಾ ಯಿತು. ಅಲ್ಲಿ ವಿಸ್ತಾರವಾಗಿ ಸಿಕ್ಕುತಿದ್ದ ಸಾರಗದ ಉದ್ದವಾದ ಕೊಂಬು ಗಳು ಬಾಣಗಳಾದವು. ಹೀಗೆ ಇಬ್ಬರು ಅಂಬು ಬಿಲ್ಲುಗಳನ್ನೂ, ಇನ್ನಿಬ್ಬರು ಈಟಿಯನ್ನೂ ತೆಗೆದುಕೊಂಡರು. ಈ ನಾಲ್ವರೂ ಒಳಪ್ರಾಂ ತಕ್ಕೆ ಹೊರಟು ಸಿಕ್ಕಿದ ಕರಡಿಗಳನ್ನು ಕೊಲ್ಲುತಾ ಬಂದರು. ಈ ಕರಡಿ ಗಳ ಜೊತೆಗೆ, ಬಿಳೀ ನರಿಗಳೂ, ನೀಲವರ್ಣವಾದ ನರಿಗಳೂ ಸಹಾ ಸೇರಿಕೊಂಡು, ಎಷ್ಟು ಕೊಂದರೂ ಅಷ್ಟು ಹೆಚ್ಚಾಗಿ ಬಾಧೆಯನ್ನು ಕೊಡುತಾ ಬಂದವು.

ಆಗ ಮದನನು ಓದುವುದನ್ನು ನಿಲ್ಲಿಸಿ—ಏನು ಭಯಂಕರವಾದ ಬಾಳು, ಪ್ರತಿಕ್ಷಣದಲ್ಲಿಯೂ ಕಾಡುಮೃಗಗಳು ನುಂಗಿಕೊಳ್ಳುವವೆಂಬ ಭೀತಿಯೇ ಭೀತಿ, ಏನು ಹೀನವಾದ ಅದೃಷ್ಟ ! ಎಂದನು.

ಜೋಯಿಸ—ಹಾಗೆ ಕಾಡುಮೃಗಗಳು ನುಂಗಿಕೊಳ್ಳಲಿಲ್ಲವಷ್ಟೆ.

ಮದನ—ಅವುಗಳಿಗೆ ತಕ್ಕ ಆಯುಧಗಳನ್ನು ಹೊಸದಾಗಿ ಮಾಡಿ ಕೊಂಡಕಾರಣ ನುಂಗಿಕೊಳ್ಳಲಿಲ್ಲ.

ಜೋಯಿಸ—ಅಪಾಯ ಸಂಭವಿಸಬಹುದೆಂಬ ಭೀತಿಯಿಂದಲೇ

ಮನುಷ್ಯ ಕಷ್ಟಕ್ಕೆ ಗುರಿಯಾಗುವುದು. ಅಪಾಯ ಬಂದರೆ ತಪ್ಪಿಸಿಕೊಳ್ಳ ಬಹುದು; ತಪ್ಪಿಸಿಕೊಳ್ಳುವುದಕ್ಕೆ ಯೋಗ್ಯತೆ ಇಲ್ಲದಿದ್ದರೆ ಅದೀಗ ಕಷ್ಟ.

ಮದನ—ತಾವು ಹೇಳಿದ್ದು ನನಗೆ ತಿಳಿಯಲಿಲ್ಲ.

ಜೋಯಿಸ—ಹಾಗಾದರೆ ವಿವರಿಸುತ್ತೇನೆ. ನಿನ್ನ ಕಾಲಿಗೆ ಹಾವು ಸುತ್ತಿಕೊಂಡಿದ್ದಾಗ ಅದು ನಿನ್ನನ್ನು ಕಡಿಯುವುದೆಂದು ನೀನು ತಿಳಿದು ಕೊಂಡಿದ್ದೆ. ಆದುದರಿಂದ ಕಷ್ಟತೋರಿತು. ಹವುದೊ, ಅಲ್ಲವೊ?

ಮದನ—ಹವುದು.

ಜೋಯಿಸ—ಆ ನಿರ್ಭಾಗ್ಯದೆಸೆ ಸುಮತಿಗೆ ಇರಲಿಲ್ಲವಷ್ಟೆ.

ಮದನ—ಅದೂ ನಿಶ್ಚಯ, ಸ್ವಾಮಿ.

ಜೋಯಿಸ—ಆದರೂ ಅದು ಕಡಿಯತಕ್ಕ ಸಂಭವ ನಿನಗಿಂತಲೂ ಅವನಿಗೆ ಹೆಚ್ಚಾಗಿತ್ತು. ಯಾಕೆಂದರೆ, ಅದನ್ನು ಅವನು ಹಿಡಿದು ಕೊಂಡ. ಆದರೆ ಧೈರ್ಯವಾಗಿ ಹಿಡಿದುಕೊಂಡು, ಅದನ್ನು ಬೀಸಿ ಆಚೆಗೆ ಎಸೆದರೆ ಅಪಾಯ ಕಡಮೆಯೆಂದು ಅವನು ಬಲ್ಲ. ನಿನಗೂ ಅಂಥಾ ತಿಳಿವಳಿಕೆ ಇದ್ದರೆ, ನಿನಗೂ ಅಷ್ಟು ಭಯ ಉಂಟಾಗುತಿರಲಿಲ್ಲ.

ಮದನ—ನೀವು ಹೇಳುವುದು ನಿಜ, ಜೋಯಿಸರೆ. ಇನ್ನೊಂದು ಸಾರಿ ಅಂಥಾ ಅಪಾಯಕ್ಕೆ ನಾನು ಒಳಗಾದರೆ, ನಾನೂ ಹಾಗೆಯೇ ಧೈರ್ಯವನ್ನು ಅವಲಂಬಿಸುತ್ತೇನೆ.

ಜೋಯಿಸ—ನಿನಗೆ ಮೊದಲು ಆದಹಾಗೆಯೇ ಈಗಲೂ ಸಂಕಟ ಉಂಟಾದರೆ?

ಮದನ—ಒಂದುಕಾಲಕ್ಕೂ ಇಲ್ಲ. ಈಗ ನನಗೆ ಧೈರ್ಯ ಹೆಚ್ಚಾಗಿದೆ.

ಜೋಯಿಸ—ಅಪಾಯ ಉಂಟಾದಾಗ ಹೇಡಿಗಳಿಗಿಂತಲೂ ಧೈರ್ಯ ಶಾಲಿಗಳಿಗೆ ಸಂಕಟ ಕಡಮೆ ಎಂತಲೊ?

ಮದನ—ಹವುದು.

ಜೋಯಿಸ—ಎಂಥಾ ಅಪಾಯ ಸಂಭವಿಸಿದರೂ ಹೀಗೆಯೇ ಸರಿಯಷ್ಟೆ?

ಮದನ—ಹವುದು, ಜೋಯಿಸರೆ. ನಮ್ಮ ಅಪ್ಪಾಜಿಯೂ, ಅಮ್ಮಯ್ಯನೂ ಅಂದಳದಲ್ಲಿ ಕೂತು ಹೋಗುವಾಗ, ಅಂದಳ ಸ್ವಲ್ಪ

ಅಳ್ಳಾಡಿದರೂ, ಅಮ್ಮಯ್ಯ ಭಯದಿಂದ ಕೂಗಿಕೊಳ್ಳುವರು. ನಮ್ಮ ಅಪ್ಪಾಜಿ ಇದನ್ನು ಕಂಡು ನಗುವರು.

ಜೋಯಿಸ— ಆಕೆಗೂ ನಿಮ್ಮ ಅಪ್ಪಾಜಿಯಷ್ಟು ಧೈರ್ಯವಿದ್ದರೆ, ಆಕೆ ನಗುತಲೇ ಇದ್ದರು.

(ಕಥೆ ಮುಂದಕ್ಕೆ ಸಾಗಲಿ.)

ಈ ಮೃಗಗಳ ಬಾಧೆ ಹೆಚ್ಚಾಗುತಾ ಬಂತು. ಸಾರಗ, ಕರೀನರಿ, ಬಿಳೀನರಿ, ಬಿಳೀಕರಡಿ ಇವುಗಳೇ ಮುಖ್ಯವಾದ ಕಾಡುಮೃಗಗಳು. ಇವು ಈ ನಾವಿಕರನ್ನು ಪೀಡಿಸಲು ಬಂದಹಾಗೆಲ್ಲಾ ಉಪಾಯವನ್ನು ಹುಡುಕಿ, ಅವುಗಳನ್ನು ಕೊಲ್ಲುತಿದ್ದರು. ಈ ಉತ್ತರ ಪ್ರಾಂತದಲ್ಲಿ ರಾತ್ರಿಪ್ರಮಾಣ ಹೆಚ್ಚಾಗಿಯೂ ಅಹಃಪ್ರಮಾಣ ಕಡಮೆಯಾಗಿಯೂ ಇರುವುದು. ಇದೂ ಅಲ್ಲದೆ ವರುಷದಲ್ಲಿ ಅನೇಕ ತಿಂಗಳು ಸೂರ್ಯನ ಕಿರಣವೇ ಕಾಣಿಸದೆ ಕತ್ತಲೆ ಕವಿದುಕೊಂಡಿರುವುದು. ಇದರಿಂದ ದೀಪ ಅಗತ್ಯವಾಯಿತು. ಆ ದೀಪಕ್ಕೆ ಎಣ್ಣೆ ಎಲ್ಲಿದೆ? ಬತ್ತಿ ಯಾವುದು? ಹಣತೆಯನ್ನು ಎಲ್ಲಿಂದ ತರಬೇಕು! ಇದಕ್ಕೆ ಯೋಚನೆ ಮಾಡಿ ಒಂದು ಉಪಾಯವನ್ನು ತೆಗೆದರು. ಸಾಗರದ ತಲೆಯ ಮಿದುಳು ಎಣ್ಣೆಯಾಯಿತು. ಅವರಲ್ಲಿದ್ದ ಬಟ್ಟೆಯೇ ಬತ್ತಿಯಾಯಿತು. ಅಲ್ಲಿ ಸಿಕ್ಕುತಿದ್ದ ಮಣ್ಣನ್ನು ತೆಗೆದು ಹಣತೆ ಮಾಡಿದರು. ಅದಕ್ಕೆ ಎಷ್ಟು ಕೊಬ್ಬನ್ನು ಹಾಕಿದರೂ ನಿಲ್ಲದೇ ಸೋರಿಹೋಗುತಿತ್ತು. ಆದಕಾರಣ ಒಂದು ಯುಕ್ತಿಯನ್ನು ಮಾಡಿ ಬೆಂಕಿಯಲ್ಲಿ ಅದನ್ನು ಸುಟ್ಟು ಕೊಬ್ಬು ನಿಲ್ಲುವಹಾಗೆ ಮಾಡಿದರು. ಹತ್ತಿರಿದ್ದ ಚಕ್ಕುಮುಕ್ಕಿಯೇ ಬೆಂಕಿ ಮಾಡುವುದಕ್ಕೆ ಅನುಕೂಲಿಸಿತು. ಹೀಗೆ ಕತ್ತಲೆ ಬಾಧೆಯನ್ನು ಪರಿಹರಿಸಿಕೊಂಡರು. ಚಳಿ ಹೆಚ್ಚಾದಕಾರಣ ಬೆಚ್ಚಗಿರುವ ಹೊದಿಕೆ ಬೇಕಾಯಿತು. ಇದಕ್ಕಾಗಿ ಸಾರಗದ ಚಕ್ಕಳವನ್ನು ತೆಗೆದುಕೊಂಡರು. ಚಕ್ಕಳ ಒರಟಾದ್ದರಿಂದ ಅದನ್ನು ನೀರಿನಲ್ಲಿ ನೆನೆಯಿಸಿ ಕೈಲಿ ತಿಕ್ಕಿದರು. ಸ್ವಲ್ಪ ಮೃದುವಾಯಿತು. ಕೊಬ್ಬನ್ನು ಕಾಸಿ ಅದಕ್ಕೆ ಸವರಿದರು. ಇನ್ನೂ ಮೃದುವಾಯಿತು. ಇದರಲ್ಲಿ ಕವಚ ಮೊದಲಾದ್ದನ್ನು ಮಾಡಿಕೊಂಡರು. ಹೀಗೆ ತಾವು ಸುಖವಾಗಿರುವುದಕ್ಕೆ ಬೇಕಾದ್ದನ್ನೆಲ್ಲಾ ಕಲ್ಪಿಸಿಕೊಂಡರು.

ಈ ರೀತಿಯಾಗಿ ಅನೇಕ ದಿವಸಗಳು ಇವರು ಅಲ್ಲಿ ವಾಸವಾಗಿರಲು, ಮೀನು ಹಿಡಿಯುವುದಕ್ಕಾಗಿ ಕೆಲವು ಜನರು ದೋಣಿಗಳನ್ನು ಹಾಕಿಕೊಂಡು ಸಮುದ್ರದ ಮೇಲೆ ಆ ಕಡೆಗೆ ಬಂದರು. ಸಮುದ್ರದ ದಡದಲ್ಲಿ ಸ್ವಲ್ಪ ಹೊಗೆ ಕಾಣಿಸಲು ಅಲ್ಲಿ ಮನುಷ್ಯರಿರಬೇಕೆಂದು ದೋಣಿಯನ್ನು ಇತ್ತ ತಿರುಗಿಸಿದರು. ಮನುಷ್ಯರ ಮುಖವನ್ನು ಕಂಡೇವೇ ಎಂದು ಹಂಬಲಿಸುತಿದ್ದ ಈ ನಾಲ್ಕುಜನ ನಾವಿಕರೂ ಬಹು ಸಂತೋಷಪಟ್ಟು, ದೋಣೀಜನರನ್ನು ಕರೆದು ತಮ್ಮ ದುರವಸ್ಥೆಯನ್ನು ಅವರಿಗೆ ಹೇಳಿಕೊಂಡರು. ಆ ಜನರು ಕನಿಕರದಿಂದ ಇವರನ್ನು ದೋಣಿಯ ಮೇಲೆ ಕರೆದುಕೊಂಡು ಹೋದರು. ಈ ನಾಲ್ಕು ಜನರೂ ದಿನಕ್ರಮದಲ್ಲಿ ತಮ್ಮ ದೇಶವನ್ನು ಸೇರಿಕೊಂಡರು.

ಈ ಕಥೆ ಮುಗಿಯಿತು. ಈ ಸಮಯಕ್ಕೆ ಸರಿಯಾಗಿ ತಮ್ಮ ತಂದೇಮನೆಗೆ ಹೋಗಿದ್ದ ಸುಮತಿಯು ಅಲ್ಲಿಗೆ ಬಂದನು. ಬರುತಾ ಜೊತೆಯಲ್ಲಿ, ಹಿಂದಕ್ಕೆ ಹದ್ದು ಎತ್ತಿಕೊಂಡು ಹೋಗುತಿದ್ದಾಗ, ಪ್ರಾಣವನ್ನು ಉಳಿಸಿ ಮನೆಗೆ ಕೊಂಡುಹೋಗಿ ತಾನು ಸಾಕುತಿದ್ದ ಗಿಣೀಮರಿಯನ್ನು ತೆಗೆದುಕೊಂಡು ಬಂದನು. ಅದು ಇವನ ಸಂಗಡಲೇ ಹಾರುತಾ ಕುಪ್ಪುತಾ ಬರುವುದು, ತಲೆಯಮೇಲೆ ಹಾರುವುದು, ಭುಜದ ಮೇಲೆ ಕೂರುವುದು, ಇವನ ಕೈಲಿದ್ದ ಹಣ್ಣನ್ನು ಕಿತ್ತು ಕಿತ್ತು ತಿನ್ನುವುದು, ಹೀಗೆ ಮಾಡಿಕೊಂಡುಬಂತು. ಇದನ್ನು ಕಂಡು ಮದನನು ಆಶ್ಚರ್ಯಪಡುತಾ—ಸುಮತಿ, ಈ ಗಿಣಿ ಇಷ್ಟೊಂದು ಸಾಧುವಾಗಿ ಒಗ್ಗಿಕೊಳ್ಳುವುದಕ್ಕೆ ನೀನೇನು ಮಾಡಿದೆ? ಎಂದು ಕೇಳಿದನು. ಸುಮತಿಯು —ನಾನು ಮತ್ತೇನೂ ಮಾಡಲಿಲ್ಲ. ಅದನ್ನು ಮನೆಗೆ ತೆಗೆದುಕೊಂಡು ಹೋಗಿ ಅನ್ನವನ್ನು ಹಾಕಿ ಆಗಾಗ್ಗೆ ಹಣ್ಣುಗಳನ್ನು ತಂದುಕೊಡುತಾ, ಕೈಮೇಲೆ ಕೂರಿಸಿಕೊಂಡು, ಆಡಿಸುತಾ ಲಾಲಿಸಿದೆ. ಅದಕ್ಕಾಗಿ ನನ್ನ ಕಂಡರೆ ವಿಶೇಷ ಸಲಿಗೆಯಾಗಿದೆ, ಎಂದನು.

ಮದನ—ಇದು ಆಶ್ಚರ್ಯವಾಗಿದೆ, ಹಕ್ಕಿಗಳ ಹತ್ತಿರಕ್ಕೆ ಯಾರಾದರೂ ಹೋಗಿ ನಿಂತರೆ, ಅವು ಹಾರಿ ಹೋಗುವವು.

ಜೋಯಿಸ—ಅದಕ್ಕೆ ಕಾರಣವೇನು ಬಲ್ಲೆಯ ?

ಮದನ—ಅವು ಕಾಡ ಹಕ್ಕಿಗಳು.

ಜೋಯಿಸ—ಕಾಡ ಹಕ್ಕಿ ಎಂದರೇನು?

ಮದನ—ಮಂದಿಯನ್ನು ಹತ್ತಿರಕ್ಕೆ ಹೊದ್ದಗೊಡಿಸದೇ ಇರತಕ್ಕವು.

ಜೋಯಿಸ— ಗಿಣಿಯು ಹತ್ತಿರಕ್ಕೆ ಬರಗೊಡಿಸದೇ ಇರುವುದರಿಂದ, ಅದು ಕಾಡಹಕ್ಕಿಯಾಯಿತು ; ಅದು ಕಾಡಹಕ್ಕಿಯಾದ್ದರಿಂದ ಹತ್ತಿರಕ್ಕೆ ಬರಗೊಡಿಸದೇ ಹೋಯಿತು. ಈ ಮಾತಿನಿಂದ ಏನು ತಿಳಿದಹಾಗಾಯಿತು? ಗಿಣಿ ಕಾಡ ಹಕ್ಕಿಯ ಹಾಗೆ ಇದ್ದಾಗ ಮಂದಿಯನ್ನು ಹತ್ತಿರಕ್ಕೆ ಹೊದ್ದಗೊಡಿಸುವುದಿಲ್ಲ. ಆದರೆ ಗಿಣಿ ಕಾಡ ಹಕ್ಕಿಯ ಹಾಗೆ ವರ್ತಿಸುವುದಕ್ಕೆ ಕಾರಣವೇನು ಹೇಳು.

ಮದನ—ಅದೇನೋ ನನಗೆ ತಿಳಿಯದು. ಗಿಣಿಗಳ ಸ್ವಭಾವ ಯಾವಾಗಲೂ ಕಾಡಹಕ್ಕಿಯ ಹಾಗೆಯೇ ಇರತಕ್ಕದ್ದು.

ಜೋಯಿಸ—ಅವುಗಳ ಸ್ವಭಾವ ಹಾಗಿದ್ದರೆ ಈ ಗಿಣಿ ಸುಮತಿಗೆ ಹೇಗೆ ಒಗ್ಗಿತು?

ಮದನ—ಅವನು ಯಾವಾಗಲೂ ಅದನ್ನು ಪ್ರೀತಿಯಿಂದ ಸಾಕುತಾನೆ.

ಜೋಯಿಸ-ಹಾಗಾದರೆ ಪ್ರೀತಿಯಿಂದ ಸಾಕತಕ್ಕವರನ್ನ ಕಂಡರೆ, ಬೆಚ್ಚಿ ದೂರಾ ಓಡಿಹೋಗುವುದು ಪ್ರಾಣಿಗಳಿಗೆ ಸ್ವಭಾವವೊ?

ಮದನ—ಹಾಗೆ ಓಡಿ ಹೋಗುವುದು ಅವುಗಳ ಸ್ವಭಾವವಲ್ಲ.

ಜೋಯಿಸ—ಆದರದಿಂದ ಸಾಕದೇ ಇರುವ ಮನುಷ್ಯನನ್ನು ಕಂಡರೆ ಮೃಗಗಳು ಓಡಿಹೋಗುವವಷ್ಟೆ?

ಮದನ—ಹವುದು.

ಜೋಯಿಸ—ಆದ್ದರಿಂದಲೇ ಅವು ಕಾಡಮೃಗಗಳೆಂದು ನೀನು ಅನ್ನುತೀಯೊ?

ಮದನ—ಹವುದು.

ಜೋಯಿಸ—ತಮ್ಮನ್ನು ಹೊಡೆಯುತಾರೆ ಎಂಬ ಭಯದಿಂದ ಈ ಮೃಗಗಳು ಓಡಿಹೋಗುವವು. ಹುಲಿ, ಕರಡಿ, ಮುಂತಾದವುಗಳನ್ನು

ಕಂಡರೆ ನೀನು ಹಾಗೆ ಓಡಿಹೋಗುತೀಯೆ. ಆದಕಾರಣ ನೀನೂ ಕಾಡ ವೃಗವಾಗಬೇಕಷ್ಟೆ ?

ಮದನ—(ಈ ಮಾತಿಗೆ ನಗುತಾ) ನಾನು ಕಾಡವೃಗವಲ್ಲ ಜೋಯಿಸರೆ.

ಜೋಯಿಸ—ಆದಕಾರಣ ಜಂತುಗಳನ್ನು ಸಾಧುವಾಗಿ ಮಾಡಿಕೊಳ್ಳಬೇಕಾದರೆ ಅವುಗಳಿಗೆ ಹಿಂಸೆಮಾಡದೆ ಪ್ರೇಮದಿಂದ ಆದರಿಸಬೇಕು. ಹಾಗಾದರೆ ನಿನ್ನಲ್ಲಿ ಅವುಗಳಿಗೆ ಭಯವಿಲ್ಲದೆ ಪ್ರೀತಿಯನ್ನು ಇಟ್ಟುಕೊಂಡಿರುವುವು.

ಸುಮತಿ—ತಾವು ಅಪ್ಪಣೆ ಕೊಡಿಸಿದ್ದು ನಿಜ, ಉಪಾಧ್ಯಾಯರೆ. ಒಬ್ಬ ಹುಡುಗನು ದಿನವಹಿ ತನ್ನ ತೋಟಕ್ಕೆ ಹೋಗಿ ಕೆಲಸ ಮಾಡಿಕೊಂಡು ಬರುತಿದ್ದನು. ಆ ತೋಟದಲ್ಲಿ ಒಂದು ಘಟಸರ್ಪವಿತ್ತು. ಈ ಹುಡುಗ ತೋಟದಲ್ಲಿ ಕೂತು ಅನ್ನಾ ತಿನ್ನುವಾಗೆಲ್ಲಾ ಒಂದು ಸಿಳ್ಳು ಹಾಕುತಿದ್ದನು. ಆ ಹೊತ್ತಿಗೆ ಸರಿಯಾಗಿ ಆ ಹಾವು ಇವನ ಮುಂದೆ ಬಂದು ಕೂತುಕೊಳ್ಳುತಿತ್ತು. ಹುಡುಗನು ಅದಕ್ಕೂ ಸ್ವಲ್ಪ ಆಹಾರವನ್ನು ಹಾಕುತಿದ್ದನು. ಸರ್ಪವು ಅದನ್ನು ತಿಂದು ಹೊಟ್ಟೇ ತುಂಬಿಸಿಕೊಂಡು ಸ್ವಲ್ಪ ಹೊತ್ತು ಆಡಿ, ತನ್ನ ಹುತ್ತಕ್ಕೆ ಹೊರಟು ಹೋಗುತಿತ್ತು. ಹೀಗೆ ಹಾವು ಸಹಿತ ಒಗ್ಗಿಕೊಂಡಿತು. ಅವನ ಕೈಯಿಂದಲೇ ಆಹಾರವನ್ನು ಇಸಕೊಂಡು ತಿಂದು ಹೊರಟು ಹೋಗುತಿತ್ತು.

ಮದನ—ಹಾವು ಅವನನ್ನು ಕಚ್ಚುತಿರಲಿಲ್ಲವೆ ?

ಸುಮತಿ—ಇಲ್ಲ. ಹುಡುಗನು ಅದಕ್ಕೆ ಒಂದೆರಡು ಏಟ ಹೊಡೆದರೂ ಅವನ ಗೋಜಿಗೆ ಹೋಗುತಿರಲಿಲ್ಲ.

ಈ ಮಾತನ್ನು ಕೇಳಿ ಮದನನಿಗೆ ಬಹಳ ಸಂತೋಷವಾಯಿತು. ಸಹಜವಾಗಿ ಒಳ್ಳೇ ಹುಡುಗನಾದಕಾರಣ, ಯಾವುದಾದರೂ ಸಿಕ್ಕಿದ ಪ್ರಾಣಿಗಳನ್ನು ಒಗ್ಗಿಸಿಕೊಂಡು, ಅವುಗಳನ್ನು ಸಾಕಬೇಕೆಂದು ಇವನಿಗೆ ಆಶೆಹುಟ್ಟಿತು. ತನ್ನ ಅಂಗೀ ಜೇಬಿನಲ್ಲಿ ಸ್ವಲ್ಪ ಮಿಠಾಯಿಯನ್ನು ಹಾಕಿಕೊಂಡು ಬೀದಿಗೆ ಹೊರಟನು. ದೂರದಲ್ಲಿ ಒಂದು ಹಂದೀಮರಿ ಓಡಾಡುತಿತ್ತು. ಅದನ್ನು ಕಂಡು ಹಂದೀ ಹಂದೀ, ಇಲ್ಲಿ ಬಾ, ಬಾ,

ಎಂದು ಕರೆದು ಅದಕ್ಕೆ ತಿಂಡಿಯನ್ನು ಹಾಕಿದನು. ಅದು ಬರದೇ ಓಡಿ ಹೋಗುತಿತ್ತು. ಸಿಡುಕನಾದ ಈ ಮದನನು ಕೋಪದಿಂದ—ಛೀ ಕೆಟ್ಟ ಹಂದಿಯೇ! ನಾನು ತಿಂಡೀ ಕೊಡುವುದಕ್ಕೆ ಹೋದರೆ ಓಡಿ ಹೋಗುತೀಯ? ನಿನಗೆ ಬುದ್ಧಿಕಲಿಸುತೇನೆ, ಎಂದು ಓಡಿ ಹೋಗಿ ಅದರ ಹಿಂಗಾಲನ್ನು ಹಿಡಿದುಕೊಂಡು ಎಳೆತರುತಿದ್ದನು. ಅದು ಅರಚಿ ಕೊಂಡಿತು. ಅದರ ಅರಚಲು ಅದರ ತಾಯಿಗೆ ಕೇಳಿಸಿತು. ತಾಯಿ ಹಂದಿಯು ಇತರ ಮರಿಹಂದಿಗಳೊಡನೆ ಸರ್ರನೆ ಮದನ ಇದ್ದ ಕಡೆಗೆ ಓಡಿ ಬಂತು. ಇವನು ಹೆದರಿಕೊಂಡು ತನ್ನ ಕೈಲಿದ್ದ ಮರಿಯನ್ನು ಬಿಟ್ಟು ಬಿಟ್ಟನು. ಅದು ಗಾಬರಿಯಲ್ಲಿ ಓಡಿ ಹೋಗುವಾಗ, ಇವನ ಎರಡು ಕಾಲು ಸಂದಿಯಲ್ಲಿ ನುಸಿದು ಹೊರಟು ಹೋಯಿತು. ಆ ಜೋರನ್ನು ತಡೆಯಲಾರದೆ ಮದನನು ಕೆಳಕ್ಕೆ ಬಿದ್ದನು. ಆ ಸ್ಥಳ ಇಳಿಜಾರಾಗಿದ್ದಕಾರಣ, ಮೇಲಿನಿಂದಾ ಉರುಳಿಕೊಂಡು ಬಂದು ಕೆಳಗೆ ಹರಿಯುತಿದ್ದ ಬಚ್ಚಲಿಗೆ ಮುಗುಚಿಕೊಂಡನು. ಮೈಯೆಲ್ಲಾ ಕೊಚ್ಚೆ ಯಾಯಿತು. ಈ ಹುಡುಗನಿಗೆ ಮತ್ತೂ ಕೋಪ ಹೆಚ್ಚಿತು. ಆ ಹಂದಿ ಯನ್ನು ತಿರುಗಿ ಎಳೆತರಬೇಕೆಂದು ಹೋಗಿ ಅದನ್ನು ಹಿಡಿದುಕೊಂಡನು. ಅದು ಇವನ ಕೈಗೆ ದಕ್ಕದೇ ಬಹಳ ತೊಂದರೆಮಾಡಿತು. ಈ ಜಗಳದಲ್ಲಿ ಹಂದಿಯು ಹುಡುಗನನ್ನು ಎಳೆದುಕೊಂಡು ಹೋಗಿ, ನಾಲ್ಕು ಮಾರು ದೂರದಲ್ಲಿ ಆಡುತಾ ಇದ್ದ ಕೋಳಿಗಳ ಮಧ್ಯೆ ಬಿತ್ತು. ಕೋಳಿಗಳೆಲ್ಲಾ ಚದರಿ ಹಾರಿಹೋದವು. ಆ ಗುಂಪಿನಲ್ಲಿದ್ದ ಒಂದು ಹುಂಜವು ರೇಗಿ ಕೊಂಡು, ಹರಿಸಿಕೊಂಡು ಬಂದು, ಮದನನ ಕಾಲನ್ನು ಕುಕ್ಕಿತು. ನಿಂತ ಕೋಳಿಗಳೆಲ್ಲಾ ಅದೇ ಪ್ರಕಾರ ಅವನನ್ನು ಕುಕ್ಕಲು ಆರಂಭಿಸಿ ದವು. ಆಗ ಈ ಯಾತನೆಯನ್ನು ತಡೆಯಲಾರದೆ ಭಯದಿಂದ ಅರಚಿ ಕೊಂಡನು. ಈ ಕೂಗು ಮನೇ ಒಳಗಿದ್ದ ರಾಮುಜೋಯಿಸನಿಗೆ ಕೇಳಿ ಸಿತು. ಆತನು ತಟ್ಟನೆ ಓಡಿ ಬಂದು ದೊರೆಮಗನನ್ನು ನೋಡಿದನು. ಕಾಲಿನಿಂದ ತಲೆಯವರೆಗೂ ಆ ರಾಜಪುತ್ರನಿಗೆ ಬಚ್ಚಲ ಕೊಚ್ಚೆಯಲ್ಲಿ ಅಭಿಷೇಕವಾಗಿತ್ತು. ಉಪಾಧ್ಯಾಯನು—ಮಗು, ಹೀಗಾಗುವುದಕ್ಕೆ ಕಾರಣವೇನಪ್ಪಾ, ಎಂದು ಕೇಳಲು, ಮದನನು—ಜೋಯಿಸರೇ,

ತಾವು ಹೇಳಿದಂತೆ ಪ್ರಾಣಿಗಳಿಗೆ ಉಪಕಾರ ಮಾಡಬೇಕೆಂದು ಹೋದ್ದ ರಿಂದ ಹೀಗಾಯಿತು. ಇದಕ್ಕೆ ನೀವೇ ಕಾರಣ, ಎಂದನು. ಆಗ ಉಪಾಧ್ಯಾಯನು—ಅಪ್ಪಾ, ಚಿಂತೆ ಇಲ್ಲ. ನಿನಗೆ ಬಹಳ ಪೆಟ್ಟಾಗ ಲಿಲ್ಲವಲ್ಲ, ಮನೆಗೆ ನಡೆ, ಮೈ ತೊಳೆದುಕೊ, ಎಂದು ಹೇಳಿ ಅವನನ್ನು ಕರೆದುಕೊಂಡು ಹೋದನು.

ಮದನನು ಮೈ ತೊಳೆದುಕೊಂಡು ಬಂದಮೇಲೆ ಜೋಯಿಸನು ಈ ಅಪಾಯವು ಸಂಭವಿಸಿದ ರೀತಿಯನ್ನು ಕೇಳಿ ತಿಳಿದುಕೊಂಡು – ಅಪ್ಪ, ನಿನಗೆ ಬಾಧೆ ಆಯಿತು. ಇದಕ್ಕೆ ನಾನು ಹೇಗೆ ಕಾರಣನೊ ತಿಳಿಯದು. ಹಂದೀ ಕಾಲನ್ನು ಹಿಡಿದು ಎಳೆತರುವಹಾಗೆ ನಾನು ನಿನಗೆ ಹೇಳಿದೆನೆ?

ಮದನ—ಇಲ್ಲ, ಹಾಗೆ ಹೇಳಲಿಲ್ಲ. ಆದರೆ ಪ್ರಾಣಿಗಳಿಗೆ ಆಹಾರ ವನ್ನು ಹಾಕಿದರೆ, ಅವು ನಮಗೆ ಒಗ್ಗಿಕೊಳ್ಳುವವು ಎಂದು ಹೇಳಿದಿರಿ. ಇದಕ್ಕಾಗಿ ಆ ಹಂದಿಗೆ ನಾನು ದೋಸೆಯನ್ನು ಹಾಕೋಣವೆಂದು ಹೋದೆ.

ಜೋಯಿಸ—ಆದರೆ ದಾರಿತಪ್ಪಿ ನೀನು ಆ ಕೆಲಸಕ್ಕೆ ಹೋದ್ದು ನನ್ನ ತಪ್ಪಲ್ಲ. ನೀನು ಅದಕ್ಕೆ ತಿಂಡಿ ಹಾಕುತೀಯೆ ಎಂದು ಅದು ಅರಿಯದು. ಆದ್ದರಿಂದ ನೀನು ಹಿಡಿದುಕೊಳ್ಳಲು ಅರಚಿಕೊಂಡಿತು. ಮರಿಯ ಕೂಗನ್ನು ಕೇಳಿ ತಾಯಿ ಓಡಿಬಂತು. ಇದೆಲ್ಲಾ ನಿನಗೆ ತಿಳಿವಳಿಕೆ ಇಲ್ಲದಕಾರಣ ಉಂಟಾಯಿತು. ಜಂತುಗಳ ಗೋಜಿಗೆ ಹೋಗುವುದಕ್ಕೆ ಮುಂಚೆ ಅವುಗಳ ಸ್ವಭಾವವನ್ನು ತಿಳಿದುಕೊಳ್ಳಬೇಕು. ಇದಲ್ಲದೆ ಇದ್ದರೆ ನೊಣವನ್ನು ಹಿಡಿಯುತೇನೆಂದು ಹೋಗಿ ಕಣಜದ ಕೈಲಿ ಕಡಿಸಿಕೊಂಡ ಹುಡುಗನ ಬಾಳು ನಿನಗೂ ಉಂಟಾಗುವುದು.

ಮದನ—ಉಪಾಧ್ಯಾಯರೆ, ಒಬ್ಬ ಸಣ್ಣ ಹುಡುಗ ಹಾವಿಗೆ ಆಹಾರವನ್ನು ಹಾಕಿ ಒಗ್ಗಿಸಿಕೊಂಡಿದ್ದನೆಂದು ಸುಮತಿ ಆ ದಿನ ಹೇಳ ಲಿಲ್ಲವೆ?

ಜೋಯಿಸ—ಅದಾಗಬಹುದು. ಹೊಟ್ಟೆಗೆ ಇಲ್ಲದ ಬಾಧೆ ಉಂಟಾದಾಗ ಹೊರತು ಯಾವ ಪ್ರಾಣಿಯೂ ಇತರರನ್ನು ತೊಂದರೆ

ಮಾಡುವುದಿಲ್ಲ. ಆದರೆ ಅವುಗಳ ಸ್ವಭಾವವನ್ನು ನಾವು ಅರಿತು ಅವುಗಳ ಗೋಜಿಗೆ ಹೋಗಬೇಕೇ ಅಲ್ಲದೆ ಸುಮ್ಮನೆ ಹೋಗಬಾರದು. ಇದಕ್ಕೆ ಒಂದು ಕಥೆ ಇದೆ.

## ಆನೆ ಮತ್ತು ಚಿಪ್ಪಿಗ

ಒಬ್ಬ ಚಿಪ್ಪಿಗ ಇದ್ದನು. ಅವನು ನಿತ್ಯವೂ ತನ್ನ ಗುಡಿಸಲಿನಲ್ಲಿ ಕೂತುಕೊಂಡು ಹೊಲಿಗೇ ಕೆಲಸವನ್ನು ಮಾಡುತಿದ್ದನು. ಆನೆಯನ್ನು ಪ್ರತಿದಿನವೂ ನೀರ ಕುಡಿಸುವುದಕ್ಕೆ ಇವನ ಮನೇ ಮುಂದೆಯೇ ಕರೆದುಕೊಂಡು ಹೋಗುತಿದ್ದರು. ಈ ಚಿಪ್ಪಿಗನು ತನ್ನ ಮನೇ ಕಿಟಕಿಯೊಳಗಿನಿಂದ ಹಣ್ಣು, ತೆಂಗಿನಕಾಯಿ, ಮೊದಲಾದ ಯಾವುದಾದರೂ ಒಂದು ತಿಂಡಿಯನ್ನು ದಾರಿಯಲ್ಲಿ ಹೋಗುತಿದ್ದ ಒಂದು ದೊಡ್ಡ ಆನೆಗೆ ನಿತ್ಯವೂ ಕೊಡುವ ಪದ್ಧತಿ ಇತ್ತು. ಹೀಗೆ ಆ ಆನೆಯು ಅವನ ಸಂಗಡ ಬಹು ಸಲಿಗೆಯಾಗಿತ್ತು. ಒಂದಾನೊಂದು ದಿನ ಆನೆಯು ಬರುತಾ ಪದ್ಧತೀ ಪ್ರಕಾರಕ್ಕೆ ಚಿಪ್ಪಿಗನ ಮನೇ ಕಿಟಕಿಯೊಳಕ್ಕೆ ಸೊಂಡಿಲನ್ನು ತಿಂಡಿ ಇಸಕೊಳ್ಳಬೇಕೆಂದು ನೀಡಿತು. ಆ ದಿನ ಚಿಪ್ಪಿಗನು ಯಾತಕ್ಕೋ ಸ್ಕರವೊ ಬಹಳ ಕೋಪವಾಗಿದ್ದನು. ಆನೆಯು ಸೊಂಡಿಲನ್ನು ಕಿಟಕಿಯಲ್ಲಿ ಚಾಚಿದ ಕೂಡಲೆ ಚಿಪ್ಪಿಗನು ಸುಮ್ಮನೆ ಇರದೆ ತನ್ನ ಕೈಲಿದ್ದ ಸೂಜಿಯಿಂದ ಆ ಸೊಂಡಿಲನ್ನು ತಿವಿದನು. ಕೂಡಲೇ ಗಜವು ಸೊಂಡಿಲನ್ನು ಎಳೆದುಕೊಂಡು ಕೋಪವನ್ನು ತೋರಿಸದೆ ಹೊರಟುಹೋಯಿತು; ತರುವಾಯ ಕೆರೆಯಲ್ಲಿ ನೀರ ಕುಡಿದು ಬರುತಾ ಸೊಂಡಿಲೊಳಕ್ಕೆ ಐದಾರು ಕೊಡದಮಟ್ಟಿಗೆ ಕೊಚ್ಚೇ ನೀರನ್ನು ತುಂಬಿಕೊಂಡು ಚಿಪ್ಪಿಗನ ಮನೇ ಕಿಟಕೀ ಹತ್ತಿರ ಬಂದು ನೀರೆಲ್ಲವನ್ನೂ ಅವನಮೇಲೆ ಸೊಂಡಿಲಿನಿಂದ ಎರಚಿತು. ಇದರಿಂದ ಚಿಪ್ಪಿಗನ ಮನೆಯೆಲ್ಲಾ ನೀರಾಯಿತು, ಅವನಿಗೂ ಪೂರಾ ಸ್ನಾನವಾಯಿತು. ಇವನು ಮಾಡಿದ ಚೇಷ್ಟೆಗೆ ತಕ್ಕ ಪ್ರಾಯಶ್ಚಿತ್ತವಾಯಿತು.

ಹೀಗೆಂದು ರಾಮುಜೋಯಿಸನು ಕಥೆಯನ್ನು ಹೇಳಿ ಮುಗಿಸಲು, ಮದನನು—ಜೋಯಿಸರೆ, ಜಂತುವಿನ ಶಕ್ತಿಯನ್ನು ನೋಡಿಕೊಂಡು, ಅವನು ಅದಕ್ಕೆ ತಕ್ಕಹಾಗೆ ನಡದುಕೊಳ್ಳಬೇಕಾಗಿತ್ತು.

ಜೋಯಿಸ—ನೀನು ಹೇಳಿದ್ದು ಸರಿ, ನನಗೆ ಇನ್ನೊಂದು ಆನೇ ಕಥೆ ಜ್ಞಾಪಕಕ್ಕೆ ಬರುತ್ತಿದೆ. ಅದು ಇದಕ್ಕಿಂತಲೂ ವಿಚಿತ್ರವಾಗಿದೆ, ಹೇಳುತೇನೆ ಕೇಳು—

## ಆನೆ ಮತ್ತು ಮಗು

ಒಂದಾನೊಂದು ಆನೆಗೆ ಮದ ಹತ್ತಿತು. ಅದು ವಿಪರೀತವಾಗಿ ಆರ್ಭಟಿಸುತಾ ಕಟ್ಟಿಹಾಕಿದ್ದ ಸರಪಣಿಯನ್ನೂ ಮಿಣೀಹಗ್ಗವನ್ನೂ ಕಿತ್ತುಕೊಂಡು ಬಹು ರಭಸದಿಂದ ಹೊರಟಿತು. ಮಾಹುತನ ಹತೋಟಿ ಮೀರಿತು. ಯಾರೂ ಅದನ್ನು ಅಡಗಿಸುವುದಕ್ಕಾಗಲಿಲ್ಲ. ಸಿಕ್ಕಿದ ಮರಗಳನ್ನು ಮುರಿದು ಮನೆಗಳನ್ನು ಉರುಳಿಸಿ, ಸಿಕ್ಕಿದ ಜನ ರನ್ನು ಹಿಡಿದು ಬಡಿದು, ವಿಶೇಷವಾದ ಹಾವಳಿಯನ್ನು ಮಾಡು ತಿದ್ದ ಆ ಆನೆಯ ಹೊಡೆತಕ್ಕೆ ಊರೆಲ್ಲಾ ಭಯದಿಂದ ಗಡಗಡನೆ ನಡುಗಿ ಹೋಯಿತು. ಅದರ ಬಾಧೆಯನ್ನು ತಪ್ಪಿಸಿಕೊಳ್ಳುವು ದಕ್ಕಾಗಿ ಮಾಹುತನ ಹೆಂಡತಿಯು ತನ್ನ ಮಗುವನ್ನು ಕಂಕು ಳಲ್ಲಿ ಎತ್ತಿಕೊಂಡು ಓಡಿ ಹೋಗುತಿದ್ದಳು. ಅವಳನ್ನು ಕಂಡು ಆನೆಯು ಹಿಂದಟ್ಟಿಕೊಂಡು ಬಂತು. ಆ ಹೆಂಗಸು ಕೊನೆಗೆ ನಿಲ್ಲಲಾರದೆ ತನ್ನ ಕಂಕುಳಲ್ಲಿದ್ದ ಮಗುವನ್ನು ಆನೆಯ ಮುಂದೆ ಮಲಗಿಸಿ—ಛಿ! ನೀಚಜಂತುವೆ, ಈ ಮಗುವನ್ನು ತಿಂದುಕೊ, ನನ್ನನ್ನೂ ಕೊಂದು ಹಾಕು. ನಾವು ನಿನಗೆ ತಿಂಡಿಯನ್ನು ಹಾಕಿ ಸಾಕಿದ್ದಕ್ಕೆ ಇದೇ ನೀನು ಮಾಡುವ ಪ್ರತ್ಯುಪಕಾರ. ಇಗೋ ನಿನ್ನ ರೋಷಕ್ಕೆ ನಾವೆಲ್ಲರೂ ಬಲಿಯಾಗುತೇವೆ; ಹೀಗೆಂದು ಎದುರಿಗೆ ಕೂಗಿ ಹೇಳಿದಳು. ಆಗ ಆ ಗಜರಾಜನು ಆ ಮಗುವನ್ನು ಸೊಂಡಿಲಿನಿಂದ ಎತ್ತಿಕೊಂಡು ಮೇಲೆ ಆಡಿಸಿ ತರುವಾಯ ಅದನ್ನು ತನ್ನ ಕತ್ತಿನ ಮೇಲೆ ಕೂರಿಸಿಕೊಂಡು, ಆ ಮಗುವಿಗೆ ಯಾವ ಯಾತನೆಯೂ ಇಲ್ಲದ ಹಾಗೆ ತಾಯಿಯ ಮುಂದೆ ಮಲಗಿಸಿ ಆರ್ಭಟವನ್ನೆಲ್ಲಾ ಬಿಟ್ಟು ಸುಮ್ಮನೆ ನಿಂತು ಕೊಂಡಿತು. ಆಗ ಮಾವುತನ ಹೆಂಡತಿಯು—ಛಿ, ನಡೆ ನಿನ್ನ ಗೊತ್ತಿಗೆ, ಎಂದು ಗದರಿಸಲು, ಕೂಡಲೆ ಗೊತ್ತಿಗೆ ಹೋಗಿ ಸಾದಾಗಿ ನಿಂತುಕೊಂಡಿತು. ಕೂಡಲೆ ಅದನ್ನು ಕಟ್ಟಿಹಾಕಿದರು.

ಹೀಗೆ ಜೋಯಿಸನು ಹೇಳಿ ಮುಗಿಸಿದ ಎರಡು ಕಥೆಗಳನ್ನೂ ಕೇಳಿ ಮದನನಿಗೆ ಬಹುವಾಗಿ ಆನಂದ ಉಂಟಾಯಿತು. ಮುಂದಕ್ಕೆ ಜೀವಜಂತುಗಳ ವಿಷಯದಲ್ಲಿ ವಿವೇಕವಾಗಿದ್ದು ಅವುಗಳನ್ನು ಆದರದಿಂದ ನೋಡಿಕೊಳ್ಳುತ್ತೇನೆಂದು ಮದನ ಹೇಳಿದನು.

---

## ೯ ನೆ ಅಧ್ಯಾಯ

ಮಾರನೇ ದಿನ ಮದನನೂ ಸುಮತಿಯೂ ಇಬ್ಬರೂ ಸೇರಿ ಎಂದಿನಂತೆ ತೋಟಕ್ಕೆ ಬಂದರು. ಅಲ್ಲಿ ತಾನು ಅಗೆದು ಮಡಿಮಾಡಿದ್ದ ಪಾತಿಗೆ ಕೊತ್ತುಂಬರಿಯನ್ನು ಬಿತ್ತಬೇಕೆಂದು ಸುಮತಿಯು ತನ್ನ ಸಂಗಡ ಸ್ವಲ್ಪ ಬೀಜವನ್ನು ತಂದಿದ್ದನು.

ಅವರಿಬ್ಬರೂ ಸೇರಿ ಕೆಲಸ ಮಾಡುತಾ ಇರುವಾಗ್ಗೆ,

ಮದನ—ಸುಮತಿ, ಮಂಜಿನಗಡ್ಡೆಯಿಂದ ತುಂಬಿ, ಛಳಿಯಿಂದ ಪಂಚಪ್ರಾಣವನ್ನೂ ನಡುಗಿಸತಕ್ಕ ಒಂದಾನೊಂದು ದ್ವೀಪದಲ್ಲಿ ೩–೪ ಜನ ನಾವಿಕರು ವರ್ಷಾಂತರ ಇದ್ದರಂತಲ್ಲಾ ; ಈ ಕಥೆಯನ್ನು ನೀನು ಕೇಳಿದ್ದೀಯಾ ? ಆ ದೇಶದಲ್ಲಿ ಮನುಷ್ಯರನ್ನು ಉಂಡೆಯಾಗಿ ನುಂಗಿಕೊಳ್ಳುವ ದೊಡ್ಡ ದೊಡ್ಡ ಕರಡಿ ಹೊರತು ಮತ್ತೆ ಯಾವ ಮೃಗವೂ ಇಲ್ಲವಂತೆ.

ಸುಮತಿ—ನಾನು ಕೇಳಿದೇನೆ.

ಮದನ—ಅದನ್ನು ನೆನಸಿಕೊಂಡರೆ ನಿನಗೆ ಅತ್ಯಂತ ಭಯವುಂಟಾಗುವದಿಲ್ಲವೆ ?

ಸುಮತಿ—ನನಗೇನೂ ಭಯವಾಗುವುದಿಲ್ಲ.

ಮದನ—ಅಂಥಾ ಹಾಳು ದೇಶದಲ್ಲಿ ಇರಬೇಕೆಂದು ಯಾಕೆ ಅಪೇಕ್ಷಿಸುತೀಯೆ ?

ಸುಮತಿ—ಅಂಥಾ ದೇಶದಲ್ಲಿ ಇರಬೇಕೆಂಬ ಅಪೇಕ್ಷೆ ನನಗಿಲ್ಲ.

ಆದರೆ ಹಾಗೆ ಸಂಭವಿಸಿದರೆ, ಅದು ನಮ್ಮ ಹಣೆಯಲ್ಲಿ ಬರೆದದ್ದೆಂದು ತಿಳಿದು ಅನುಭವಿಸಿಯೇ ತೀರಬೇಕು.

ಮದನ—ಅದೇನೋ ನಿಶ್ಚಯ. ಆದರೆ ಯಾರೂ ಇಲ್ಲದ ಅಂಥಾ ದೇಶದಲ್ಲಿ ನಿನ್ನನ್ನು ಕರೆದುಕೊಂಡು ಹೋಗಿಬಿಟ್ಟರೆ ನಿನಗೆ ದುಃಖ ಬರುವುದೋ ಇಲ್ಲವೋ ಹೇಳು.

ಸುಮತಿ—ಮನಸ್ಸಿಗೇನೋ ಸಂಕಟವಾಗುತ್ತೆ ನಿಜ. ಅಂಥಾ ಕ್ರೂರಮೃಗಗಳ ಬಾಧೆಯನ್ನು ತಪ್ಪಿಸಿಕೊಳ್ಳಲು, ನಾನು ಚಿಕ್ಕ ಹುಡುಗ ನಾದ ಕಾರಣ ಶಕ್ತಿ ಸಾಲದೇ ಪೇಚಾಟವಾಗುವುದು ಖಂಡಿತ. ಆದರೆ ಅತ್ತರೆ ಪ್ರಯೋಜನವೇನು? ಅದಕ್ಕಿಂತಲೂ ತಕ್ಕ ಉಪಾಯವನ್ನು ಹುಡುಕಿ, ಬಂದ ಸಂಕಟವನ್ನು ಹೋಗಲಾಡಿಸಿಕೊಳ್ಳಲು ಯತ್ನಿಸ ಬೇಕು.

ಮದನ—ನೀನು ಏನು ಉಪಾಯವನ್ನು ಮಾಡಬಲ್ಲೆ ?

ಸುಮತಿ—ಸಿಕ್ಕಿದ ಸಾಮಾನುಗಳಿಂದ ಮನೆಯನ್ನು ಕಟ್ಟುತಿದ್ದೆ.

ಮದನ—ಮನೆಯನ್ನು ಕಟ್ಟುವುದಕ್ಕೆ ಯಾವ ಯಾವ ಸಮಾನು ಬೇಕು? ಮರಗೆಲಸದವರು, ಕಾಮಾಟದವರು ಮೊದಲಾಗಿ ಅನೇಕ ಕೆಲಸದವರು ಬೇಕಾಗುವುದು. ಇದಕ್ಕೇನು ಮಾಡುತೀಯೆ?

ಸುಮತಿ—ಮನೆ ಎಂದರೆ ವಿಧ ವಿಧವಾದ ಮನೆಗಳಿವೆ, ಬಡವರ ಮನೆಗಳು ನಿಮ್ಮ ಅರಮನೆಯ ಹಾಗೆ ಇರುವವೆ?

ಮದನ—ಹವುದು, ಬಡವರ ಮನೆ ಬಹು ಅಸಹ್ಯವಾಗಿರುವುದು. ಅಂಥವರ ಮನೆಯಲ್ಲಿ ಅರಗಳಿಗೆಯೂ ನಾನು ಇರಲಾರೆ.

ಸುಮತಿ—ಆದರೂ ನೋಡು, ಬಡವರು ದೊಡ್ಡವರ ಹಾಗೆಯೇ ಬಲಶಾಲಿಗಳಾಗಿಯೂ, ಆರೋಗ್ಯವಂತರಾಗಿಯೂ ಇರುತಾರೆ. ನಿನಗೆ ಮನೆ ಇಲ್ಲದೆ ಇದ್ದರೆ, ಬಡವರು ಮಾಡಿಕೊಂಡು ಇರುವಂಥಾ ಗುಡಿಸ ಲಿನಲ್ಲಾದರೂ ವಾಸಮಾಡಿಕೊಂಡು ಇರುತಿದ್ದೆಯೇ ಹೊರತು, ಮೂರು ಹೊತ್ತೂ ಮಳೆಯಲ್ಲಿ ನೆನೆದು ಬಿಸಿಲಿನಲ್ಲಿ ಒಣಗುತಿರಲಿಲ್ಲ.

ಮದನ—ಈ ಮಾತು ನಿಜ, ಆದರೆ ಅಂಥಾ ಮನೆಯನ್ನು ಕಟ್ಟು ವುದು ಹೇಗೆ ?

ಸುಮತಿ—ಹೇಗೆ ಎಂದರೆ, ನನ್ನ ಹತ್ತಿರ ಈಗ ಒಂದು ದೊಡ್ಡ ಮುಚ್ಚುಕತ್ತಿಯೂ ಒಂದು ಗುದ್ದಲಿಯೂ ಇದ್ದರೆ, ತೋರಿಸಿಯೇನು. ಗುದ್ದಲಿಯಲ್ಲಿ ಮಣ್ಣು ಅಗೆದು ನೀರ ಹಾಕಿ ಕಲೆಯಿಸಿ, ಮುದ್ದೇ ಕಟ್ಟಿ ಚಿಕ್ಕದಾಗಿ ಗೋಡೆಯನ್ನು ಹಾಕುವುದು. ಬಲವಾದ ಎರಡು ಕವೆ ಗಳನ್ನು ಕಡಿದು ಎದುರುಬದುರಿಗೆ ನೆಡುವುದು. ಅದರ ಮೇಲೆ ಅಡ್ಡ ಮರಗಳನ್ನು ಹಾಕಿ ಸಣ್ಣ ಕೊಂಬೆಗಳನ್ನು ಕಡಿದು ಮೇಲಿನಿಂದ ಕೆಳಗಿನ ವರೆಗೂ ಎರಡು ಕಡೆಯೂ ಇಳಿಜಾರಾಗಿಯೂ ಸ್ವಲ್ಪ ಒತ್ತಾಗಿಯೂ ಹಾಕುವುದು. ಆಮೇಲೆ ಹುಲ್ಲಿನ ಕಂತೆಗಳನ್ನು ತಂದು ಹಾಗೆ ಕಟ್ಟಿದ ಹಾರಿನ ಮೇಲೆ ಒತ್ತಾಗಿ ಹಾಕುವುದು.

ಮದನ—ಮನೆಯನ್ನು ಕಟ್ಟುವುದು ಇಷ್ಟು ಸುಲಭ ಎಂದು ನನಗೆ ತಿಳಿಯದು. ಇಂಥಾ ಮನೆಗಳಲ್ಲಿ ಜನರು ವಾಸಮಾಡು ತಾರೆಯೆ? ಇದು ಸಾಧ್ಯವೆ?

ಸುಮತಿ—ಸಾಧ್ಯವೇ. ಅನೇಕ ದೇಶಗಳಲ್ಲಿ ಬಡ ಜನರು ಇಂಥಾ ಮನೆಗಳಲ್ಲಿ ವಾಸಮಾಡುತಾರೆಂದು ನಾನು ಕೇಳಿದೇನೆ.

ಮದನ—ಹಾಗಾದರೆ ನಾನೂ ಒಂದು ಮನೆಯನ್ನು ಕಟ್ಟ ಬೇಕೆಂದು ಆಸೆಯಾಗುವುದು.

ಇವರಿಬ್ಬರೂ ಹೀಗೆ ಮಾತನಾಡುತಿರುವಾಗ ಜೋಯಿಸನು ಬಂದು, ಓದುವುದಕ್ಕೆ ಬನ್ನಿ ಎಂದು ಕರೆದು, ಮದನನನ್ನು ಕುರಿತು— ಪ್ರಾಣಿಗಳಿಗೆ ದಯಾರಸವನ್ನು ತೋರಿಸಬೇಕೆಂಬ ವಿಷಯವಾಗಿ ನಾನು ಒಂದು ಒಳ್ಳೇ ಕಥೆಯನ್ನು ಹುಡುಕಿ ಇಟ್ಟಿದೇನೆ, ಅದನ್ನು ಓದು— ಎಂದು ಹೇಳಿದನು.

ಮದನ—ಅಗತ್ಯವಾಗಿ ಓದುತೇನೆ. ಈಚೆಗೆ ನನಗೆ ಓದುವುದು ಚೆನ್ನಾಗಿ ಬಂತು. ಈಗ ನಾನು ಏನನ್ನಾದರೂ ಓದಿಕೊಳ್ಳುತಾ ಆನಂದಪಡಬಲ್ಲೆ.

ಜೋಯಿಸ—ಓದುವುದರಿಂದ ಅನೇಕರು ಆನಂದಪಡಬಲ್ಲರು. ಓದುವುದಕ್ಕೆ ಬಂದಮೇಲೆ ವಿದ್ಯವನ್ನು ಕಲಿಯುವುದು ಭಾರವಾಗಿರು ವುದಿಲ್ಲ. ಓದು ಬಲ್ಲವನು ಗ್ರಂಥಗಳನ್ನು ಓದಿ ಸಂತೋಷ ಪಡದೇ

ಇದ್ದರೆ, ಆ ತಪ್ಪು ಅವನದೇ ಹೊರತು ಬೇರೆ ಅಲ್ಲ. ದೊರೆ ಮಕ್ಕಳು, ದೊರೆ ಮಕ್ಕಳು, ಎಂದು ನೀನು ಆಗಾಗ್ಯೆ ಹೇಳುತೀಯಷ್ಟೆ. ಇಂಥಾ ದೊರೆ ಮಕ್ಕಳು ಓದಿ ಬುದ್ಧಿವಂತರಾಗುವುದಕ್ಕೆ ಅವರಿಗೆ ಉಪಪತ್ತಿ ಬಹಳವಾಗಿದೆ. ಯಾಕೆಂದರೆ, ಅವರು ಹೊಟ್ಟೆಗೋಸ್ಕರ ಕಷ್ಟಪಟ್ಟು ಸಂಪಾದನೆ ಮಾಡಬೇಕಾದ ಪ್ರಕೃತವಿಲ್ಲ. ದೊರೆ ಮಕ್ಕಳು ಆ ಕಾಲ ವನ್ನೆಲ್ಲಾ ಓದುವುದರಲ್ಲಿ ಕಳೆದು ಬುದ್ಧಿವಂತರಾದರೆ, ಲೋಕಕ್ಕೆ ಉಪಕಾರವಾಗುವುದು. ಇದನ್ನು ಬಿಟ್ಟು ಬೇಕು ಬೇಕಾದ ಬಟ್ಟೆಯನ್ನು ಧರಿಸಿ ಬೇಕಾದ ಒಡವೆಯನ್ನು ಇಟ್ಟು ದೊರೆ ಮಕ್ಕಳು ಮೆರೆಯುವುದ ರಿಂದ ಯಾರಿಗೆ ಯಾವ ಉಪಕಾರವಾದಹಾಗೆ ಆಯಿತು? ಇಂಥಾ ಡಂಭವನ್ನು ಮಾಡುವುದಕ್ಕೆ ದೊರೆ ಮಕ್ಕಳೇ ಆಗಬೇಕೆ? ಹಣಗಾರರೆ ಲ್ಲರೂ ಈ ಮೆರತವನ್ನು ಮೆರೆಯಬಹದು. ಇದು ಹಾಗಿರಲಿ, ಕಥೆಯನ್ನು ಓದು ಎಂದನು. ಆಗ ಮದನನು ಕಥೆಯನ್ನು ಓದಿದನು—

## ಒಳ್ಳೇ ಹುಡುಗನ ಕಥೆ

ಒಂದು ಹಳ್ಳಿಯಲ್ಲಿ ಒಬ್ಬ ಹುಡುಗನಿದ್ದನು. ನೆರೇ ಊರಿನಲ್ಲಿ ರುವ ತನ್ನ ಚಿಕ್ಕಮ್ಮನನ್ನು ನೋಡಬೇಕೆಂದು ಇವ ಹೊರಟನು. ಇವನ ತಾಯಿ ಮಗನಿಗೆ ಬುತ್ತಿಯನ್ನು ಕಟ್ಟಿಕೊಟ್ಟಳು. ಅದನ್ನು ತೆಗೆದು ಕೊಂಡು, ಈ ಹುಡುಗನು ದಾರಿಯಲ್ಲಿ ಹೋಗುತಿರುವಾಗ ಹೊಟ್ಟೆಗಿ ಲ್ಲದೆ ಒಣಗಿಕೊಂಡಿದ್ದ ಒಂದು ನಾಯಿಯು ಬಾಲವನ್ನು ಅಳ್ಳಾಡಿಸುತಾ ಇವನ ಮುಂದೆ ಬಂತು. ಈ ಹುಡುಗನು ಅದನ್ನು ನೋಡಿ, ಕನಿಕರ ದಿಂದ ತನ್ನ ಬುತ್ತಿಯಲ್ಲಿದ್ದ ಅನ್ನವನ್ನು ಸ್ವಲ್ಪ ತೆಗೆದು ಅದಕ್ಕೆ ಹಾಕಿ ದನು. ಆ ನಾಯಿಯು ಅನ್ನವನ್ನು ತಿಂದು ಸಂತೋಷದಿಂದ ಇವನ ಹಿಂದೆಯೇ ಹೊರಟಿತು.

ಮುಂದಕ್ಕೆ ಹೋಗಲು ಒಂದು ಕುದುರೆಗೆ ಕಾಲು ಉಳುಕಿ ಹುಲ್ಲು ನೀರು ಇಲ್ಲದೆ ಅದು ಬಿದ್ದಿತ್ತು. ಈ ಬಾಲಕನು ಅದನ್ನು ಕಂಡು, ಅದರ ಮೈ ತಡವರಿಸಿ, ಕಾಲನ್ನು ನೀವಿ, ಕುದುರೆಯನ್ನು ಮೇಲಕ್ಕೆ ಎಬ್ಬಿಸಿ ನಿಲ್ಲಿಸಿ, ಸ್ವಲ್ಪ ಹುಲ್ಲನ್ನು ತಂದು ಹಾಕಿ, ನೀರನ್ನು ಕುಡಿಸಿದನು.

ಕುದುರೆಯು ಚೇತರಿಸಿಕೊಂಡು ಮೆಲ್ಲನೆ ಮುಂದಕ್ಕೆ ಹೊರಟಿತು. ಆಗ ಈ ಹುಡುಗನು—ಹೊತ್ತು ಬಹಳವಾಯಿತು. ದಾರಿ ಸಾಗಲಿಲ್ಲ, ಸುತ್ತುಮುತ್ತ ಕಳ್ಳರ ಕಾಟವೆಂದು ಹೇಳುತಾರೆ. ಆದರೂ ಚಿಂತೆ ಇಲ್ಲ, ಸಂಕಟಪಡುತಿದ್ದ ಪ್ರಾಣಿಮಾತ್ರಕ್ಕೆ ನಾವು ಉಪಕಾರವನ್ನು ಮಾಡಿದರೆ ನಮಗೆ ಪುಣ್ಯ ಉಂಟು. ನಮಗೆ ಬಂದ ಕಷ್ಟವನ್ನೆಲ್ಲಾ ದೇವರು ಪರಿಹರಿಸುತಾನೆ, ಎಂದುಕೊಂಡನು.

ಆಮೇಲೆ ಮುಂದಕ್ಕೆ ಹೋಗಲು, ಅಲ್ಲಿ ಒಬ್ಬ ತುರುಕನು ಒಂದು ಕೆರೆಯೊಳಗೆ ಎದೆಯುದ್ದ ನೀರಿನಲ್ಲಿ ಹೋಗುತಿದ್ದನು. ಈ ಒಳ್ಳೇ ಹುಡುಗನು ಅವನನ್ನು ಕಂಡು—ಅಪ್ಪಾ, ನೀನು ಯಾರು? ನಡುನೀರಿನಲ್ಲಿ ಯಾಕೆ ಹಾಗೆ ಹೋಗುತೀಯೇ? ಎಂದು ಕೂಗಿದನು. ಆ ಕುರುಡನು—ಅಯ್ಯಾ, ನನಗೆ ಎರಡು ಕಣ್ಣೂ ಕಾಣುವುದಿಲ್ಲ. ದಾರಿತಪ್ಪಿ ಈ ಕಡೆಗೆ ಬಂದು ನೀರಿನೊಳಕ್ಕೆ ಬಿದ್ದೆ. ನನಗೆ ದಾರೀ ತೋರಿಸಯ್ಯ ಎಂದನು. ಈ ಬಾಲಕನು ದಯಾರಸದಿಂದ ನೀರಿನ ತಡಿಗೆ ಹೋಗಿ ಅಲ್ಲಿ ಬಿದ್ದಿದ್ದ ಉದ್ದವಾದ ಜಳವೆಯನ್ನು ತೆಗೆದುಕೊಂಡು, ಅದರ ಮೂಲಕ ಕುರುಡನು ನೀರಿನ ತಡಿಗೆ ಬರುವಂತೆ ಮಾಡಿ, ಅವನನ್ನು ದಾರಿಗೆ ಕರೆತಂದುಬಿಟ್ಟನು. ಈ ಉಪಕಾರಕ್ಕಾಗಿ ಕುರುಡನು ಹುಡುಗನನ್ನು ಕೊಂಡಾಡಿ, ಹರಸಿ ಮುಂದಕ್ಕೆ ನಡೆದನು.

ತರುವಾಯ ಈ ಹುಡುಗನ ದಾರಿ ಸ್ವಲ್ಪ ಸಾಗಿತು. ಅಷ್ಟರಲ್ಲಿಯೇ ಅಲ್ಲಿ ಒಬ್ಬ ಕುಂಟ ಕೂತುಕೊಂಡು,—ಅಪ್ಪಾ ಧರ್ಮಾತ್ಮರೆ, ನಾನು ಎರಡು ಕಾಲೂ ಇಲ್ಲದ ಹೆಳವ, ನನಗೆ ಏನಾದರೂ ಕೊಟ್ಟು ಪುಣ್ಯವನ್ನು ಕಟ್ಟಿಕೊಳ್ಳಿ, ಎಂದನು. ಈ ಬಾಲಕನು ಅದನ್ನು ಕಂಡು, ತನ್ನ ಹತ್ತಿರ ಇದ್ದ ಬುತ್ತಿಯ ಅನ್ನವನ್ನೆಲ್ಲಾ ಅವನಿಗೆ ಇಕ್ಕಿ, ತಾನು ಹಸಿದುಕೊಂಡು ಮುಂದಕ್ಕೆ ಹೊರಟನು.

ಆಗ ಅರ್ಧದಾರಿಕೂಡ ಸಾಗಿರಲಿಲ್ಲ. ಸಾಯಂಕಾಲವಾಯಿತು. ಮೋಡ ಕವಿದುಕೊಂಡಿತು, ಮಳೆ ಹುಯ್ಯುವುದಕ್ಕೆ ಮೊದಲಾಯಿತು, ಇವನ ಕಾಲಿಗೆ ಮುಳ್ಳು ಬಲಿದುಕೊಂಡು ತುಂಬಾ ಯಾತನೆಯಾಯಿತು. ಒಂದು ಹೆಜ್ಜೆಯನ್ನೂ ಆಚೆಗೆ ಇಡಲಾರದೆ ಹುಡುಗನು, ಒಂದು ಕಲ್ಲಿನ

ಹತ್ತಿರ ಕೂತುಕೊಂಡು, ಅಳುವುದಕ್ಕೆ ಮೊದಲುಮಾಡಿದನು. ಆಗ ಇವನ ಸಂಗಡಲೆ ಹೋಗುತಿದ್ದ ನಾಯಿಯು ಎಲ್ಲಿಂದಲೋ ಒಂದು ಗಂಟನ್ನು ಕಚ್ಚಿಕೊಂಡು ಬಂದು ಮುಂದೆ ಹಾಕಿತು. ಹುಡುಗನು ಅದನ್ನು ತೆಗೆದುಕೊಂಡು ಬಿಚ್ಚಿನೋಡಲು, ಅದರಲ್ಲಿ ಎರಡು ರೊಟ್ಟಿ ಇತ್ತು. ಇವನು ಆ ರೊಟ್ಟಿಯನ್ನು ತಿಂದು, ಸ್ವಲ್ಪ ಹಾಗೆಯೇ ಕೂತು ಕೊಂಡನು.

ಆಗ ಒಂದು ಕುದುರೆಯು ಇವನ ಸಮೀಪಕ್ಕೆ ಬಂದು ನಿಂತಿತ್ತು. ಇವನಿಗೆ ಕಾಲು ಬಹು ಯಾತನೆಯಾಗಿದ್ದ ಕಾರಣ ಅದರಮೇಲೆ ಹತ್ತಿ ಕೊಂಡು ಹೋದನು. ಅದು ಇವನನ್ನು ದಾರಿಗೆ ಕರೆದುಕೊಂಡು ಹೋಗಿಬಿಟ್ಟಿತು. ಅಷ್ಟುಹೊತ್ತಿಗೆ ಬೆಳದಿಂಗಳು ಬಂತು. ತಾನು ಆ ದಿನ ಬೆಳಗ್ಗೆ ಹುಲ್ಲನ್ನು ಹಾಕಿ, ಕಾಲನ್ನು ನೀವಿ, ಉಪಚರಿಸಿದ್ದ ಕುದು ರೆಯೇ ಅದೆಂದು ತಿಳಿದುಕೊಂಡನು. ಮತ್ತು ಈ ನಾಯಿ ಇಲ್ಲದಿದ್ದರೆ ನಾನು ಹಸಿವಿನಲ್ಲಿ ಸಾಯಬೇಕಾಗುತಿತ್ತು. ಈ ಕುದುರೆ ಇಲ್ಲದಿದ್ದರೆ ರಾತ್ರೆ ಎಲ್ಲಾ ಕಾಡಿನಲ್ಲಿ ನರಳಬೇಕಾಗುತಿತ್ತು. ನಾನು ಮಾಡಿದ ಉಪ ಕಾರವನ್ನು ಸ್ಮರಿಸಿಕೊಂಡು ಈ ಜಂತುಗಳು ನನಗೆ ಪ್ರತಿಯಾಗಿ ಉಪ ಕಾರವನ್ನು ಮಾಡಿದವು. ನಾವು ಒಬ್ಬರಿಗೆ ಒಳ್ಳೇದನ್ನು ಮಾಡಿದರೆ ಅದರ ಫಲ ನಮಗೆ ಎಂದಿಗಾದರೂ ಇದ್ದೇ ಇರುವುದು, ಎಂದುಕೊಂಡನು.

ಇವನಿಗೆ ಇನ್ನೊಂದು ಅಪಾಯ ಕಾದಿತ್ತು. ಮುಂದಕ್ಕೆ ಹೊರ ಡಲು ಇಬ್ಬರು ಕಳ್ಳರು ಹೊಂಚು ಹಾಕಿಕೊಂಡಿದ್ದು ಓಡಿಬಂದು ಇವ ನನ್ನು ಹಿಡಿದುಕೊಂಡು, ಬಟ್ಟೆಯನ್ನು ಕಿತ್ತುಕೊಳ್ಳುವುದಕ್ಕೆ ಮೊದಲು ಮಾಡಿದರು. ಈ ಹುಡುಗನ ಸಂಗಡಲೇ ಬರುತಿದ್ದ ಬಡಕಲ ನಾಯಿಯು ಒಬ್ಬ ಕಳ್ಳನ ಕಾಲನ್ನು ಚೆನ್ನಾಗಿ ಕಚ್ಚಿತು. ಅವನು ಅದನ್ನು ಹರಿಸಿಕೊಂಡು ಓಡಿಹೋದನು. ಇಷ್ಟರಲ್ಲಿಯೇ "ಅಕೊ, ಅಲ್ಲಿದಾರೆ, ಹಿಡಿದುಕೊಳ್ಳಿ ಹಿಡಿದುಕೊಳ್ಳಿ," ಎಂದು ಧ್ವನಿ ಕೇಳಿತು. ಕೂಡಲೆ ಒಬ್ಬ ಮನುಷ್ಯನು ಇನ್ನೊಬ್ಬನ ಹೆಗಲಿನಮೇಲೆ ಕೂತುಕೊಂಡು ಬಂದನು. ಆಕ್ಷಣವೇ ಇನ್ನೊಬ್ಬ ಕಳ್ಳನೂ, ಹುಡುಗನನ್ನು ಬಿಟ್ಟುಬಿಟ್ಟು ಓಡಿಹೋದನು. ಆಗ ಈ ಬಾಲಕನನ್ನು ಕುರಿತು ಹೆಗಲಮೇಲೆ ಕೂತಿದ್ದ

ಮನುಷ್ಯನು—ಅಪ್ಪಾ, ಈ ಕಳ್ಳರು ನಿಮ್ಮನ್ನು ಹಿಡಿದು ಹೊಡೆದು ಎಲ್ಲ ವನ್ನೂ ಕಸಗೊಳ್ಳಬೇಕು, ಎಂದು ಮಾತನಾಡಿಕೊಂಡು ಬಂದರು. ಇದನ್ನು ನಾನು ತಿಳಿದುಕೊಂಡೆ. ಹೆಳವನಾದ್ದರಿಂದ ಈ ಕುರುಡನ ಹೆಗಲಿನ ಮೇಲೆ ಕೂತುಕೊಂಡು, ಅವನಿಗೆ ದಾರಿ ತೋರಿಸಿದೆ. ಅವನು ನನ್ನನ್ನು ಎತ್ತಿಕೊಂಡು ಬಂದ. ನಾವಿಬ್ಬರೂ ನಿನಗೆ ಬಂದ ಅಪಾಯವನ್ನು ತಪ್ಪಿಸಬೇಕೆಂದು ಬಂದೆವು, ಎಂದು ಹೇಳಿದನು. ಆ ಹುಡುಗನು ಇದಕ್ಕೆ ಸಂತೋಷಪಟ್ಟು ಅವರನ್ನು ತನ್ನ ಜೊತೆಯ ಲ್ಲಿಯೇ ಊರಿಗೆ ಕರೆದುಕೊಂಡು ಹೋಗಿ ಉಪಚಾರವನ್ನು ಮಾಡಿ ಕಳುಹಿಸಿದನು.

ಈ ರೀತಿಯಲ್ಲಿ ಕಥೆ ಮುಗಿಯಿತು. ಆಗ ಮದನಕುಮಾರನು—ಜೋಯಿಸರೆ, ಈ ಕಥೆ ನಿಶ್ಚಯವಾಗಿದ್ದರೂ ಇರಬಹುದು. ಈ ಸುಮತಿಯ ಮೇಲೆ ಮೃಗಾದಿಗಳಿಗೆಲ್ಲಾ ಪ್ರೇಮವಿದೆ. ಯಾಕೆಂದರೆ ಇವನು ಅವುಗಳನ್ನು ಬಹು ಆದರದಿಂದ ಕಾಣುತಾನೆ; ದೊಡ್ಡ ನಾಯಿ ಯನ್ನು ನೋಡುವುದಕ್ಕೆ ನನಗೆ ಭಯವಾಗುವುದು. ಆದರೆ ನಾಯಿಯು ಬಾಲವನ್ನು ಅಳ್ಳಾಡಿಸಿಕೊಳ್ಳುತಾ ಸುಮತಿಯ ಹಿಂದೆ ಸುತ್ತುವುದು.

ಜೋಯಿಸ—ನೀನೂ ಅದನ್ನು ಆದರಿಸಿದರೆ, ಆ ನಾಯಿಯು ನಿನ್ನ ಕಂಡರೂ ಹಾಗೆಯೇ ಇರುವುದು. ಇದು ಹಾಗಿರಲಿ. ಒಳ್ಳೇ ಹುಡುಗನ ಕಥೆಯನ್ನು ನೀನು ಓದಿದೆ. ಇದಕ್ಕೆ ಪ್ರತಿಯಾಗಿರುವ ಗುಣವುಳ್ಳ ಮತ್ತೊಬ್ಬ ಹುಡುಗನ ಕಥೆಯನ್ನು ಸುಮತಿ ಓದುತಾನೆ ಕೇಳು, ಎಂದನು. ಆಮೇಲೆ ಸುಮತಿಯು ಓದಲಾರಂಭಿಸಿದನು.

## ಕೆಟ್ಟ ಹುಡುಗನ ಕಥೆ

ಒಂದು ಊರಿನಲ್ಲಿ ಕೋಪಿಷ್ಠನಾಗಿ ಪಿಸುಣನಾದ ಒಬ್ಬ ಮನುಷ್ಯ ನಿದ್ದನು. ಇವನಿಗೆ ತುಂಟನಾದ ಒಬ್ಬ ಮಗ ಉಂಟು. ತಂದೆಯು ಮಗನಿಗೆ ವಿದ್ಯಾಬುದ್ಧಿಯನ್ನು ಕಲಿಸದೆ, ಪೋಲಿಯಾಗಿ ಬಿಟ್ಟಿದ್ದನು. ಈ ಹುಡುಗನು ಕಂಡವರನ್ನು ಬಯ್ಯುವುದೂ, ಸಿಕ್ಕಿದವರನ್ನು ಹೊಡೆ ಯುವುದೂ, ಎಲ್ಲರ ಮನೆಯ ಮೇಲೂ ಕಲ್ಲ ಎಸೆಯುವುದೂ, ಇವೇ ಮೊದಲಾದ ಅನೇಕ ತುಂಟತನಗಳನ್ನು ಮಾಡುತಿದ್ದನು.

ಈ ಹುಡುಗನು ಮಗ್ಗುಲ ಗ್ರಾಮದಲ್ಲಿ ಆಗುತಿದ್ದ ಮಾರೀಜಾತ್ರೆಯನ್ನು ನೋಡಬೇಕೆಂದು, ಒಂದು ದಿನ ಬೆಳಗ್ಗೆ ಎದ್ದು ಹೊರಟನು. ಇವನ ಸ್ವಭಾವಕ್ಕೆ ಸರಿಯಾದ ಒಂದು ಕೆಟ್ಟ ನಾಯಿಯೂ ಇವನ ಸಂಗಡಲೇ ಹೊರಟಿತು. ಊರ ಬಾಗಿಲಿನ ಹತ್ತಿರ ಒಬ್ಬ ಚಿಕ್ಕ ಹುಡುಗನು ನಾಲ್ವತ್ತು ಐವತ್ತು ಕುರಿಗಳನ್ನು ಅಟ್ಟಿಕೊಂಡು ಹೋಗುತಾ ಈ ತುಂಟನನ್ನು ನೋಡಿ,—ಎಲಣ್ಣಾ, ನಿನ್ನ ನಾಯಿಯನ್ನು ಸ್ವಲ್ಪದೂರದಲ್ಲಿ ನಿಲ್ಲಿಸಿಕೊ. ಇಲ್ಲದಿದ್ದರೆ, ಅದಕ್ಕೆ ನಮ್ಮ ಕುರಿಗಳೆಲ್ಲಾ ಹೆದರಿಕೊಂಡು, ದಿಕ್ಕುದಿಕ್ಕಿಗೆ ಓಡಿಹೋಗುವವು, ಎಂದು ಕೇಳಿಕೊಂಡನು. ಆ ಮಾತನ್ನು ಕೇಳಿದ ತಕ್ಷಣವೇ, ಆ ಕೆಟ್ಟ ಹುಡುಗನು ತನ್ನ ನಾಯಿಯನ್ನು ಕರೆದು—ಛೈರೂ, ಛೂ, ಎಂದು ಅದನ್ನು ಕುರೀಹಿಂಡಿನ ಮೇಲೆ ಛೂಬಿಟ್ಟನು. ಅದು ಬಗುಳುವುದಕ್ಕೆ ಮೊದಲು ಮಾಡಿತು. ಕುರಿಗಳೆಲ್ಲಾ ಕೈಗೆ ಸಿಕ್ಕದಹಾಗೆ ದಿಕ್ಕಾಪಾಲಾದವು. ಆಗ ಕುರೀಕಾಯುವ ಹುಡುಗನು ಇವ ಮಾಡಿದ ಕೆಲಸಕ್ಕೆ ಅಳುತಾ ಮನೆಗೆ ಹೊರಟುಹೋದನು. ಆ ಹಿಂಡಿನಲ್ಲಿದ್ದ ಬಲವಾದ ಒಂದು ಟಗರು ನಾಯಿಯಮೇಲೆ ತಿರುಗಿ ಬಿತ್ತು; ತನ್ನ ತಲೆಯಿಂದ ನಾಯಿಗೆ ಬಲವಾದ ಡಿಕ್ಕಿಯನ್ನು ಹೊಡೆಯಿತು. ಟಗರಿಗಿದ್ದ ಉದ್ದವಾದ ಸನ್ನೇಕೊಂಬು ಆ ನಾಯಿಗೆ ಚುಚ್ಚಿಕೊಂಡಿತು. ಶ್ವಾನವು ಅರಚಿಕೊಳ್ಳುತಾ ಓಡಿಹೋಯಿತು. ಅದಕ್ಕೆ ಪೂರಾ ಪೆಟ್ಟಾಯಿತು. ಇದಕ್ಕೆ ಸ್ವಲ್ಪವೂ ವ್ಯಥೆಪಡದೆ, ತುಂಟುಹುಡುಗನು ಮುಂದಕ್ಕೆ ಹೋದನು. ಅಲ್ಲಿ ಒಬ್ಬ ಹುಡುಗಿಯು ಮೊಸರಿನ ಮಡಕೆಯನ್ನು ಇಳುಕಿಕೊಂಡು ಕೂತಿದ್ದಳು. ಅವಳು ಈ ಹುಡುಗನನ್ನು ನೋಡಿ—ಅಪ್ಪಾ, ಈ ತುಂಬಿದ ಗಡಿಗೆಯನ್ನು ನಾನು ಎತ್ತಲಾರೆ. ಮಾರೀಜಾತ್ರೆಯಲ್ಲಿ ನಮ್ಮ ತಂದೆಯು ಜನರಿಗೆ ದೊಡ್ಡ ಪಾನಕಪೂಜೆಯನ್ನು ಮಾಡಿಸುತಾನೆ. ಅನೇಕರಿಗೆ ನೀರಮಜ್ಜಿಗೆಯನ್ನು ಹಾಕಿಸುತಾನೆ. ಈ ಮಡಕೆಯನ್ನು ಎತ್ತಿ ನನ್ನ ತಲೇ ಮೇಲೆ ಹೊರಿಸಯ್ಯಾ, ನಿನಗೆ ಪುಣ್ಯಬರುವುದು, ಎಂದಳು. ಇದಕ್ಕೆ ದುಷ್ಟಹುಡುಗನು ಮೊಸರಿನ ಮಡಕೇ ಬಳಿಗೆ ಹೋಗಿ ನಿಂತು—ಏನೆಲೇ ಹೆಣ್ಣೇ, ನಿಮ್ಮಪ್ಪ ಪಾನಕಪೂಜೇ ಮಾಡಿಸು

ತಾನೊ? ಕಡಲೆಬೇಳೆ, ಹೆಸರಬೇಳೆಯನ್ನು ನನಗೂ ಕೊಡಿಸುತೀಯೋ, ಎಂದು ಹೇಳುತಾ ಮೊಸರಿನ ಗಡಿಗೆಯನ್ನು ಎತ್ತಿ ಆ ಹುಡುಗೀ ತಲೆಯಮೇಲೆ ಸುರಿದುಬಿಟ್ಟನು. ಹುಡುಗಿಯು ಗಟ್ಟಿಯಾಗಿ ಅಳುತಾ ಹೊರಟುಹೋದಳು.

ತಾನು ಮಾಡಿದ ಕೆಲಸ ಇಷ್ಟರವುಟ್ಟಿಗೆ ಸಾಗಿತಲ್ಲಾ, ತನ್ನನ್ನು ಯಾರೂ ಏನನ್ನೂ ಮಾಡಲಿಲ್ಲವಲ್ಲಾ, ಎಂದು ಧೈರ್ಯದಿಂದ ಎದೆಯನ್ನು ಇನ್ನೂ ಕಲ್ಲುಮಾಡಿಕೊಂಡು ಮುಂದಕ್ಕೆ ನಡೆದನು. ಅಲ್ಲಿ ಹತ್ತಿಪ್ಪತ್ತು ಜನ ಹುಡುಗರು ಚೆಂಡಾಡುತಿದ್ದರು. ಅವರ ಜೊತೆಗೆ ಇವನೂ ಸೇರಿ, ಒಂದೆರಡು ಆಟವನ್ನು ಆಡಿ, ಅವರ ಚೆಂಡನ್ನು ಆಳವಾದ ಒಂದು ಬಚ್ಚಲಿಗೆ ಹಾಕಿದನು. ಆ ಹುಡುಗರೆಲ್ಲರೂ ಚೆಂಡನ್ನು ಹುಡುಕಬೇಕೆಂದು ಬಚ್ಚಲತಡಿಯಲ್ಲಿ ಬಂದು ಸಾಲಾಗಿ ನಿಂತುಕೊಂಡು ನೋಡುತಿದ್ದರು. ಈ ನೀಚನು ಅವರಲ್ಲಿ ಒಬ್ಬ ಹುಡುಗನ ಮೇಲೆ ಮತ್ತೊಬ್ಬ ಹುಡುಗನನ್ನು ತಳ್ಳಿದನು. ಅವನು ಇನ್ನೊಬ್ಬನ ಮೇಲೆ ಬಿದ್ದನು. ಹೀಗೆ ಆ ಹುಡುಗರೆಲ್ಲರೂ ಒಬ್ಬರ ಮೇಲೆ ಒಬ್ಬರು ಬಿದ್ದು ಬಚ್ಚಲೊಳಕ್ಕೆ ಉರುಟಿಕೊಂಡರು. ಎಲ್ಲರಿಗೂ ಮೈ ಎಲ್ಲಾ ಕೊಚ್ಚೆಯಾಯಿತು. ಆ ದುರ್ಮಾರ್ಗನು ತಲೆಯನ್ನು ತಪ್ಪಿಸಿಕೊಂಡು ಓಡಿ ಹೋದನು. ಮುಂದೆ ದಾರಿಯಲ್ಲಿ ಒಂದಾನೊಂದು ಕತ್ತೆ ಮೇಯುತಿತ್ತು. ಈ ದುಷ್ಟಶಿರೋಮಣಿಯು ಒಂದು ಮುಳ್ಳುಗಿಡವನ್ನು ಮುರಿದು, ಅದರ ಬಾಲಕ್ಕೆ ಕಟ್ಟಿದನು. ತರುವಾಯ ಛೈರೂ, ಛೂ, ಎಂದು ತನ್ನ ನಾಯಿಯನ್ನು ಛೂಬಿಟ್ಟನು. ಒಕ್ಕಡೆ ಮುಳ್ಳು ಚುಚ್ಚುವುದು, ಒಕ್ಕಡೆ ನಾಯಿ ಬಗುಳುವುದು, ಹೀಗೆ ಎರಡರ ಮಧ್ಯೆ ಸಿಕ್ಕಿಕೊಂಡು ಕತ್ತೆಯು ಬಹು ಸಂಕಟಪಟ್ಟಿತು. ಆ ಗಾಬರಿಯಲ್ಲಿ ಕತ್ತೆಯು ಓಡುತ್ತಾ ನಾಯಿಯ ಮೇಲೆ ಬಲವಾಗಿ ಒದ್ದುಬಿಟ್ಟಿತು. ಆ ಏಟಿನಿಂದ ನಾಯಿಯು ಆ ಗಳಿಗೆಯಲ್ಲಿಯೇ ಸತ್ತು ಒರಗಿತು. ಈ ತುಂಟನು ತನ್ನ ನಾಯಿ ಹೋಯಿತಲ್ಲಾ ಎಂದು ಸ್ವಲ್ಪವಾದರೂ ವ್ಯಸನಪಡದೆ— ಹತ್! ನಿನಗೆ ಹಾಗೇ ಆಗಬೇಕು, ಎಂದು ಶ್ವಾನವನ್ನು ಬೈದು ಮುಂದಕ್ಕೆ ಹೋದನು.

ದಾರಿಯಲ್ಲಿ ಒಬ್ಬ ಕುರುಡ ಸಿಕ್ಕಿ—ಅಯ್ಯಾ, ಅದು ಯಾರು ಧರ್ಮಾತ್ಮರು; ದಾರಿಯನ್ನು ಕಾಣದೆ ಹೋಗುತಿದೇನೆ. ಕಾಲು ಬಹು ನೋಯುತಿದೆ. ನನ್ನನ್ನು ಎಲ್ಲಿಯಾದರೂ ಒಂದು ಕಡೆ ಕೂರಿಸಪ್ಪಾ! ನಿನಗೆ ಪುಣ್ಯಬರುವುದು ಎಂದನು. ಆಗ ಈ ಹುಡುಗನು— ನನ್ನ ಹತ್ತಿರ ಬಂದು ಕೂತುಕೊ, ಎಂದು ಕುರುಡನ ಕೈಯನ್ನು ಹಿಡಿದುಕೊಂಡು ಹೋಗಿ, ಒಂದು ಹಸೀ ಸಗಣಿಯ ಗುಡ್ಡೆಯ ಮೇಲೆ ಇವನನ್ನು ಕೂರಿಸಿ, ಈಗ ನಿನಗೆ ಮೆತ್ತಗೆ ಇದೆಯೋ? ಚೆನ್ನಾಗಿ ಕೂತುಕೊ; ಬಾಯಿ ಬಿಡು, ತಿಂಡಿಯನ್ನು ಹಾಕುತೇನೆ,—ಅಂದನು. ಅದೇ ಪ್ರಕಾರ ಆ ಕಪೋತಿಯು ಬಾಯನ್ನು ಬಿಡಲು, ಈ ನೀಚ ಹುಡುಗನು ಒಂದು ಹಿಡಿ ಮಣ್ಣನ್ನು ತೆಗೆದುಕೊಂಡು ಅವನ ಬಾಯಿಗೆ ತುರುಕಿದನು. ಈ ಸುಳುವನ್ನು ತಿಳಿದು. ಕುರುಡನು ಆ ಹುಡುಗನ ಬೆಟ್ಟುಗಳನ್ನು ಚೆನ್ನಾಗಿ ಕಡಿದುಬಿಟ್ಟನು. ಅವನಿಗೆ ತಕ್ಕ ಶಿಕ್ಷೆ ಯಾಯಿತು.

ಈ ಹುಡುಗನು ಮತ್ತೂ ಮುಂದಕ್ಕೆ ಹೋದನು. ದಾರಿಯಲ್ಲಿ ಒಬ್ಬ ಕುಂಟನು—ಅಪ್ಪಾ ಒಂದು ಕಾಸು ಕೊಡು ಎಂದು ಕೇಳಿದನು. ಈ ದುರ್ಮಾರ್ಗನು ಅವನ ಮುಂದೆ ಒಂದು ಕಾಸನ್ನು ಎಸೆದನು. ಹೆಳವನು ಆ ಕಾಸನ್ನು ತೆಗೆದುಕೊಳ್ಳುವುದಕ್ಕಾಗಿ ಕೋಲನ್ನು ಊರಿ ಕೊಂಡು ಸ್ವಲ್ಪ ಬಗ್ಗಿದ. ಆಗ ಈ ಹುಡುಗನು ಆ ಊರುಗೋಲನ್ನು ತಳ್ಳಿಬಿಟ್ಟನು. ಆಗ ಕುಂಟ ಕೆಳಗೆ ಬಿದ್ದು ಪೆಟ್ಟಾಯಿತು. ಆ ಕುಂಟನ ಹತ್ತಿರ ಇದ್ದ ಮೂರು ದುಡ್ಡನ್ನೂ ಅವನ ಬಟ್ಟೆಯನ್ನೂ ಈ ಕೆಟ್ಟ ಹುಡುಗನು ಕಿತ್ತುಕೊಂಡು ಓಡಿಹೋದನು.

ದಾರಿಯಲ್ಲಿ ಹೋಗುತಾ, ಈ ತುಂಟನು ಒಬ್ಬರ ಮನೇ ಹಿತ್ತಲ ಗೋಡೆಯನ್ನು ಹತ್ತಿ ಅಲ್ಲಿದ್ದ ಸೀಬೀಗಿಡದಿಂದ ಹಣ್ಣನ್ನು ಕೀಳುತಿ ದ್ದನು. ಆ ಮನೇ ಯಜಮಾನನಿಗೆ ಇದು ತಿಳಿಯಿತು. ಅವನು ತನ್ನ ನಾಯಿಯನ್ನು ಇವನ ಮೇಲೆ ಛೂಬಿಟ್ಟ. ಆ ನಾಯಿಯು ಗೋಡೇ ಹತ್ತುತಿದ್ದ ಈ ಕೆಟ್ಟ ಹುಡುಗನ ಕಾಲನ್ನು ಚೆನ್ನಾಗಿ ಕಚ್ಚಿತು. ಅಷ್ಟರಲ್ಲಿಯೇ ಯಜಮಾನನು ಬಂದು ಇವನನ್ನು ಗೋಡೇ ಮೇಲಿನಿಂದ

ಕೆಳಕ್ಕೆ ಎಳೆದುಕೊಂಡು, ಬಾಯಿಗೆ ನೀರ ಕೇಳುವ ಮಟ್ಟಿಗೆ ಹೊಡೆದು, —ಎಲಾ, ಖೂಳ, ನಿನ್ನಿಂದಲ್ಲವೆ ನನ್ನ ಕುರಿಗಳೆಲ್ಲಾ ಈ ದಿನ ಬೆಳಗ್ಗೆ ಓಡಿ ಹೋದ್ದು! ಈಗ ನನ್ನ ಕೈಗೆ ಸಿಕ್ಕಿದ್ದೀಯೆ; ನಿನಗೆ ತಕ್ಕ ಶೀಕ್ಷೆ ಯನ್ನು ಮಾಡಿದೇನೆ, ಎಂದು ಹೇಳಿ ಆಚೆಗೆ ತಳ್ಳಿಬಿಟ್ಟ.

ಈ ಹುಡುಗನು ಪೆಟ್ಟುತಿಂದು ಅಳುತಾ, ಮುಂದಕ್ಕೆ ಇಂಥಾ ಕೆಲಸಕ್ಕೆ ಹೋಗಬಾರದು ಎಂದುಕೊಳ್ಳುತಾ ಸ್ವಲ್ಪ ದೂರ ನಡೆದನು. ಆಮೇಲೆ ನಾಯಿಬಾಲದ ಡೊಂಕಿನಹಾಗಿದ್ದ ಇವನ ಬುದ್ಧಿಯು ಕೆಟ್ಟ ದಾರಿಗೇ ಎಳೆದುಕೊಂಡು ಹೋಯಿತು. ಅಲ್ಲಿ ಒಂದು ಹೊಲದ ಹತ್ತಿರ ಒಂದು ಹಸುವು ಮೇಯುತಿತ್ತು. ಈ ಅವಿವೇಕಿಯು ಹಾರಿ ಅದರ ಬೆನ್ನಿನಮೇಲೆ ಕೂತುಕೊಂಡು ಅದನ್ನು ಹೊಡೆದನು. ಪೂರ್ವ ದಲ್ಲಿ ಇವನಿಂದ ಬಚ್ಚಲಿಗೆ ನೂಕಿಸಿಕೊಂಡು, ಹೊಡಬಾಳ ಪಟ್ಟ ಹುಡುಗರೆಲ್ಲರೂ ಅಲ್ಲಿ ಆಡುತಿದ್ದರು. ಹಸುವಿನಮೇಲೆ ಇವನು ಕೂತಿದ್ದ ದನ್ನು ಅವರು ಕಂಡು, ಇವನಿಗೆ ತಕ್ಕ ಕೆಲಸವನ್ನು ಕೊಡಬೇಕೆಂದು ಶಬಿಕೆಯಿಂದ ಆ ಹಸುವನ್ನು ಚೆನ್ನಾಗಿ ಹೊಡೆದರು. ಅದು ಬಲವಾಗಿ ಓಡಿಹೋಯಿತು. ಅದರ ನಾಗಾಲ ಓಟಕ್ಕೆ ಮೇಲಿದ್ದ ಹಸುವಿನ ಸವಾ ರನು ತಡೆಯಲಾರದೆ ಕೆಳಕ್ಕೆ ಮಗುಚಿಕೊಂಡು ನೀರು ತುಂಬಿದ ಒಂದು ಹಳ್ಳದೊಳಕ್ಕೆ ಬಿದ್ದನು. ಮೈಕೈ ಎಲ್ಲಾ ತರೆದು ಹೋಯಿತು. ರಟ್ಟೆ ಮುರಿಯಿತು. ಈ ಕಷ್ಟಪರಿಹಾರವಾದರೆ, ತಾನು ಎಂದಿಗೂ ಚೇಷ್ಟೆಗೆ ಹೋಗುವುದಿಲ್ಲವೆಂದು ಆ ದುಷ್ಟನು ಅಂದುಕೊಳ್ಳುತಾ, ಗೋಳಾಡುತಿ ದ್ದನು. ಕೊನೆಗೆ ಇವನ ಕೈಯಿಂದ ಗಡಿಗೇ ಮೊಸರನ್ನು ತನ್ನ ತಲೇ ಮೇಲೆ ಸುರಿಸಿಕೊಂಡಿದ್ದ ಹುಡುಗಿಯು—ಇನ್ನು ಮೇಲೆ ಇಂಥಾ ಕೆಟ್ಟ ತನಕ್ಕೆ ಹೋಗಬೇಡವೆಂದು ಬುದ್ಧಿಹೇಳಿ, ಅವನ ಕೈಹಿಡಿದು ಎಬ್ಬಿಸಿ ಮೇಲಕ್ಕೆ ತಂದುಬಿಟ್ಟು ಹೊರಟುಹೋದಳು.

---

# ೧೦ನೆ ಅಧ್ಯಾಯ

ಈ ರೀತಿಯಲ್ಲಿ ಕಥೆಯು ಓದಿ ಮುಗಿಯಿತು. ಆಗ ಮದನು—ಉಪಾಧ್ಯಾಯರೆ, ಈ ಇಬ್ಬರು ಹುಡುಗರ ಗತಿ ಏನಾಯಿತು, ನೋಡಿದಿರ? ಒಬ್ಬ ಹುಡುಗನ ಒಳ್ಳೇತನದಿಂದ ಕಂಡಕಂಡವರೆಲ್ಲರೂ ಅವನಿಗೆ ಉಪಕಾರ ಮಾಡಿದರು. ಇನ್ನೊಬ್ಬ ಹುಡುಗನ ಕೆಟ್ಟತನದಿಂದ ಸಿಕ್ಕಿದವರೆಲ್ಲರೂ ಇವನಿಗೆ ಶತ್ರುಗಳಾದರು. ಕಡೆಗೆ ಇವನಿಂದ ಅಪಕಾರವನ್ನು ಹೊಂದಿದಾಗ್ಯೂ, ಆ ಮೊಸರಿನ ಹುಡುಗಿಯು ಇವನ ಕಷ್ಟಕ್ಕೆ ಆಗಬೇಕಾಯಿತು, ಎಂದು ಹೇಳಿದನು.

ಕೂಡಲೇ ರಾಮುಜೋಯಿಸನು ಹೇಳಿದ್ದೇನೆಂದರೆ—ಅಯ್ಯೋ ಈ ಪ್ರಪಂಚದಲ್ಲಿ ನಾವು ಮತ್ತೊಬ್ಬರಿಗೆ ದಯವನ್ನು ತೋರಿಸಿದರೆ, ಅವರೂ ನಮಗೆ ದಯವನ್ನು ತೋರಿಸುವರು; ನಾವು ಇತರರಿಗೆ ಉಪಕಾರ ಮಾಡಿದರೆ, ಅವರೂ ನಮಗೆ ಪ್ರತ್ಯುಪಕಾರಮಾಡುವರು. ಯಾರಾದರೆ ತಾನೇ ಏನು! ಎಂಥಾ ಹೀನಸ್ಥಿತಿಯಲ್ಲಿದ್ದರೆ ತಾನೇ ಏನು? ಅವರಿಂದ ನಮಗೆ ಯಾವಾಗಲಾದರೂ ಒಂದೊಂದು ಕೆಲಸ ಆಗಲೇಬೇಕು. ಆದ್ದರಿಂದ ಬುದ್ಧಿವಂತರು ಎಲ್ಲರಲ್ಲಿಯೂ ನಡತೆಯನ್ನು ಇಟ್ಟುಕೊಂಡಿರಬೇಕು. ಹಾಗೆ ನಡತೆಯನ್ನು ಇಟ್ಟುಕೊಂಡಿದ್ದರೆ, ನಮಗೆ ಅವರಿಂದ ಉಪಕಾರ ಆಗುವುದು ಎಂತಲೇ ಅಲ್ಲ. ಹಾಗೆ ನಡತೆಪರರಾಗಿರುವುದು ನಮ್ಮ ಕರ್ತವ್ಯವಾಗಿದೆ. ಉದಾರವಾದ ಮನಸ್ಸುಳ್ಳವರು ಎಲ್ಲರಿಗೂ ಉಪಕಾರವನ್ನು ಮಾಡುವುದರಲ್ಲಿ ಸಂತೋಷವನ್ನು ಹೊಂದುತಿರಬೇಕು. ಎಲ್ಲರಲ್ಲಿಯೂ ಸ್ನೇಹವನ್ನು ಬೆಳಸಿಕೊಂಡಿರಬೇಕು. ನಮಗೆ ಈಗಿರುವ ಸ್ಥಿತಿಯಲ್ಲಿ ಇನ್ನೊಂದು ಗಳಿಗೆಗೆ ಏನಾಗುವುದೊ, ಕಂಡವರಿಲ್ಲ. ಅತ್ಯಂತ ಹೀನ ಸ್ಥಿತಿಯಲ್ಲಿ ಇರತಕ್ಕವರು ಸಹಿತವಾಗಿ ನಮಗೆ ಉಪಕಾರವನ್ನು ಮಾಡುವಂಥಾ ದುರ್ದಶೆ ಬಂದರೂ ಬರಬಹುದು. ಇದಕ್ಕಾಗಿ ಒಂದು ಕಥೆ ಇದೆ. ಈಗ ಹೋಗಿ ಓಡಾಡಿಕೊಂಡು ಬನ್ನಿ.

ಹೀಗೆಂದು ಉಪಾಧ್ಯಾಯ ಹೇಳಿದ ಮಾತನ್ನು ಕೇಳಿ ಮದನನು—ಆ ಕಥೆ ಈಗಲೇ ಅಪ್ಪಣೆಯಾಗಲಿ, ಎಂದು ಕೇಳಿದನು.

ಜೋಯಿಸ—ಈಗ ಹೇಳುವುದಿಲ್ಲ. ಅದಕ್ಕೆ ಕಾಲ ಬರುತ್ತೆ ; ಆಗ ಹೇಳಿಯೇನು. ಈಗ ತೋಟಕ್ಕೆ ಹೋಗಿ ಸ್ವಲ್ಪ ಕೆಲಸಮಾಡಬೇಕು.

ಮದನ—ಇನ್ನೊಂದು ಮಾತ ತಮ್ಮನ್ನ ಕೇಳಬೇಕೆಂದು ಇದೇನೆ.

ಜೋಯಿಸ—ನೀನು ಏನ ಕೇಳಿದರೂ ಹೇಳುತೇನೆ ಕೇಳು ; ಆದರೆ ನೀನು ಕೇಳುವ ಮಾತು ಸರಿಯಾಗಿರಬೇಕು.

ಮದನ—ಒಬ್ಬ ಮನುಷ್ಯನಿಗೆ ಎಲ್ಲಾ ಕೆಲಸ ಮಾಡುವುದಕ್ಕೂ ಬಂದಿರಬೇಕು. ಇದನ್ನು ಯೋಚಿಸುತಾ ಇದೇನೆ.

ಜೋಯಿಸ—ಸರಿ. ಮನುಷ್ಯನಿಗೆ ಪ್ರಜ್ಞೆ ಎಷ್ಟು ಹೆಚ್ಚಿದರೆ ಅಷ್ಟು ಒಳ್ಳೇದು.

ಕೆಲವುಕಾಲ ಕಳೆಯಿತು. ಸ್ವಲ್ಪ ದಿವಸದ ಕೆಳಗೆ ಒಂದು ಕಥೆಯನ್ನು ಹೇಳುತೇನೆಂದು ಜೋಯಿಸರು ಹೇಳಿದ್ದರಷ್ಟೆ. ಆ ಕಥೆಯನ್ನು ಹೇಳಬೇಕೆಂದು ಮದನನು ಕೇಳಿಕೊಂಡನು. ಅದು ಏನೆಂದರೆ :—

## ತುರುಕನ ಕೃತಜ್ಞತೆ

ಪೂರ್ವದಲ್ಲಿ ಪಂಜಾಬುದೇಶದ ಹಿಂದೂರಾಜರಿಗೂ ನೆರೆರಾಜ್ಯದ ತುರುಕರಿಗೂ ಆಗಾಗ್ಗೆ ಯುದ್ಧ ನಡೆಯುತಲೇ ಇತ್ತು. ಆಗಾಗ್ಗೆ ಹಿಂದೂಗಳನ್ನು ತುರುಕರೂ, ತುರುಕರನ್ನು ಹಿಂದೂಗಳೂ ಕೈಸೆರೆ ಹಿಡಿದು ಆ ಖೈದಿಗಳನ್ನು ಗುಲಾಮರಹಾಗೆ ಮಾರುತಿದ್ದರು. ಹೀಗೆ ಒಂದಾನೊಂದು ಯುದ್ಧದಲ್ಲಿ ಹಿಂದುಗಳು ಕೆಲವರನ್ನು ಸೆರೆಹಿಡಿದು ಗುಲಾಮರನ್ನಾಗಿ ಮಾರಿದರು. ಅವರಲ್ಲಿ ಸುಲೇಮಾನ್ ಎಂಬ ಒಬ್ಬ ಖೈದಿಯು ಸೇರಿದ್ದನು. ಆ ಖೈದಿಗಳನ್ನೆಲ್ಲಾ ಮಾರಿದಹಾಗೆಯೇ ಈ ಸುಲೇಮಾನನನ್ನು ಮಾರಿದರು. ಅಟಕ್ ಪಟ್ಟಣದ ಒಬ್ಬ ಸಾಹುಕಾರನು ಅವನನ್ನು ಕೊಂಡುಕೊಂಡು ಬೇಕಾದಾಗ ಅವನ ಕೈಯಲ್ಲಿ ಬೇಕಾದ ಕೆಲಸವನ್ನು ಮಾಡಿಸುತಾ, ಉಳಿದ ಕಾಲದಲ್ಲಿ ತನ್ನ ಮನೇಬಾಗಿಲ ಹತ್ತಿರ ಅವನನ್ನು ಬೇಡಿಹಾಕಿ ಕೂರಿಸಿ ಇರುತಾ ಇದ್ದನು. ಆದೇ ಪ್ರಕಾರ ಸುಲೇಮಾನನು ಬಾಗಿಲಲ್ಲಿಯೇ ಕೂತು ಹೋಗಿಬರುವವರನ್ನು ನೋಡಿಕೊಂಡಿದನು.

ಹೀಗಿರುವಲ್ಲಿ ಆ ಅಟಿಕ್ ಪಟ್ಟಣದಲ್ಲಿಯೇ ಇದ್ದ ಒಬ್ಬ ಮುಲ್ತಾನಿ ಸಾಹುಕಾರನಿಗೆ ಒಬ್ಬನೇ ಒಬ್ಬ ಮಗ ಇದ್ದನು. ಮಗನ ಮೇಲೆ ತಂದೆಗೆ ವಿಶೇಷವಾದ ಪ್ರೀತಿ ಇತ್ತು. ಈ ಹುಡುಗನು ನಿತ್ಯವೂ ಮಠಕ್ಕೆ ಹೋಗುವಾಗ, ಸುಲೇಮಾನ ಕೂತಿದ್ದ ಮನೆಯ ಮಾರ್ಗ ವಾಗಿಯೇ ಹೋಗುತಿದ್ದನು. ಆ ದಾರಿಯಲ್ಲಿ ಅಷ್ಟೊಂದು ಜನ ತಿರುಗು ತಿದ್ದಾಗ್ಯೂ, ಒಬ್ಬರಾದರೂ ಒಂದು ದಿನವಾದರೂ ಸುಲೇಮಾನನ ಸಂಗಡ ಒಂದು ಮಾತನ್ನೂ ಆಡುತಿರಲಿಲ್ಲ. ಆದರೆ ಮುಲ್ತಾನೀ ಸಾಹುಕಾರನ ಮಗ ಮಾತ್ರ ಮಠಕ್ಕೆ ಹೋಗುತಾ ಬರುತಾ ದಾರಿಯಲ್ಲಿ ಸುಲೇಮಾನನ ಹತ್ತಿರ ಸ್ವಲ್ಪ ಹೊತ್ತು ನಿಂತುಕೊಂಡು ಅವನ ಸಂಗಡ ನಾಲ್ಕು ಮಾತ ನ್ನಾಡಿ ಹೋಗುತಿದ್ದನು. ಮೇಲೂ ಅನುಕೂಲವಾದಾಗಲ್ಲಾ ತನಗೆ ದೊರೆತ ತಿಂಡಿಯನ್ನು ಆ ಪುಲಾಮನಾದ ಸುಲೇಮಾನನಿಗೆ ತಂದು ಕೊಡುತಿದ್ದನು. ಹೀಗೆ ಇವರಿಬ್ಬರಿಗೂ ಸ್ನೇಹ ಹೆಚ್ಚಿತು. ಹೀಗಿದ್ದಾಗ್ಯೂ ಸುಲೇಮಾನನು ದುಃಖಪಡುತಲೇ ಇರುತಿದ್ದನು. ಮುಲ್ತಾನೀ ಸಾಹು ಕಾರನ ಮಗನ ಸಂಗಡ ಮಾತನಾಡುತಾ ಇದ್ದಾಗ ಕೂಡ ದುಃಖವು ಉಮ್ಮಿ ಉಮ್ಮಿ ಬರುತಿತ್ತು; ಆಗಾಗ್ಗೆ ಕಣ್ಣಿನಲ್ಲಿ ನೀರು ಬರುತಿತ್ತು. ಆದರೂ ಆ ದುಃಖವನ್ನು ನುಂಗುತಾ ಕಣ್ಣಿನಲ್ಲಿ ಬರುತಿದ್ದ ನೀರನ್ನು ಒರಸಿಕೊಳ್ಳುತಾ ಇದ್ದನು. ಸಾಹುಕಾರನಮಗನು-ಯಾಕೆ ಅಳುತೀಯೆ? ನಿನಗೆ ಏನು ಬೇಕು? ನನ್ನ ಸಂಗಡ ಹೇಳು, ನಮ್ಮ ತಂದೆಗೆ ಹೇಳಿ ಅದನ್ನು ಆಗಮಾಡಿಸುತೇನೆ, ಎಂದು ಎಷ್ಟು ಬಗೆಯಲ್ಲಿ ಕೇಳಿದರೂ, ಸುಲೇಮಾನನು ಬಾಯಬಿಡದೆ ಸುಮ್ಮನೆ ಇರುತಿದ್ದನು.

ಹೀಗಿರಲಾಗಿ, ಒಂದು ದಿನ ಆ ಗುಲಾಮನ ಗೋಳನ್ನು ನೋಡಿ ಸಾಹುಕಾರನ ಮಗನಿಗೂ ಬಹಳ ವ್ಯಾಕುಲವಾಯಿತು. ಬಹು ಒಳ್ಳೆಯ ವನಾದ ಸುಲೇಮಾನನಿಗೆ ಏನೋ ಕಷ್ಟಬಂದಿದೆಯಲ್ಲಾ, ಎಂದು ಯೋಚಿಸುತಾ ಈ ಹುಡುಗನು ಒಂದು ದಿನ ಮನೆಗೆ ಹೋಗಿ ಊಟ ವನ್ನು ಮಾಡದೆ ಸುಮ್ಮನೆ ಮಲಗಿಕೊಂಡನು. ಯಾರು ಎಬ್ಬಿಸಿದರೂ ಏಳದೆ ಇರಲು, ಸಾಹುಕಾರನೇ ಬಂದು ಮಗನನ್ನು ಎಬ್ಬಿಸಿ ದುಗುಡ ವೇನೆಂದು ಕೇಳಿದನು. ಆಗ ಬಾಲಕನು—ಜೀಯ, ನಾನು ಮಠಕ್ಕೆ

ಹೋಗುವ ದಾರಿಯಲ್ಲಿ ಒಬ್ಬ ಗುಲಾಮರವನು ಕೂತುಕೊಂಡಿರು ತಾನೆ; ಅವನು ಬಹು ಒಳ್ಳೆಯವನು; ಅವನಿಗೆ, ಏನೋ ಸಂಕಟ ಬಂದಿದೆ, ಯಾವಾಗಲೂ ಅಳುತ್ತಲೇ ಇರುತಾನೆ. ನೀವು ಏನಾದರೂ ಮಾಡಿ ಅವನ ಕಷ್ಟವನ್ನು ಬಿಡಿಸಬೇಕು ಎಂದನು. ಮಗನ ಮೇಲಿನ ವಿಶೇಷವಾದ ಪ್ರೀತಿಯಿಂದ, ಸಾಹುಕಾರನು ಮೊದಲು ಅಲ್ಲಿಗೆ ಹೋಗಿ ವಿಚಾರಿಸಬೇಕೆಂದು, ಮಗನನ್ನೂ ಕರೆದುಕೊಂಡು ಆ ಗುಲಾಮರವನು ಇರುವ ಸ್ಥಳಕ್ಕೆ ಹೋದನು.

ಸಾಹುಕಾರನು ಸುಲೇಮಾನನನ್ನು ಕುರಿತು—ನಿನಗೆ ಏನುಕಷ್ಟ ಬಂದಿದೆ? ಯಾಕೆ ಅಳುತೀಯೆ? ಎಂದು ಎಷ್ಟು ಬಗೆಯಲ್ಲಿ ಕೇಳಿದರೂ ಅವನು ಮಾತನಾಡಲಿಲ್ಲ. ಮತ್ತೆ ಸಾಹುಕಾರನು—ಯಾಕೆ ಮಾತ ನಾಡುವುದಿಲ್ಲ? ಈವರೆಗೂ ನಿನ್ನ ಎದುರಿಗೆ ಸುಮ್ಮನೆ ನಿಂತುಕೊಂಡು ನೋಡಿದೆ. ನೀನು ಬಹು ನಿಧಾನಿ. ಅತ್ಯಂತ ಪ್ರಾಮಾಣಿಕ, ಎಂದು ನಿನ್ನ ಮುಖಭಾವದಿಂದ ತೋರುತ್ತೆ. ನಿನ್ನ ಗುಣವನ್ನು ನನ್ನ ಮಗ ಬಹುವಾಗಿ ಹೇಳಿದ, ಆ ಮಗುವನ್ನು ಕುರಿತು ಶಾನೆ ಆದರದಿಂದ ಮಾತನಾಡತಕ್ಕ ಸುಲೇಮಾನನೆಂಬ ತುರುಕರವನು ನೀನೇ ಏನಪ್ಪ? ಎಂದು ಕೇಳಿದನು. ಅದಕ್ಕೆ ಗುಲಾಮರವನು—ಸ್ವಾಮಿ ಹವುದು, ಭಾಗ್ಯಹೀನನಾದ ಆ ಮನುಷ್ಯ ನಾನೇ; ಈಗ ಮೂರು ವರುಷದಿಂದ ಸೆರೆಮನೆಯಲ್ಲಿದೇನೆ. ಈ ಮೂರು ವರುಷದಿಂದಲೂ ನಿಮ್ಮ ಮಗ ಹೊರತು ಮತ್ತೆ ಯಾರೂ, ನೀನು ಇದ್ದೀಯ? ಸತ್ತೆಯ? ಎಂದು ಕೇಳಿದವರಿಲ್ಲ; ಈ ಹಸುಳೆ ಒಬ್ಬ ಮಾತ್ರ ಹಿತಕರವಾದ ನಾಲ್ಕು ಮಾತ ನ್ನಾಡಿ ದಯವಿಟ್ಟು ನನ್ನ ಕ್ಷೇಮಲಾಭವನ್ನು ವಿಚಾರಿಸುತಿದ್ದನು. ಈ ಹಾಳ ನೀಚ ರಾಜ್ಯದಲ್ಲಿ ಆತ ಒಬ್ಬ ಚೆನ್ನಾಗಿದ್ದರೆ ಸಾಕೆಂದು ಕೋರು ತೇನೆ. ಮುಸಲ್ಮಾನರಿಗಾಗಲಿ ಹಿಂದುಗಳಿಗಾಗಲಿ ಒಬ್ಬನೇಯಾಗಿರುವ ಆ ದೇವರು ನಿಮ್ಮ ಮಗನನ್ನು ಸಂರಕ್ಷಿಸಲಿ ಎಂದು ಪ್ರಾರ್ಥಿಸುತೇನೆ, ಹೀಗೆಂದು ಹೇಳಿದನು.

ಈ ಮಾತಿಗೆ ಮುಲ್ತಾನಿ ಸಾಹುಕಾರನು - ಅಯ್ಯ, ನಿನಗೆ ಯಾವಾಗಲೊ ಏನೋ ದುಃಖಪ್ರಾಪ್ತವಾಗಿ ನೀನು ಸದಾ ಅಳುತಲೇ

ಇರುತೀಯೆ, ಎಂದು ನನ್ನ ಪುತ್ರ ಹೇಳುತಾನೆ; ಆ ದುಃಖವೇನು? ಅದಕ್ಕೆ ಕಾರಣವೇನು? ಅದನ್ನು ಹೋಗಲಾಡಿಸುವುದಕ್ಕೆ ನನ್ನಿಂದ ಆಗಬೇಕಾದ ಸಹಾಯವೇನು? ಎಂದು ಕೇಳಿದನು.

ಸುಲೇಮಾರ್—ಸ್ವಾತಂತ್ರ್ಯ ಹೋಗಿ ನಿರ್ಬಂಧದಲ್ಲಿ ನರಳುತಾ ಇರುವ ನಾನು ದುಃಖಪಡುವುದು ಏನು ಆಶ್ಚರ್ಯವೆ?

ಸಾಹುಕಾರ—ನಮ್ಮವರು ಎಷ್ಟು ಜನರನ್ನು ನಿಮ್ಮವರು ಸೆರೆ ಯಲ್ಲಿಟ್ಟುಕೊಂಡಿದಾರೆ, ಅದನ್ನು ಕಾಣೆಯು?

ಸುಲೇಮಾರ್—ನಮ್ಮ ಜನರ ಕೆಟ್ಟತನಕ್ಕೆ ನಾನು ಜವಾಬು ದಾರನಲ್ಲ. ಹಾಗೆಯೇ ನಿಮ್ಮವರ ಕೆಟ್ಟತನಕ್ಕೂ ನೀವು ಜವಾಬು ದಾರರಲ್ಲ. ಆದರೆ ನನ್ನಮಟ್ಟಿಗೆ ಹೇಳಿಕೊಳ್ಳುತೇನೆ; ನಾನು ನಮ್ಮ ದೇಶದಲ್ಲಿ ಯಾರನ್ನೂ ಸೆರೆಯಲ್ಲಿಟ್ಟು ಹಿಂಸೆಮಾಡಿದವನಲ್ಲ. ಪ್ರಾಣಿ ಮಾತ್ರಕ್ಕೆ ಬಾಧೆಮಾಡಲು ನನಗೆ ಅಭಿಪ್ರಾಯವಿಲ್ಲ. ನಾನು ಇದು ವರೆಗೆ ಯಾವ ಹಿಂದೂ ವರ್ತಕನನ್ನೂ ಹಾಳಮಾಡಿ ನನ್ನ ಮನೆ ಯನ್ನು ತುಂಬಿಕೊಂಡವನಲ್ಲ. (ಹೀಗೆ ಮಾತನಾಡುತಿರಲು ಅವನ ಕಣ್ಣಿನಲ್ಲಿ ನೀರು ಸುರಿಯುವುದಕ್ಕೆ ಮೊದಲಾಯಿತು. ಆ ದುಃಖ ವನ್ನು ನುಂಗಿಕೊಂಡು ಸುಲೇಮಾನನು ಸ್ವಲ್ಪ ಸುದಾರಿಸಿಕೊಂಡು, ಕೈಯನ್ನು ಕಟ್ಟಿಕೊಳ್ಳುತಾ ತಲೆಯನ್ನು ಬಗ್ಗಿಸಿಕೊಂಡು ಮುಂದಕ್ಕೆ ಹೇಳಿದ್ದೇನೆಂದರೆ) ದೇವರು ದೊಡ್ಡವನು. ಅವನ ಇಷ್ಟವಿದ್ದಂತೆ ನಾವು ನಡೆಯಬೇಕು.

ಸಾಹುಕಾರ—ಅಯ್ಯ, ನೀನು ಪಡುವ ಕಷ್ಟವನ್ನು ನೋಡಿ ವ್ಯಸನವಾಗುತಿದೆ. ನನ್ನ ಕೈಲಾದಮಟ್ಟಿಗೆ ಅದನ್ನು ಹೋಗಲಾಡಿಸಿ ಯೇನು. ನಿನಗೆ ಬಿಡುಗಡೆ ಮಾಡಿಸಿಕೊಳ್ಳುವುದಕ್ಕೆ ಯಾವ ಸಾಹಸ ಮಾಡಬಲ್ಲೆ?

ಸುಲೇಮಾರ್—ಎಂಥಾ ಕಷ್ಟವನ್ನಾದರೂ ಸಹಿಸುತೇನೆ. ಪ್ರಾಣ ವನ್ನಾದರೂ ಕೊಡುವುದಕ್ಕೆ ಸಿದ್ಧವಾಗಿದೇನೆ.

ಸಾಹುಕಾರ—ನೀನು ಅಷ್ಟುದೂರ ಹೋಗತಕ್ಕ ಅಗತ್ಯವಿಲ್ಲ. ನಿನ್ನ ಬಿಡುಗಡೆಗೆ ಒಂದು ಮಾರ್ಗವಿದೆ.

ಸುಲೇಮಾನ್-ಆ ಮಾರ್ಗ ಯಾವುದು? ನನ್ನ ಪ್ರಾಣಹೋದರೂ ಸರಿಯೆ, ಅದನ್ನು ಸಾಧಿಸುವುದೇ ಸಿದ್ಧ.

ಸಾಹುಕಾರ—ಹಾಗಾದರೆ ಕೇಳು. ಈ ಊರಿನಲ್ಲಿ ನನಗೆ ಒಬ್ಬ ಶತ್ರು ಇದಾನೆ. ಅವನು ನನಗೆ ಬಹು ಅವಮಾನವನ್ನು ಮಾಡಿದಾನೆ. ಆದರೆ ಅವನು ಬಹು ಬಲಶಾಲಿ. ಅಷ್ಟೊ ಅಷ್ಟು ಅಹಂಕಾರಿ. ಅವನ ಶಕ್ತಿಗೆ ಹೆದರಿಕೊಂಡು ಇದುವರೆಗೂ ಸುಮ್ಮನೇ ಇದೇನೆ. ನಿನ್ನನ್ನು ನೋಡಿದರೆ ಬಹುಪರಾಕ್ರಮಶಾಲಿಯಾಗಿ ಕಾಣುತೀಯೆ. ಈ ಕಠಾರಿಯನ್ನು ಹಿಡಿ ನನ್ನ ಸಂಗಡ ಬಾ, ಅವನನ್ನು ತೋರಿಸುತೇನೆ. ಕತ್ತಲೆಯಾದಮೇಲೆ ಅವನನ್ನು ಪೂರೈಸಿಬಿಡು.

ಹೀಗೆಂದು ಹೇಳಿದ ಸಾಹುಕಾರನ ಮಾತನ್ನು ಕೇಳಿ, ಸುಲೇಮಾನನಿಗೆ ಇವನಲ್ಲಿ ಅಲಕ್ಷ್ಯ ಹುಟ್ಟಿತು. ಕೂಡಲೆ ಕೋಪ ಬಂತು. ಆಗ ಎರಡು ಕೈಯನ್ನೂ ಎರಡು ಕೆನ್ನೆಗೆ ಬಡಿದುಕೊಳ್ಳುತಾ—ತೋಬಾ, ತೋಬಾ! ನಾನು ಇಂಥಾ ನೀಚರಿಗೆ ಸೆರೆಸಿಕ್ಕಬಹುದೆ! ಎಲಾ, ಛೀ, ಹೋಗು, ಇಂಥಾ ಘಾತುಕಕೆಲಸಕ್ಕೆ ಸುಲೇಮಾನ ಎಂದಿಗೂ ಒಡಂಬಡಲಾರ. ಇದೇಯೊ? ನಿಮ್ಮ ಹಿಂದೂ ಮತದ ನೀತಿ, ನಮ್ಮ ಜನರೆಲ್ಲರನ್ನೂ ಈಗಲೇ ಸೆರೆಯಲ್ಲಿ ಇಟ್ಟರೂ ಸರಿಯೇ, ಪ್ರಾಣ ಹೋದರೂ ಸರಿಯೆ, ಈ ಮಹಾಪಾತಕ ನನಗೆ ಬೇಡ, ಎಂದನು.

ಅದಕ್ಕೆ ಸಾಹುಕಾರನು ತನ್ನ ಮನಸ್ಸಿನಲ್ಲಿ ಆ ಮಾತನ್ನು ಮೆಚ್ಚುತಾ ಆ ತುರುಕನನ್ನು ಕುರಿತು—ಅಯ್ಯ, ನಾನು ಹೇಳಿದ ಮಾತನ್ನು ನಿಧಾನವಾಗಿ ಯೋಚಿಸು, ಎಂದು ಹೇಳಿ ಹೊರಟು ಹೋದನು. ಮಾರನೇ ದಿನ ಮತ್ತೆ ಬಂದು—ಏನಪ್ಪಾ, ನಾನು ಹೇಳಿದ್ದನ್ನು ಯೋಚಿಸಿದೆಯ? ಎಂದನು. ಅದಕ್ಕೆ ಸುಲೇಮಾನನು ಯಾವ ಮಾತನ್ನೂ ಆಡದೆ ಇವನ ಕಡೆಗೆ ತಿರುಗದೇ ಅಲಕ್ಷ್ಯವಾಗಿ ಕೂತಿದ್ದನು. ಮತ್ತೆ ಮುಲ್ತಾನಿಯು—ಯಾಕೆ ಸುಮ್ಮನೇ ಇದ್ದೀಯೆ? ನಾನು ನಿನ್ನೆ ಹೇಳಿದ ಮಾತು ಆಗ ಕೆಟ್ಟದೆಂದು ತೋರಿದಾಗ್ಯೂ, ಯುಕ್ತವಾದ್ದೆಂದು ಈಗ ನೀನು ತಿಳಿದು ಇರಬಹುದು. ಇದಕ್ಕೆ ಕಾರಣವನ್ನು ಈಗ ವಿಸ್ತಾರವಾಗಿ ಹೇಳುತೇನೆ ಎಂದನು. ಈ

ಮಾತನ್ನು ಆಡಿ ಮುಗಿಸುವುದರೊಳಗೆ ಸಾಹುಕಾರನ ಮುಖವನ್ನು ದುರು ಗುಟ್ಟಿಕೊಂಡು ನೋಡಿ, ಸುಲೇಮಾನನು—ನಿನ್ನ ಬಾಯಿಯನ್ನು ಮುಚ್ಚು, ನಾನು ಪಡುತಿರುವ ಕಷ್ಟಕ್ಕೆ ಅಂಥಾ ಕೆಟ್ಟಮಾತ ಕೇಳುವ ಕಷ್ಟವನ್ನೂ ತಂದು ಸೇರಿಸಬೇಡ, ನೀನು ಹೊರಟು ಹೋಗು, ಎಂದನು. ಕೂಡಲೆ ಸಾಹುಕಾರನು ಸುಲೇಮಾನನನ್ನು ಕುರಿತು, ಅಪ್ಪಾ, ನೀನು ಮಹಾಪುರುಷ, ಸಾಧಾರಣನಲ್ಲ, ನಿನ್ನನ್ನು ನೋಡಿದಾಗಿನಿಂದಲೂ ನಿನ್ನಲ್ಲಿ ನನಗೆ ಗೌರವ ಹೆಚ್ಚುತಿದೆ. ನಿನ್ನ ಮನಸ್ಸನ್ನು ನೋಡುವುದಕ್ಕೋಸ್ಕರ ನಿನ್ನ ಸಂಗಡ ಇಂಥಾ ಕೆಟ್ಟ ಮಾತನ್ನು ಆಡಿದ್ದೇ ಹೊರತು ಮತ್ತೆ ಬೇರೇ ಇಲ್ಲ. ಪಾಪಕ್ಕೆ ನೀನು ಹೇಗೆ ಹೆದರುತೀಯೋ ನಾನೂ ಹಾಗೆಯೇ ಹೆದರುತೇನೆ. ನಿನಗಾಗಿ ಕೊಡುವ ಹಣವನ್ನು ಕೊಟ್ಟುಬಿಟ್ಟಿದೇನೆ. ನಿನಗೆ ಬಿಡುಗಡೆಯಾಗಿದೆ. ಆ ಬೇಡಿಯನ್ನು ತೆಗೆದುಬಿಡು ಎಂದು ಹೇಳಿದನು ಮತ್ತು ಸುಲೇಮಾನನಿಗೆ ದಾರಿ ವೆಚ್ಚಕ್ಕಾಗಿ ಕೊಟ್ಟು ಅವನನ್ನು ಉಪಚರಿಸಿ ತುರುಕಸ್ಥಾನಕ್ಕೆ ಪ್ರಯಾಣಮಾಡಿಸಿ ಕಳುಹಿಸಿದನು.

ತರುವಾಯ ಕೆಲವು ತಿಂಗಳಾಯಿತು. ಒಂದು ರಾತ್ರೆ ಸರಿಹೊತ್ತಿನಲ್ಲಿ ಆ ಮುಲ್ತಾನಿ ಸಾಹುಕಾರನ ಮನೆಗೆ ಬೆಂಕಿ ಬಿತ್ತು. ಮನೆಯು ಎಲ್ಲಾ ಕಡೆಯಲ್ಲಿಯೂ ಹತ್ತಿಕೊಂಡು ಅರೆವಾಸಿ ಉರಿದು ಹೋದ ಮೇಲೆ ಬೆಂಕಿಬಿದ್ದ ಸಂಗತಿ ಮನೇ ಜನಕ್ಕೆ ತಿಳಿಯಿತು. ಅವರವರು ತಂತಮ್ಮ ತಲೆಯನ್ನು ತಪ್ಪಿಸಿಕೊಂಡು ಓಡಿ ಹೋದರು. ಅಲ್ಲಿದ್ದ ಒಬ್ಬಿಬ್ಬರು ಆಳುಗಳು ಮೂರನೇ ಅಂತಸ್ತಿನಲ್ಲಿ ಮಲಗಿದ್ದ ಸಾಹುಕಾರನನ್ನು ಎಬ್ಬಿಸಿ ಈಚೆಗೆ ಕರೆತರುವುದು ಬಹು ಕಷ್ಟವಾಯಿತು. ಇವ ಇಳಿದ ಕೂಡಲೆ ಮರದ ಮೆಟ್ಟಿಲುಸಹಿತ ಹತ್ತಿಕೊಂಡು ಹೋಯಿತು. ಆ ಗದ್ದಲದಲ್ಲಿ ಇನ್ನೊಂದು ದೊಡ್ಡ ಅಚಾತುರ್ಯ ನಡೆಯಿತು. ಸಾಹುಕಾರನ ಮಗನು ಉಪ್ಪರಿಗೇ ಮೇಲೆ ಮಲಗಿ ನಿದ್ರೆ ಮಾಡುತಿದ್ದನು. ಇವನನ್ನು ಕರೆತರಲು ಗಾಬರಿಯಲ್ಲಿ ಎಲ್ಲರೂ ಮರೆತು ಬಿಟ್ಟರು. ಆ ಬಾಲಕನು ಬೆಂಕೀಶಕೆಯನ್ನು ತಡೆಯಲಾರದೆ ಎದ್ದು ಈಚೆಗೆ ಓಡಿ ಬಂದು ಮಹಡೀ ಮೇಲೆ ನಿಂತು—ಅಯ್ಯೋ ನಾನು

ಸತ್ತುಹೋಗುತ್ತೇನೆ, ನನ್ನನ್ನು ಕರೆದುಕೊಳ್ಳಿ ಎಂಬುದಾಗಿ ಅಳುತಾ ಕೈಗಳನ್ನು ಚಾಚಿದನು. ಇದನ್ನು ಕಂಡು ಸಾಹುಕಾರನು—ಅಯ್ಯೋ ನನ್ನ ಮಗ ಹೋಗುತಾನೆಯಲ್ಲಾ! ನನಗೆ ಇನ್ನೇನು ಗತಿ, ಯಾರಾದರೂ ನನ್ನ ಮಗನನ್ನು ತಂದುಕೊಟ್ಟರೆ ನನ್ನ ಆಸ್ತಿಯಲ್ಲಿ ಅರ್ಧವನ್ನು ಕೊಡುತ್ತೇನೆ, ಎಂದು ಕೂಗುತಾ ಕೆಳಕ್ಕೆ ಬಿದ್ದನು. ಜ್ಞಾನತಪ್ಪಿ ಹೋಯಿತು. ಆ ಹುಡುಗನನ್ನು ಈಚೆಗೆ ಕರೆದುಕೊಳ್ಳಬೇಕೆಂದು ಅಲ್ಲಿದ್ದ ಜನರೆಲ್ಲರೂ ಹೊರಟರು. ಅನೇಕ ಏಣಿಗಳನ್ನು ತಂದು ಹಾಕಿದರು. ಆದರೇನು? ಆ ಮಹಾಜ್ವಾಲೆಯಲ್ಲಿ ಒಳಕ್ಕೆ ಯಾರುತಾನೇ ನುಗ್ಗಿಯಾರು? ಬಾಗಿಲವಾಡಗಳೆಲ್ಲಾ ಹತ್ತಿಕೊಂಡು ಉರಿಯುತಿದ್ದವು. ಒಂದೊಂದು ಕಿಟಕಿಯಿಂದಲೂ ಈಚೆಗೆ ಉರಿ ಎರಚುತಿತ್ತು. ಆಗ ಅಲ್ಲಿದ್ದವರೆಲ್ಲರೂ ಸಾಹುಕಾರನ ಮಗ ಸತ್ತು ಹೋದನೆಂದು ನಿಶ್ಚೈಸಿಕೊಂಡರು.

ಇಷ್ಟರಲ್ಲಿಯೇ ಇನ್ನೊಂದು ಆಶ್ಚರ್ಯ ನಡೆಯಿತು. ಒಬ್ಬ ಮನುಷ್ಯನು ಗುಂಪಿನಿಂದ ಬಹು ಧೈರ್ಯವಾಗಿ ಓಡಿಬಂದು ಒಂದು ಏಣೀಮೇಲೆ ಹತ್ತಿ ಉರಿಯ ಒಳಕ್ಕೆ ನುಗ್ಗಿದನು. ಆಗ ವಿಶೇಷವಾಗಿ ಹೊಗೆ ಸುತ್ತಿಕೊಂಡಿತು. ಆ ಹುಡುಗನ ಜೊತೆಗೆ ಇವನೂ ಸತ್ತನೆಂದು ಜನರು ತಿಳಿದುಕೊಂಡರು. ಆದರೆ ಕಾಲುಗಳಿಗೆಯೊಳಗಾಗಿ ಆ ಧೀರನು ಹುಡುಗನನ್ನು ಎತ್ತಿಕೊಂಡು ಅದೇ ಏಣೀಮೇಲೆ ಇಳಿದು ಬಂದು ಮಗುವನ್ನು ಸಾಹುಕಾರನ ಮುಂದೆ ನಿಲ್ಲಿಸಿದನು. ಆ ಮುಲ್ತಾನಿಯು ಇದನ್ನು ಕಂಡು ಸಂತೋಷವೆಂಬ ಸಮುದ್ರದಲ್ಲಿ ಮುಳುಗಿ ಪುತ್ರನನ್ನು ಬಾಚಿ ತಬ್ಬಿಕೊಂಡು—ಅಯ್ಯೋ ನನ್ನ ಪ್ರಾಣಪದಕವೇ! ನೀನು ಜೀವಸಹಿತ ಬಂದೆಯಾ! ನೀನು ಇನ್ನೊಂದು ಸಾರಿ ಹುಟ್ಟಿದ ಹಾಗಾಯಿತಲ್ಲಾ! ನನಗೆ ಪುತ್ರದಾನವನ್ನು ಮಾಡಿದ ಈ ಮಹಾಪುರುಷ ಯಾರು? ಯಜ್ಞೇಶ್ವರನೇ ನನ್ನ ಮಗನನ್ನು ತಂದು ಕೊಟ್ಟ ಹಾಗಾಯಿತು. ನೀನು ಯಾರು? ಎಂದು ಕತ್ತೆತ್ತಿ ನೋಡಿದನು. ಮಗುವನ್ನು ಎತ್ತಿಕೊಂಡು ಬಂದವನು ಸಾಧಾರಣ ಬಟ್ಟೆಗಳನ್ನು ಹಾಕಿಕೊಂಡಿದ್ದರೂ ಬಹು ಗಂಭೀರವಾಗಿ ಕಾಣಿಸುತಿದ್ದನು. ಆ

ಬಟ್ಟೆಯು ವಿಶೇಷವಾಗಿ ಸುಟ್ಟು ಹೋಗಿತ್ತು. ಅವನ ಮೈಮೇಲೆಲ್ಲಾ ಮಸಿಯಾಗಿತ್ತು. ಗುರುತೇ ಸಿಕ್ಕಲಿಲ್ಲ. ಆತನು ಆ ಸೆಟ್ಟಿಯನ್ನು ಕುರಿತು—ಅಯ್ಯಾ ನಾನು ಯಾರಾದರೇನು? ನಿನ್ನ ಮಗನನ್ನು ಕರೆದುಕೊ, ಎಂದನು. ಕೂಡಲೆ ಸೆಟ್ಟಿಯು—ನೀನುಮಾಡಿದ ಉಪಕಾರಕ್ಕೆ ಈಗ ಈ ಜಾಳಿಗೇ ಹೊನ್ನನ್ನು ಹಿಡಿ; ನಾಳೆ ನನ್ನ ಮಾತಿನಪ್ರಕಾರ ನನ್ನ ಅರ್ಧ ಆಸ್ತಿಯನ್ನು ಕೊಡುತೇನೆ ಎನಲು, ಆ ಮನುಷ್ಯನು—ಅಯ್ಯಾ ನಾನು ಏನನ್ನೂ ಒಲ್ಲೆ ಎಂದನು. ಸಾಹುಕಾರನು-ಧ್ವನಿಯನ್ನು ನೋಡಿದರೆ ಯಾರೋ ನಾನು ಗುರುತುಕಂಡಹಾಗೆ ಇದೆ, ಎಂದು ಹೇಳಿದನು. ಸಾಹುಕಾರನ ಮಗನು-ಜಿಯ್ಯಾ, ನನಗೆ ಈಗ ತಿಳಿಯಿತು. ಅವನು ನಮ್ಮ ಸುಲೇಮಾನ, ಎಂದು ಓಡಿಹೋಗಿ ಅವನನ್ನು ತಬ್ಬಿಕೊಂಡನು. ಸಾಹುಕಾರನ ಆನಂದಕ್ಕೆ ಕೊನೆಯೇ ಇಲ್ಲದೆ ಹೋಯಿತು. ಅವನನ್ನೂ ತನ್ನ ಮಗನನ್ನೂ ಕರೆದುಕೊಂಡು ನೆರೆ ಮನೆಗೆ ಹೋಗಿ ಅಲ್ಲಿ ಕೂತು-ನೀನು ಎಲ್ಲಿಂದ ಬಂದೆ, ನಿನಗೆ ನಾನು ಬಿಡುಗಡೆಯನ್ನು ಮಾಡಿಸಿದ್ದೆನಲ್ಲ; ತಿರುಗಿ ನೀನು ಸೆರೆಗೆ ಹೇಗೆಬಿದ್ದೆ? ಎಂದೂ ಪ್ರಶ್ನೆ ಮಾಡಿದನು.

ಆಗ ಸುಲೇಮಾನನು ಆ ಹಣವಂತನನ್ನು ಕುರಿತು—ಎರಡನೇ ಸಾರಿ ಸೆರೆಯು ದೇವರ ದಯದಿಂದ ನನಗೆ ಸಂಭವಿಸಿದಹಾಗಾಯಿತು. ಅದರಿಂದಲೇ ಮತ್ತೆ ನಾನು ಈ ಪಟ್ಟಣಕ್ಕೆ ಬಂದು ಒಬ್ಬ ಹಿಂದೂರಾಜಪುತ್ರನ ಮನೆಯಲ್ಲಿ ಗುಲಾಮನಾಗಿದೇನೆ. ಈದೆಸೆ ನನಗೆ ಬಂದದರಿಂದಲೇ ನನ್ನ ಕೃತಜ್ಞತೆಯನ್ನು ತೋರಿಸುವ ಸಮಯ ದೊರಕಿತು. ಈಗ ನಿಜವನ್ನು ಹೇಳುತೇನೆ ಕೇಳು. ಈಗ ನನ್ನನ್ನು ಗುಲಾಮನಾಗಿಮಾಡಿಕೊಂಡು ಇರತಕ್ಕ ದೊರೆಮಗನು ಪೂರ್ವದಲ್ಲಿ ಮುದುಕನಾದ ನಮ್ಮ ತಂದೆಯನ್ನು ಗುಲಾಮನನ್ನಾಗಿ ಕೊಂಡುಕೊಂಡು ಅವನನ್ನು ಹಿಂಸೆಮಾಡುತಿದ್ದನು. ಅದನ್ನು ನೆನೆಸಿಕೊಂಡೇ ನಾನು ಪೂರ್ವದಲ್ಲಿ ಅಳುತಿದ್ದೆ. ಆ ದುಃಖವನ್ನು ಧರ್ಮಾತ್ಮನಾದ ನೀನು ಪರಿಹಾರ ಮಾಡಿದೆ. ನಾನು ನಿನ್ನ ಔದಾರ್ಯದಿಂದ ಸೆರೆಯನ್ನು ತಪ್ಪಿಸಿಕೊಂಡು, ನಮ್ಮ ತಂದೆಯನ್ನು ಇರಿಸಿಕೊಂಡಿದ್ದ ರಾಜಪುತ್ರನ ಬಳಿಗೆ ಹೋಗಿ,

ಮುದುಕನಾದ ನಮ್ಮ ತಂದೆಯನ್ನು ಬಿಟ್ಟುಬಿಡು ಎಂತಲೂ, ಪ್ರಾಯದವನಾದ ನನ್ನನ್ನು ಗುಲಾಮನಾಗಿ ಇರಿಸಿಕೊಳ್ಳೆಂತಲೂ ಕೇಳಿಕೊಂಡೆ. ಆತನಿಗೆ ದಯ ಹುಟ್ಟಿ ನಮ್ಮ ತಂದೆಯನ್ನು ಬಿಟ್ಟು ಬಿಟ್ಟು, ಆತನಿಗೆ ಬದಲಾಗಿ ನನ್ನನ್ನು ಇಟ್ಟುಕೊಂಡನು. ಆಗಿನಿಂದ ಈ ಊರಿನಲ್ಲಿಯೇ ಇರುತೇನೆ. ನೀನು ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡುವುದಕ್ಕೆ ಈಗ ಸಮಯ ಸಿಕ್ಕಿತು, ಎಂದು ಸುಲೇಮಾನನು ಹೇಳಿದನು. ಸಾಹುಕಾರನು ಇದನ್ನು ಕೇಳಿ ಸುಲೇಮಾನನ ಒಳ್ಳೇ ಸ್ವಭಾವವನ್ನು ಕೊಂಡಾಡಿದನು.

ಇಲ್ಲಿಗೆ ಕಥೆ ನಿಂತಿತು. ಇದನ್ನು ಕೇಳಿ, ಸುಮತಿ, ಮದನ, ಇವರಿಬ್ಬರಿಗೂ ಮನಸ್ಸೆಲ್ಲಾ ಬಹು ಕಲಕಿಹೋಯಿತು. ಇವರಿಬ್ಬರಿಗೂ ಕಣ್ಣಿನಲ್ಲಿ ನೀರು ಬಂತು. ಇದನ್ನು ಕಂಡು ರಾಮಜೋಯಿಸನು ಅವರಿಬ್ಬರನ್ನೂ ಕುರಿತು—ಇದು ಇಲ್ಲಿಗೆ ಸಾಕು. ನೀವು ತೋಟದಲ್ಲಿ ಗುಡಿಸಲನ್ನು ಕಟ್ಟುತಿದ್ದ ಕಡೆಗೆ ನಡೆಯಿರಿ, ಎಂದನು. ಇವರಿಬ್ಬರೂ ಅಲ್ಲಿಗೆ ಹೋಗಿ ನೋಡುವಲ್ಲಿ, ಮೊದಲು ಇವರು ಕಟ್ಟಿದ್ದ ಗುಡಿಸಲು ಬೆಳಗ್ಗೆ ಬೀಸಿದ ವಿಪರೀತವಾದ ಗಾಳಿಗೆ ಬಿದ್ದುಹೋಗಿತ್ತು. ಮದನನು ಅದನ್ನು ಕಂಡು, ಹೋಯಿತಲ್ಲಾ ಎಂದು ಸ್ವಲ್ಪ ಅಳುವುದಕ್ಕೆ ಮೊದಲು ಮಾಡಿದನು. ಆಗ ಸುಮತಿಯು ಅವನನ್ನು ಕುರಿತು—ಮದನ, ಅಳಬೇಡ, ಇದು ಬಿದ್ದುಹೋದ್ದು ನಮ್ಮ ತಪ್ಪೇ ಸರಿ. ನಾನು ಹೋಗಿ ಚೆನ್ನಾಗಿ ಪರೀಕ್ಷಿಸಿ ನೋಡಿದೆ. ಕವೆಗಳನ್ನು ನಾವು ಮೇಲೆಯೇ ನೆಟ್ಟು ಇದ್ದೆವು. ಅದು ಭಾರವನ್ನು ತಡೆಯದೇ ಗಾಳಿಗೆ ಬಿದ್ದುಹೋಯಿತು. ಮನೆಕಟ್ಟುವವರು ಕವೆಯನ್ನೂ ಕಂಭವನ್ನೂ ಬಹಳ ಬಲವಾಗಿ ನೆಡುವರು. ನಾವು ಅವರಹಾಗೆಯೇ ಬಲವಾಗಿ ಹದಿಯನ್ನು ಹಾಕಿ ಕವೆಯನ್ನು ನೆಟ್ಟು ಮನೆಯನ್ನು ಕಟ್ಟಿದರೆ, ಗಾಳಿಬಂತು ಎಂದು ಭಯಪಡಬೇಕಾದ್ದಿಲ್ಲ. ಹೀಗೆಂದು ಸುಮತಿಯು ಮದನನಿಗೆ ಸಮಾಧಾನ ಹೇಳಿದನು.

ಸುಮತಿ ಮದನ ಇಬ್ಬರೂ ಸೇರಿ ಇಳಿಜಾರಾಗಿ ಚಾವಣಿಹಾಕಿ ಒಂದು ಮನೆ ಕಟ್ಟಿದರು.

ಅಷ್ಟು ದಿನಕ್ಕೆ ಇವರು ಬಿತ್ತಿ ಇದ್ದ ಬತ್ತವು ಹೊಡೆ ಹೊರಟಿತ್ತು.

ಮದನನು ನಿತ್ಯವೂ ಅದನ್ನು ನೋಡಿ ಬಂದು—ನಾವು ಇರುವುದಕ್ಕೆ ಮನೆಯನ್ನು ಕಟ್ಟಿದೆವು. ಬತ್ತ ಬೆಳೆದ ಕೂಡಲೆ ನಮಗೆ ಆಹಾರವು ಸಿಕ್ಕುವುದು, ಇನ್ನು ಮೇಲೆ ನಾವು ಎಂಥಾ ಕಾಡಿನಲ್ಲಿ ಬೇಕಾದರೂ ಇರ ಬಹುದು, ಅಲ್ಲವೆ? ಎಂದನು. ಅದಕ್ಕೆ ಸುಮತಿಯು ಈ ಬತ್ತ ಅನ್ನ ವಾಗಬೇಕಾದರೆ ಮಧ್ಯೆ ಮಾಡಬೇಕಾದ ಕೆಲಸ ಇನ್ನು ಯೆಷ್ಟೋ ಇದೆ, ಎಂಬುದಾಗಿ ಉತ್ತರ ಕೊಟ್ಟನು.

ರಾಮಜೋಯಿಸನಿಗೆ ಇನ್ನೊಂದು ತೋಟವಿತ್ತು. ಅದರಲ್ಲಿ ಹಣ್ಣಿನ ಗಿಡವನ್ನೇ ಹಾಕಿಸಿ ಇದ್ದನು. ಮದನನು ಆಗಾಗ್ಗೆ ಆ ತೋಟಕ್ಕೆ ಹೋಗಿ ಅಲ್ಲಿ ಹಣ್ಣುಗಳನ್ನು ಕಿತ್ತು ತಿಂದು ಹಲ್ಲಿಗೆ ರುಚಿ ಇಳಿದಿತ್ತು. ಆದ್ದರಿಂದ ಅವನು ಜೋಯಿಸನ ಬಳಿಗೆ ಹೋಗಿ— ಜೋಯಿಸರೆ ಇಂಥಾ ಹಣ್ಣಿನ ಗಿಡಗಳನ್ನು ನಮ್ಮ ತೋಟದಲ್ಲಿಯೂ ಹಾಕಿಸಿದರೆ ಬಹು ಚೆನ್ನಾಗಿ ಇರುವುದು. ನನಗೆ ಕೆಲವು ಗಿಡಗಳನ್ನು ಕೊಡಿ, ಎಂದು ಜೋಯಿಸನ ಅಪ್ಪಣೆಯನ್ನು ಪಡೆದು ಸುಮತಿ ಮದನ ಇಬ್ಬರೂ ಸೇರಿ ಅಲ್ಲಿಗೆ ಹೋದರು. ಆ ತೋಟದಲ್ಲಿ ಕೋಮಲವಾಗಿ ಬೆಳೆದಿದ್ದ ಸೊಸಿಗಳನ್ನು ಬುಡಸಹಿತವಾಗಿ ಕಿತ್ತು ಬೇರಿಗೆ ಮಣ್ಣನ್ನು ಕಟ್ಟಿದರು. ಅವುಗಳನ್ನು ತಾವು ಮಾಡಿದ್ದ ತೋಟಕ್ಕೆ ತೆಗೆದುಕೊಂಡು ಹೋಗಿ ನೆಲವನ್ನು ಅಗೆದು ಹಸನುಮಾಡಿ, ಪಾತೀಕಟ್ಟಿ, ಅದರಲ್ಲಿ ಸಣ್ಣ ಗುಳಿಗಳನ್ನು ಮಾಡಿ, ಈ ಸೊಸಿಗಳನ್ನು ನೆಟ್ಟರು. ಆ ಸೊಸಿಗಳು ಗಾಳಿಗೆ ಮುರಿದುಹೋಗದಹಾಗೆ ಅವುಗಳ ಮಗ್ಗುಲಲ್ಲಿ ಒಂದೊಂದು ದಬ್ಬೆಯನ್ನು ನೆಟ್ಟು ಸೊಸಿಗೂ ಅದಕ್ಕೂ ಅಳ್ಳಕವಾಗಿ ನಾರನ್ನು ಕಟ್ಟಿ ದರು. ಅದು ಬೇಸಗೇ ಕಾಲವಾದ್ದರಿಂದ ಅವುಗಳಿಗೆ ನೀರಹಾಕುವು ದಕ್ಕೆ ತಕ್ಕ ಏರ್ಪಾಡನ್ನು ಮಾಡಿದರು.

ಈ ಹುಡುಗರು ಹೀಗೆ ಕೆಲಸಮಾಡುತಿರುವುದನ್ನು ನೋಡಿ ರಾಮಜೋಯಿಸನಿಗೆ ಸಂತೋಷವಾಯಿತು. ಅವನು ಅವರನ್ನು ಕುರಿತು—ಗಿಡಗಳಿಗೆ ನೀರ ಹಾಕಿದ ಹೊರತು, ಅವುಗಳು ಬೆಳೆಯುವು ದಿಲ್ಲ. ಉತ್ತರದೇಶದಲ್ಲಿ ಗಂಗಾನದಿ ಎಂಬ ದೊಡ್ಡ ಹೊಳೆ ಇದೆ. ಹೊಳೆ ಬಂದಾಗ ನೀರು ಉಕ್ಕಿ ಹರಿಯುವುದು. ಈ ನೀರು ಅಲ್ಲಲ್ಲಿ

ನಿಂತುಕೊಂಡು ಕೊಂಚದಿವಸದಲ್ಲಿ ಇಂಗಿಹೋಗುವುದು. ಆ ನೀರಿನ ಸಂಗಡ ಒಂದು ಬಗೆ ಎಕ್ಕಲುಬಂದು ಬೀಳುವುದು. ಇದರಿಂದ ಭೂಮಿ ಹೆಚ್ಚಾಗಿ ಹುಲಸಾಗುವುದು. ಅದರಲ್ಲಿ ಯಾವುದನ್ನು ನೆಟ್ಟರೂ ಬಹು ಚೆನ್ನಾಗಿ ಬೆಳೆಯುವುದು, ಹೀಗೆಂದು ಆ ಹುಡುಗರಿಗೆ ತಿಳಿಸಿದನು.

ಅದಕ್ಕೆ ಸುಮತಿಯು—ಜೋಯಿಸರೆ, ಅಲ್ಲೇ ಅಲ್ಲವೆ ಮೊಸಳೆ ಯೆಂಬ ಕೆಟ್ಟಜಂತು ಇರತಕ್ಕದ್ದು ? ಎಂದು ಕೇಳಿದನು. ಮದನನು —ಜೋಯಿಸರೆ ಅದು ಏನು ? ಎನಲು, ರಾಮಜೋಯಿಸನು— ಅದೊಂದು ಕೆಟ್ಟಜಂತು, ಸ್ವಲ್ಪಹೊತ್ತು ಭೂಮಿಯಮೇಲೂ, ಸ್ವಲ್ಪ ಹೊತ್ತು ನೀರಿನಲ್ಲಿಯೂ ಇರುತ್ತೆ. ಇದು ಮೊಟ್ಟೆಯನ್ನು ಹಾಕಿ ಮರಳಿನಲ್ಲಿ ಹೂಳುವುದು. ಬಿಸಿಲಿನಲ್ಲಿ ಕೆಲವುವಾರಗಳವರೆಗೂ ಮರಳು ಕಾದು ಶಖೆಯು ಮೊಟ್ಟೆಗೆ ವ್ಯಾಪಿಸುವುದು. ಕೊನೆಗೆ ಮೊಟ್ಟೆ ಒಡೆದು ಮೊಸಳೇ ಮರಿಯಾಗುವುದು. ಇದು ಮೊದಲು ಚಿಕ್ಕದಾಗಿ ಇರುವುದು. ಮೈ ಉದ್ದ. ಕಾಲು ನಾಲ್ಕು. ಆ ಕಾಲುಗಳು ಚಿಕ್ಕಚಿಕ್ಕದಾಗಿ ಇರು ವವು. ಭೂಮಿಯಮೇಲೆ ನಡೆಯುವುದಕ್ಕೂ, ನೀರಿನಲ್ಲಿ ಈಜುವುದಕ್ಕೂ, ಅನುಕೂಲವಾಗಿದೆ. ಅದರ ಬೆನ್ನಿನ ಮೇಲಿನಿಂದ ಬಾಲದ ಕೊನೇ ವರೆಗೂ ಮೇಲುಗಡೆ ಗರಗಸದಹಾಗೆ ಇದೆ. ಅದು ನೋಡುವುದಕ್ಕೆ ದೊಡ್ಡ ಹಲ್ಲಿಯಹಾಗೆ ಕಾಣುವುದು. ಇದು ಸಮುದ್ರದಲ್ಲಿಯೂ ಹೊಳೆ ಯಲ್ಲಿಯೂ ದೊಡ್ಡ ಕೊಳದಲ್ಲಿಯೂ ಸಿಕ್ಕುವುದು. ಇದರ ಹಲ್ಲು ಗರಗಸದಹಾಗೆ ಸಾಲಾಗಿರುವುದು. ಇದರ ಹತ್ತಿರಕ್ಕೆ ದನಕರುಗಳಾಗಲಿ ಮನುಷ್ಯರಾಗಲಿ ಹೋದರೆ ಬಾಲದಿಂದ ಹೊಡೆದು ನೀರಿನೊಳಕ್ಕೆ ಎಳೆದುಕೊಂಡು ಹೋಗುವುದು. ಇದು ಹೋಗುವಾಗ ನೀರು ಬಹಳ ವಾಗಿ ಕದಲುವುದು. ಈಟಿಯನ್ನು ಹಿಡಿದು ಅದರ ಬಾಯಿಯೊಳಕ್ಕೆ ಚುಚ್ಚಿ ಇದನ್ನು ಕೊಲ್ಲುವರು. ಬಲೆಯನ್ನು ಹಾಕಿ ಅದನ್ನು ಹಿಡಿಯು ವರು. ಕೆಲವು ಕಡೆಯಲ್ಲಿ ಬೆಸ್ತರು ಎರಡು ತುದಿಯಲ್ಲಿಯೂ ಮೊನೆ ಯಾದ ಒಂದು ಬಾಕನ್ನು ಮಧ್ಯೆ ಹಿಡಿದು ಅದರ ಬಾಯಿಯೊಳಕ್ಕೆ ಕೈಯನ್ನು ಹಾಕುವರು. ಮೊಸಳೆಯು ಮನುಷ್ಯರನ್ನು ನುಂಗ ಬೇಕೆಂದು ಬಾಯನ್ನು ಮುಚ್ಚಿಕೊಳ್ಳುವುದು. ಆಗ ಅದರ ಬಾಯಿಗೆ ಬಾಕು ಚುಚ್ಚಿಕೊಂಡು ಅದು ಸಾಯುವುದು.

ಹೀಗೆಂದು ರಾಮಜೋಯಿಸನು ಹೇಳಲು, ಮದನನು—ಇಂಥಾ ಕೆಟ್ಟಮೃಗವನ್ನು ಒಗ್ಗಿಸಿಕೊಂಡು ಸಾಧುವಾಗಿ ಮಾಡಿಕೊಳ್ಳಬಹುದೆ? ಎಂದು ಕೇಳಲು, ಅದಕ್ಕೆ ರಾಮಜೋಯಿಸನು-ಈ ಲೋಕದಲ್ಲಿ ಒಗ್ಗಿಸಿಕೊಂಡು ಸಾಧುವಾಗಿ ಮಾಡಿಕೊಳ್ಳಲು ಆಗದೇ ಇರತಕ್ಕ ಜಂತುವೇ ಇಲ್ಲವೆಂದು ನಿನಗೆ ಆಗಲೇ ಹೇಳಿದೇನೆ. ಮಿಸರ್ ದೇಶದಲ್ಲಿ ಮೊಸಳೆಗಳನ್ನು ಸಾದುಮಾಡಿ ಸಾಕುತಾರೆ. ಮಕ್ಕಳು ಸಹಿತ ಅವುಗಳ ಸಂಗಡ ಆಡುವುವು, ಎಂದು ಹೇಳಿದನು. ಆದಕ್ಕೆ ಮದನನು ಸಂತೋಷಪಟ್ಟು—ಹಾಗಾದರೆ ಲೋಕದಲ್ಲಿರುವ ಜಂತುಗಳನ್ನೆಲ್ಲಾ ನಾನು ನೋಡಬೇಕಲ್ಲಾ ಎಂದನು. ಆ ಮಾತಿಗೆ ಜೋಯಿಸನು—ಅಯ್ಯಾ, ಇದು ಸಾಧ್ಯವಲ್ಲ. ಒಂದೊಂದು ದೇಶದಲ್ಲಿ ಒಂದೊಂದು ಬಗೆ ಜಂತುಗಳಿರುವವು. ಅವುಗಳನ್ನೆಲ್ಲಾ ಒಂದೇ ದೇಶದಲ್ಲಿ ನೋಡುವುದು ಕಷ್ಟ. ಆ ಜಂತುಗಳನ್ನು ಕುರಿತು ಪುಸ್ತಕಗಳನ್ನು ಬರೆದಿದಾರೆ. ಅವುಗಳನ್ನು ನೀನು ಓದಿ ಸುಲಭವಾಗಿ ತಿಳಿದುಕೊಳ್ಳಬಹುದು—ಎಂದು ನುಡಿದನು.

ಹೀಗಿರುವಲ್ಲಿ ಒಂದು ದಿನ ಸುಮತಿಯೂ ಮದನನೂ ಬೆಳಗ್ಗೆ ಹೊತ್ತಿಗೆ ಮುಂಚೆ ಎದ್ದು ದೂರವಾಗಿ ಹೋಗಿ ಸಂಚಾರಮಾಡಿಕೊಂಡು ಬರುವುದಕ್ಕೆ ಹೊರಟರು. ಬರುತಾ ದಾರಿಯಲ್ಲಿ ಸುತ್ತಾಟದಿಂದ ಆಯಾಸದಿಂದ ಒಂದು ಮರದ ನೆರಳಿನಲ್ಲಿ ಕೂತುಕೊಂಡರು. ಬಿಸಿಲಲ್ಲಿ ಅಲೆದು ಮುಖವನ್ನು ಕೆಂಪಗೆ ಮಾಡಿಕೊಂಡು ಹಸಿವಿನಿಂದ ಬಳಲಿ ಇದ್ದ ಈ ಹುಡುಗರನ್ನ ಒಬ್ಬ ಶೂದ್ರಿತ್ತಿಯು ನೋಡಿ ಮರುಕದಿಂದ ಇವರ ಬಳಿಯಲ್ಲಿ ಬಂದುನಿಂತು—ಅಪ್ಪಾ ಹುಡುಗರಾ, ನೀವು ಯಾಕೆ ಇಷ್ಟು ಬಳಲಿಕೆಯಿಂದ ಇಲ್ಲಿ ಕೂತಿದೀರಿ? ಹೊತ್ತಾಯಿತು. ಹೊಟ್ಟೆಯಲ್ಲಿ ಅನ್ನವಿಲ್ಲ. ಅಗೋ ಅಲ್ಲಿ ಕಾಣುವುದೇ ನಮ್ಮ ಊರು. ಇಲ್ಲಿಗೆ ಆಳು ಕೂಗಿದೆ. ನೀವು ಅಲ್ಲಿಗೆ ಬಂದು ಸ್ವಲ್ಪ ಫಲಾಹಾರವನ್ನು ಮಾಡಿ ಮುಂದಕ್ಕೆಹೊರಡಿ, ಎಂದಳು. ಈ ಹುಡುಗರು ಇಬ್ಬರೂ ಅದಕ್ಕೆ ಒಪ್ಪಿ, ಆ ಶೂದ್ರಳ ಮನೆಗೆ ಹೋದರು. ಅವಳು ತನ್ನ ಹಿತ್ತಲ ಕಡೆಗೆಹೋಗಿ ಎರಡು ಸವತೇಕಾಯಿಯನ್ನು ಕಿತ್ತು ತಂದು ಈ ಹುಡುಗರಿಗೆ ಕೊಟ್ಟು, ತಿನ್ನಿ ಎಂದು ಹೇಳಿದಳು. ಒಂದು ಚಿಕ್ಕ ಪಂಚಪಾತ್ರೆಯಲ್ಲಿ ಹಾಲನ್ನು

ತಂದು ಇವರಿಬ್ಬರಿಗೂ ಕೊಟ್ಟಳು. ಅದನ್ನೆಲ್ಲಾ ತೆಗೆದುಕೊಂಡು ದಣುವನ್ನು ಆರಿಸಿಕೊಂಡು, ಸುಮತಿಯೂ ಮದನಕುಮಾರನೂ ಮನೆಗೆ ಹೊರಡಬೇಕೆಂದು ಎದ್ದರು. ಅಷ್ಟರಲ್ಲಿಯೇ ಬಾಗಿಲ ಹತ್ತಿರ ಸಣ್ಣ ಪುರಲೇಕಡ್ಡಿಯೂ ತೆಂಗಿನಸೋಗೆಯೂ ಸ್ವಲ್ಪ ಸ್ವಲ್ಪ ಹಾಕಿತ್ತು. ಮದನನು ಅದು ಯಾತಕ್ಕೆಂದು ಕೇಳಿದನು. ಆ ಗರತಿಯು ಅಪ್ಪಾ, ಇದು ಹಿಟ್ಟು ಬೇಯಿಸಿಕೊಳ್ಳಲು ಉರಿಗೆ ಬೇಕಾಗುತ್ತೆ, ಎಂದಳು. ಆ ಮಾತಿಗೆ ಮದನನು—ಅಯ್ಯೋ! ನಮ್ಮ ಮನೆಯಲ್ಲಿ ದಿವಸಕ್ಕೆ ಒಂದು ಬಂಡಿ ಕಟ್ಟಿಗೆಯನ್ನು ಒಲೆಗೆ ಹಾಕುತಾರೆ. ಈ ಪುರಲೆ ಯಾತಕ್ಕಾದೀತು? ಎಂದನು. ಕೂಡಲೇ ಆ ಗೌಡಿತ್ತಿಯು—ಸ್ವಾಮಿ ನೀವು ದೊಡ್ಡವರು. ಬೇಕಾದ ಭಾಗ್ಯವಿರಬಹುದು, ಬೇಕುಬೇಕಾದ ಅಡಿಗೆಯನ್ನು ನಿಮ್ಮ ಮನೆಯಲ್ಲಿ ಮಾಡುತಿರಬಹುದು. ಆದ್ದರಿಂದ ಅಷ್ಟು ಸವುದೆ ಬೇಕಾಗುವುದು. ನಾವು ಬಡವರು. ಒಂದು ಮಡಕೆ ಹಿಟ್ಟು ಒಂದು ಮಡಕೆ ಉದಕ ಆದರೆ ಸಾಕು. ಅಷ್ಟಕ್ಕೆ ಈ ಉರಿ ಬೇಕಾದಷ್ಟಾಯಿತು, ಎಂದಳು. ಮದನನು ಅದನ್ನು ಕೇಳಿ ಅವರು ಬಡವರೆಂದು ತಿಳಿದು ತನ್ನ ಅಂಗಿ ಜೇಬಿನಿಂದ ಒಂದು ಹಣವನ್ನು ತೆಗೆದು —ಅಮ್ಮಾ, ನೀನು ಕೊಟ್ಟ ಹಾಲಿನಿಂದಲೂ, ಸವತೇಕಾಯಿನಿಂದಲೂ ನಮಗೆ ಹಸಿವು ಕಡಮೆಯಾಯಿತು. ನಿನ್ನ ಉಪಕಾರಕ್ಕೆ ಈ ಹಣವನ್ನು ಹಿಡಿ, ಎನಲು, ಆಕೆಯು—ಅಪ್ಪಾ, ನಮ್ಮ ಮನೆಯಲ್ಲಿ ನೀವು ಊಟಮಾಡತಕ್ಕವರಲ್ಲ. ಇಲ್ಲದಿದ್ದರೆ ನಾವು ತಿನ್ನುವ ಹಿಟ್ಟನ್ನೇ ನಿಮಗೂ ಇಕ್ಕುತಿದ್ದೆ. ನಮಗೆ ಹಣಕಾಸು ಏನೂ ಬೇಡ. ನಾವೇನೋ ಬಡವರು. ಆದರೆ ಇಷ್ಟು ಹಾಲು ಕೊಟ್ಟಮಾತ್ರಕ್ಕೆ ನಿಮ್ಮಿಂದ ಹಣವನ್ನು ಇಸಕೊಳ್ಳಲೆ? ನಾನು ಒಲ್ಲೆ ಎಂದಳು.

ಇವರು ಹೀಗೆ ಮಾತನಾಡುತಿರುವ ಸಮಯಕ್ಕೆ ಸರಿಯಾಗಿ ದವಾಲಿಯನ್ನು ಹಾಕಿಕೊಂಡಿರುವ ಇಬ್ಬರು ಜವಾನರು ಬಂದರು. ಅವರ ಹಿಂದೆ ಒಬ್ಬ ಬ್ರಾಹ್ಮಣ ಕಾಗದ ಕಡ್ಡಿಯನ್ನು ಹಿಡಿದುಕೊಂಡು ಬಂದನು. ನಿನ್ನ ಮನೆಯನ್ನು ಜಪ್ತಿಮಾಡಿ ಸಾಮಾನುಗಳನ್ನೆಲ್ಲಾ ತೆಗೆದುಕೊಂಡು ಹೋಗುವುದಕ್ಕೆ ಬಂದಿದೇವೆ. ನಿನ್ನ ಗಂಡ ಎಲ್ಲಿ?

ಎಂದು ಆ ಒಕ್ಕಲಗಿತ್ತಿಯನ್ನು ಗದರಿಸಿ ಕೇಳಿದರು. ಅದಕ್ಕೆ ಆ ಬಡ ಹೆಂಗಸು ಗಾಬರಿಯಾಗಿ ಭಯದಿಂದ-ಯಾರಪ್ಪಾ, ಜಪ್ತಿ ಮಾಡುತೀರಿ? ನಾವು ಯಾವ ತಪ್ಪನ್ನೂ ಮಾಡಲಿಲ್ಲ. ನಾವು ಯಾರಿಗೂ ಮೂರು ಕಾಸು ಸಾಲವನ್ನು ಕೊಡಬೇಕಾದ್ದಿಲ್ಲ, ಎಂದಳು. ಆ ಮಾತಿಗೆ ಆ ಬಿಲ್ಲೇದವರು ಆಚೇ ಊರ ದೊಡ್ಡ ಶೆಟ್ಟಿಗೆ ನಿನ್ನ ಗಂಡ ಇಪ್ಪತ್ತೇಳು ವರಹಾ ಕೊಡಬೇಕು. ಈಗಲೇ ಕೊಡದೇ ಇದ್ದರೆ, ನಿನ್ನ ಮನೆ ಮಡಕೆಯನ್ನೆಲ್ಲಾ ಆಚೆಗೆ ಹಾಕುತೇವೆ. ನಿಮ್ಮನ್ನೆಲ್ಲಾ ಚಾವಡಿಗೆ ಎಳೆದುಕೊಂಡು ಹೋಗುತೇವೆ, ಎಂದು ಕೂಗಾಡಿದರು. ಇಷ್ಟರಲ್ಲಿ ಆ ಗರತಿಯ ಗಂಡ ಮನೆಗೆ ಬಂದನು. ಅವನು ಇದೇನೆಂದು ಕೇಳಲು, ಬಿಲ್ಲೇದವರು ಅವನಿಗೂ ಅದೇ ಮಾತನ್ನು ಹೇಳಿದರು. ಆ ಸಂಗತಿ ಕಿವಿಗೆ ಬಿದ್ದ ಕೂಡಲೆ ಆ ಶೂದ್ರನ ಮುಖವು ಪೆಚ್ಚಾಯಿತು. ಇದು ಯಾವ ಸಾಲವೆಂದು ಹೆಂಡತಿ ಕೇಳಿದಳು. ಆ ಗೌಡನು—ನಾನು ಆ ಸಾಲವನ್ನು ಮಾಡಲಿಲ್ಲ. ನಿನ್ನ ತಮ್ಮನಿಗೆ ಒಂದು ತವಾಯಿ ಬಂದಿತ್ತು. ಅವನ ಸಾಲವನ್ನು ತೀರಿಸುವುದಕ್ಕಾಗಿ ನಾನು ಹೊಣೆ ಯಾದೆ. ಅದೇ ಇದು ಎಂದನು. ಅತ್ತ ಜವಾನರು ಇವನ ಮನೇ ಸಾಮಾನುಗಳನ್ನು ಈಚೆಗೆ ತಂದು ಗಂಟುಕಟ್ಟಿ, ಚಾವಡಿಗೆ ತೆಗೆದು ಕೊಂಡು ಹೋಗಲು ಅನುವಾದರು.

ಇದನ್ನು ಕಂಡು ಒಕ್ಕಲಿಗನಿಗೆ ವಿಶೇಷ ಕೋಪ ಬಂತು. ಅವನ ಹಂಜರಕ್ಕೆ ಸಿಕ್ಕಿಸಿದ್ದ ಕುಡುಗೋಲನ್ನು ತೆಗೆದುಕೊಂಡು—ನನ್ನ ಮಕ್ಕಳು ಹೊಟ್ಟೆಗಿಲ್ಲದೆ ಸಾಯುವ ಹೊತ್ತು ಬಂತು. ಇನ್ನು ನಾನಿ ದ್ದೇನುಫಲ ? ಕತ್ತು ಕುಯಿದುಕೊಂಡು ಪ್ರಾಣಬಿಡುತೇನೆ, ಎಂಬು ದಾಗಿ ಕುಡುಗೋಲನ್ನು ಕತ್ತಿನಹತ್ತಿರಕ್ಕೆ ತೆಗೆದುಕೊಂಡು ಹೋದನು. ಹೆಂಡತಿಯು ಓಡಿಬಂದು ಕೈಹಿಡಿದುಕೊಂಡಳು. ಅಳುತಾ ನಮ ಗೇನುಗತಿ, ಎಂದು ಕೂಗಿಕೊಂಡಳು. ಮಕ್ಕಳೆಲ್ಲಾ ಓಡಿಬಂದು ಗೋಳಾ ಡುತಾ, ಅಪ್ಪನನ್ನು ಸುತ್ತಿಕೊಂಡವು. ಇದನ್ನು ಕಂಡು ಸುಮತಿಗೆ ದುಃಖಬಂತು. ಅವನು ಕಣ್ಣಿನಲ್ಲಿ ನೀರ ಹಾಕುತಾ, ಅಳುವುದಕ್ಕೆ ಮೊದಲು ಮಾಡಿದನು. ಮದನನು ಇದೆಲ್ಲವನ್ನೂ ಸುಮ್ಮನೆ ನಿಂತು

ನೋಡುತಾ ಇದ್ದು, ಸುಮತಿಯನ್ನೂ ಕರೆದುಕೊಂಡು ಮನೆಗೆ ಹೋದನು. ಅಲ್ಲಿ ರಾಮಜೋಯಿಸನನ್ನು ಕುರಿತು—ಉಪಾಧ್ಯಾಯರೇ, ನಾನು ನಮ್ಮ ಅಪ್ಪಾಜಿಯನ್ನು ನೋಡಿಕೊಂಡು ಬರುತೇನೆ. ಇವತ್ತು ನಮ್ಮ ಅರಮನೆಗೆ ನನ್ನನ್ನು ಕಳುಹಿಸಿಕೊಡಿ ಎಂದನು. ಮದನನು ಜೋಯಿ ಸರ ಮನೆಗೆ ಬಂದಾಗಿನಿಂದಲೂ ತನ್ನ ಊರಿಗೆ ಹೋಗಬೇಕೆಂದು ಯಾವಾಗಲೂ ಅಂದವನಲ್ಲ. ಈಗ ಹೋಗಬೇಕೆಂದು ಅಪೇಕ್ಷಿಸು ತಾನೆ, ಕಾರಣವೇನೋ ತಿಳಿಯದು. ಬೇಕಾದರೆ ಹೋಗಿಬರಲಿ ಎಂದು ಜೋಯಿಸನು ಒಪ್ಪಿಕೊಂಡನು. ಮದನನು ಸಾಯಂಕಾಲಕ್ಕೆ ತಮ್ಮ ಅರಮನೆಗೆ ಹೋಗಿ ಸೇರಿದನು. ಮಗ ಬಂದದಕ್ಕೆ ತಂದೆಗೆ ಬಹು ಸಂತೋಷವಾಯಿತು. ತಾಯಿಯಂತೂ ಹಿಗ್ಗುತಾ ಮಗನನ್ನು ಮುದ್ದಾಡುವುದಕ್ಕೆ ಆರಂಭಿಸಿದಳು. ಮೂರನೇ ದಿನ ಮದನನು ತಂದೆಯನ್ನು ಕುರಿತು-ಅಪ್ಪಾಜಿ, ನನಗೆ ಸ್ವಲ್ಪ ಹಣಬೇಕು, ಎಂದನು. ದೊರೆಯು—ಮಗುವೆ, ಹಿಡಿ, ಎಂದು ಎರಡು ವರಹವನ್ನು ಕೈಗೆ ಕೊಟ್ಟನು. ಮದನನು—ಜೀಯ, ನನಗೆ ಇಷ್ಟು ಸಾಲದು ಇನ್ನೂ ಹೆಚ್ಚಾಗಿ ಬೇಕು, ಎಂದಮಾತಿಗೆ ಅರಸನು—ಎಂದಿಗೂ ದುಡ್ಡು ಬೇಕೆಂದು ಕೇಳದೇ ಇದ್ದ ನೀನು ಈಗ ಹೆಚ್ಚಾಗಿ ಬೇಕೆಂದು ಕೇಳು ತೀಯಲ್ಲಾ, ಕಾರಣವೇನು? ಎಂದು ಕೇಳಿದನು. ಅದಕ್ಕೆ ಮದನನು —ಜೀಯ, ಒಂದು ಕೆಲಸಕ್ಕಾಗಿ ನನಗೆ ಹಣ ಬೇಕಾಗಿದೆ. ಅದನ್ನು ನಿಮಗೆ ಹೇಳಿದರೆ ನೀವೇ ಒಪ್ಪಿಕೊಳ್ಳುತೀರಿ. ಆದರೆ ಕೆಲಸವಾದಮೇಲೆ ಅದನ್ನು ತಮಗೆ ಅರಿಕೆ ಮಾಡುತೇನೆ ಎಂದನು. ಆಗ ಅರಸಿತ್ತಿಯು— ಇದೆಲ್ಲಾ ರಾಮಜೋಯಿಸರು ಕಲಿಸಿಕೊಟ್ಟ ವಿದ್ಯವೊ? ನಮ್ಮ ಮಗು ಮೊದಲಿಗೆ ಈಗ್ಯೆ ಕೆಟ್ಟು ಹೋದ ಪೂರ್ವದಲ್ಲಿ ದುಡ್ಡು ಬೇಕೆಂದು ಕೇಳು ತಿರಲಿಲ್ಲ. ಈಗ ಅದನ್ನೂ ಕೇಳುತಾನೆ. ಇದ್ದ ಬುದ್ಧಿಯೂ ಹೋಯಿತು. ಉಪಾದ್ರಿಯಿಂದ ಆದ ಉಪಕಾರ ಇದೇಯೆ. ಜೋಯಿಸನಿಗೆ ದುಡ್ಡು ಬೇಕೇನೊ, ಅದಕ್ಕೋಸ್ಕರ ಹೇಳಿ ಕಳುಹಿಸಿದಾನೆ, ಎಂದು ಹರಟಿ ದಳು. ರಾಜಕುಮಾರನು—ಅಮ್ಮಯ್ಯ ಹೀಗೆ ಹೇಳಬೇಡಿ. ಇಷ್ಟ ವಿದ್ದರೆ ಹಣವನ್ನು ಸುಮ್ಮನೆ ಕೊಡಿ. ಇಲ್ಲದಿದ್ದರೆ ಸಾಲವಾಗಿಯಾದರೂ

ಕೊಟ್ಟರಿ. ನಾನು ತೀರಿಸುತೇನೆ, ಎಂದನು. ನೀನು ಹೇಗೆ ತೀರಿಸು ತೀಯೆ, ಎಂದು ದೊರೆ ಕೇಳಲು, ನೀವು ಆಗಾಗ್ಯೆ ವೆಚ್ಚಕ್ಕೆ ನನಗೋಸ್ಕರ ಕಳುಹಿಸುವ ಹಣದಲ್ಲಿ ಈ ಸಾಲವನ್ನು ತೀರಿಸಿಕೊಳ್ಳಿ. ಇದು ತೀರುವತನಕ ವೆಚ್ಚಕ್ಕೆ ನೀವು ಕಳುಹಿಸಬೇಡಿ ಎಂದು ಖಂಡಿತವಾಗಿ ಮಾತನಾಡಿದನು. ಅರಸಿಗೆ ಈ ಮಾತನ್ನು ಕೇಳಿ ಅಸಮಾಧಾನವಾಯಿತು. ಆಗ ಅರಸು ಇಪ್ಪತ್ತೇಳು ವರಹವನ್ನು ತೆಗೆದು ಮಗನಿಗೆ ಕೊಟ್ಟನು.

ದೊರೆಮಗನು ಅದನ್ನು ತೆಗೆದುಕೊಂಡು ರಾಮುಜೋಯಿಸರ ಮನೆಗೆ ಬಂದು ಸುಮತಿಯನ್ನೂ ಕರೆದುಕೊಂಡು, ಬಡಒಕ್ಕಲಗಿತ್ತಿಯ ಮನೆಗೆ ಹೋದನು. ಅದುವರೆಗೆ ಅವಳ ಗಂಡನನ್ನು ಜವಾನರು ಹಿಡಿದುಕೊಂಡು ಹೋಗಿ ಚಾವಡಿಯಲ್ಲಿ ಕೂರಿಸಿದ್ದರು. ಮನೆ ಮಕ್ಕಳೆಲ್ಲಾ ಹಿಟ್ಟನ್ನು ತಿಂದು ಎರಡು ದಿವಸವಾಗಿತ್ತು. ಯಜಮಾನಿಯು ಒಳಗೆ ಕೂತು ಅಳುತಾ ಇದ್ದಳು. ಮದನನು ಅವಳ ಸಮೀಪದಲ್ಲಿ ನಿಂತುಕೊಂಡು—ಅಮ್ಮಾ ಅಳಬೇಡ. ಈ ಹಣವನ್ನು ಕೊಟ್ಟು ಸಾಲವನ್ನು ತೀರಿಸಿ ನಿನ್ನ ಗಂಡನನ್ನು ಬಿಡಿಸಿಕೊಂಡು ಬಾ, ಎಂದು ಆ ಇಪ್ಪತ್ತೇಳು ವರಹಗಳನ್ನೂ ಅವಳ ಮುಂದೆ ಸುರಿದನು. ಇದನ್ನು ಕಂಡು ಆ ಶೂದ್ರಿತ್ತಿಗೆ ಬಹು ಸಂತೋಷವಾಯಿತು. ಕೊನೆಗೆ ಮದನನ ಕಾಲನ್ನು ಕಟ್ಟಿಕೊಂಡು, ಅವ ಮಾಡಿದ ಉಪಕಾರಕ್ಕೆ ಅಡ್ಡಡ್ಡ ಬಿದ್ದು ಆ ಹಣವನ್ನು ಕಚೇರಿಗೆ ಕೊಟ್ಟು ಗಂಡನನ್ನು ಬಿಡಿಸಿಕೊಂಡು ಬಂದಳು. ಆ ಗೌಡನು ಹಣ ಎಲ್ಲಿತ್ತು ಎಂದು ಕೇಳಲಾಗಿ—ನಮ್ಮ ಭಾಗದ ಈಶ್ವರನಹಾಗೆ ಬಂದ ಈ ಮಗುವು ಹಣವನ್ನು ಕೊಟ್ಟನೆಂದು ಗಂಡನಿಗೆ ಹೇಳಿದಳು. ಆಗ ಗವುಡನೂ ಸಹಿತ ಸುಮತಿ ಆ ಮದನಕುಮಾರ ಇವರಿಬ್ಬರ ಕಾಲಿಗೂ ಬಿದ್ದು—ಸ್ವಾಮಿ, ನಮ್ಮ ಮಕ್ಕಳು ಮರಿಯೆಲ್ಲಾ ನಿಮ್ಮಿಂದ ಉಳಿದೆವು. ಇಲ್ಲದಿದ್ದರೆ, ಸತ್ತುಹೋಗುತಿದ್ದೆವು. ನಿಮ್ಮ ಹೆಸರು ಹೇಳಿ ನಾವು ದೀಪಾ ಹತ್ತಿಸುತ್ತೇವೆ, ಎಂದು ಅವರನ್ನು ಕೊಂಡಾಡಿದನು. ಸುಮತಿ ಮದನಕುಮಾರರಿಬ್ಬರೂ ಊರಿಗೆ ಬಂದು ಬಿಟ್ಟರು.

ಜೋಯಿಸನು ತಂದೇ ಮನೆಯಿಂದ ಮದನ ಬಂದನೆಂದು ತಿಳಿದು ಅವನನ್ನು ಬಹು ಪ್ರೀತಿಯಿಂದ ಕಂಡು, ಅರಸೂ, ರಾಣಿಯೂ ಸುಖವಾಗಿದಾರೆಯೆ ಎಂದು ಕ್ಷೇಮಲಾಭವನ್ನು ವಿಚಾರಿಸಿ, ಸುಲೇಮಾನನ ಕಥೆಯನ್ನು ಮುಂದಕ್ಕೆ ಹೇಳುತೇನೆ ಕೇಳು, ಎಂದು ಹೇಳುವುದಕ್ಕೆ ಮೊದಲುಮಾಡಿದನು.

---

## ೧೧ ನೆ ಅಧ್ಯಾಯ

[ ಸುಲೇಮಾನನ ಕಥೆ ಮುಂದೆ ಸಾಗಿದ್ದು ]

ಆಮೇಲೆ ಮುಲ್ತಾನಿ ಸಾಹುಕಾರನು ಮೊದಲು ತಾನು ವಾಗ್ದಾನ ಮಾಡಿದ್ದ ಪ್ರಕಾರಕ್ಕೆ ತನ್ನ ಮಗನ ಪ್ರಾಣವನ್ನು ಉಳಿಸಿಕೊಟ್ಟ ಸುಲೇಮಾನನಿಗೆ ತನ್ನ ಆಸ್ತಿಯಲ್ಲಿ ಅರ್ಧವನ್ನು ತೆಗೆದುಕೊಳ್ಳೆಂದು ಬಹಳವಾಗಿ ಉಪಚರಿಸಿದನು. ಆದರೆ ಸುಲೇಮಾನನು ಸಾಹುಕಾರನ ಮಾತಿಗೆ ಸ್ವಲ್ಪ ಉದಾರವಾದ ಮನಸ್ಸನ್ನೂ, ಸ್ವಲ್ಪ ತಿರಸ್ಕಾರಭಾವವನ್ನೂ ತೋರಿಸುತಾ, ಹೇಳಿದ್ದೇನೆಂದರೆ:—ತಾವು ನನಗೆ ಮಹತ್ತರವಾದ ಉಪಕಾರವನ್ನು ಮಾಡಿದಿರಿ; ಅದಕ್ಕಾಗಿ ನನ್ನ ಪ್ರಾಣವೇ ತಮ್ಮದಾಗಿದೆ. ತಮ್ಮ ಸೇವೆಯನ್ನು ಮಾಡುವುದರಲ್ಲಿ ಈ ದೇಹ ಹೋಗಿದ್ದರೆ ಚೆನ್ನಾಗಿತ್ತು. ಆದರೆ ದೇವರ ಚಿತ್ತಕ್ಕೆ ಬರಲಿಲ್ಲ. ಆದಾಗ್ಯೂ ತಮ್ಮ ಉಪಕಾರವನ್ನು ನಾನು ಮರೆಯಲಿಲ್ಲವೆನ್ನುವಹಾಗೆ ನನಗೆ ಸಮಯ ದೊರೆಯಿತಲ್ಲಾ, ಅದಕ್ಕೆ ನಾನು ಕೃತಜ್ಞನಾಗಿರಬೇಕು, ಹೀಗೆಂದನು.

ಆದರೂ ಸಾಹುಕಾರನು ತುರುಕನ ಉಪಾಯವನ್ನು ಮರೆಯಲಿಲ್ಲ. ಆ ಮುಲ್ತಾನಿಯು ಮತ್ತೆ ಸೆರೆಬಿದ್ದಿದ್ದ ಸುಲೇಮಾನನನ್ನು ಬಿಡಿಸಿಕೊಂಡು, ಅವನಿಗೆ ಬೇಕಾದ ಉಪಚಾರವನ್ನು ಮಾಡಿ ಅವನ ದೇಶಕ್ಕೆ ಕಳುಹಿಸಿಕೊಟ್ಟನು.

ತರುವಾಯ ಕೆಲವುಕಾಲ ಕಳೆದುಹೋಯಿತು. ಸಾಹುಕಾರನ

ಮಗನು ದೊಡ್ಡವನಾದನು. ಇವನು ವಿದ್ಯಾವಂತನಾಗಿಯೂ, ಬುದ್ಧಿವಂತನಾಗಿಯೂ ಇರುತಾ, ತನ್ನ ತಂದೆಯ ಸಂಗಡ ಸೇರಿ ಬಹಳವಾಗಿ ವ್ಯಾಪಾರವನ್ನು ಮಾಡುತಿದ್ದನು. ಒಂದಾನೊಂದು ಸಮಯದಲ್ಲಿ ಇರಾಕ್ ದೇಶಕ್ಕೆ ವ್ಯಾಪಾರಕ್ಕೋಸ್ಕರ ಇವರಿಬ್ಬರೂ ಹೊರಡಬೇಕಾಗಿ ಬಂತು. ಆದರೆ ದುರುಳರಾದ ಮುಸಲ್ಮಾನ್ ಶತ್ರುಗಳ ಕಾಟ, ಛಳಿ ಮತ್ತು ಮಾರ್ಗದಲ್ಲಿ ಉಂಟಾಗುವ ಇತರ ತೊಂದರೆ, ಇವುಗಳಿಂದ ಆಫ್ಘನಿಸ್ಥಾನದಮೇಲೆ ಹಾದುಹೋಗುವ ದಾರಿಯನ್ನು ಬಿಡಬೇಕಾಗಿ ಬಂತು. ಆದ್ದರಿಂದ ತಂದೆ ಮಕ್ಕಳಾದ ಸಾಹುಕಾರರಿಬ್ಬರೂ ಹಡಗಿನಲ್ಲಿ ಕೂತು ಸಿಂಧುನದಿಯ ಮೇಲೆ ಹೊರಟು, ಅರಬೀಸಾಗರದ ಮೇಲೆ ಹಾದು, ಪಾರ್ಷಿಕೊಲ್ಲಿಯ ಮಾರ್ಗವಾಗಿ ಈರಾನಿಗೆ ಹೋಗಬೇಕೆಂದು ಹೊರಟರು. ಜಹಜು ಸಿಂಧುನದಿಯನ್ನೂ ಅರಬೀಸಾಗರವನ್ನೂ ದಾಟಿ ಪಾರ್ಷಿಕೊಲ್ಲಿಯ ಸಮೀಪದಲ್ಲಿ ಹೋಗುತಿರುವಾಗ ಸಮುದ್ರದ ಕಳ್ಳರಾದ ಕೆಲವು ಮುಸಲ್ಮಾನರು ಎರಡು ಹಡಗುಗಳನ್ನು ವೇಗವಾಗಿ ತಂದು ಸಾಹುಕಾರನ ಹಡಗಿನಮೇಲೆ ಬಿದ್ದು ಹಿಂದೂ ಜನರನ್ನು ಕೊಲ್ಲಲು ಮೊದಲುಮಾಡಿದರು. ಆದರೆ ಸಾಹುಕಾರನ ಮಗನು ತಮ್ಮ ಕಡೆ ಜನರಿಗೆ ಧೈರ್ಯವನ್ನು ಹೇಳಿ ಅವರನ್ನೂ ಕಟ್ಟಿಕೊಂಡು ಅನೇಕ ತುರುಕರನ್ನು ಹೊಡೆದು ಆ ಎರಡು ಹಡಗುಗಳನ್ನು ನಾಶ ಮಾಡಿದನು. ಆ ರೋಷದಿಂದ ಕೆಲವು ಕಳ್ಳರು ತಪ್ಪಿಸಿಕೊಂಡು ಹೋಗಿ ಇನ್ನೂ ಕೆಲವು ಹಡಗುಗಳನ್ನು ತಂದು ಹಿಂದುಗಳನ್ನು ಜೈಸಿ, ಹಡಗನ್ನೆಲ್ಲಾ ಲೂಟಿಮಾಡಿ ಅಲ್ಲಿದ್ದವರನ್ನು ಕೈಸೆರೆ ಹಿಡಿದು, ತುರ್ಕೀ ದೇಶಕ್ಕೆ ಕರೆದುಕೊಂಡುಹೋಗಿ ಅಂಗಡಿಯಲ್ಲಿ ಸಾಮಾನನ್ನು ಮಾರುವಂತೆ ಈ ಜನರನ್ನು ಗುಲಾಮರಹಾಗೆ ಮಾರಲು ಬೊಗದಾದ್ ಪಟ್ಟಣದ ಪೇಟೆಯಲ್ಲಿ ಇರಿಸಿದರು. ಅಲ್ಲಿಗೆ ತುರ್ಕೀ ಸಾಹುಕಾರರು ಬಂದು ತಮಗೆ ಬೇಕಾದ ಗುಲಾಮರನ್ನು ಆರಿಸಿಕೊಂಡು, ಅವರ ಕ್ರಯವನ್ನು ಕೊಟ್ಟು ಅವರನ್ನು ಕರೆದುಕೊಂಡು ಹೋಗುತಿದ್ದರು.

ಹೀಗಿರುವಲ್ಲಿ ಧಾರಾಳವಾದ ಮನಸ್ಸುಳ್ಳವನಾಗಿ ಗಂಭೀರವಾಗಿ ಕಾಣಿಸುತಾ, ದೊಡ್ಡ ಪದವಿಯಲ್ಲಿ ಇರತಕ್ಕವನಹಾಗೆ ತೋರುತಿದ್ದ ಒಬ್ಬ

ಪುರುಷನು ಸ್ವಲ್ಪ ಪರಿವಾರದೊಡನೆ ಅಲ್ಲಿ ಬಂದು ನಿಂತು, ಗುಲಾಮ ರನ್ನಾಗಿ ಮಾರುವುದಕ್ಕೆ ನಿಲ್ಲಿಸಿದ್ದ ಜನರನ್ನು ಒಬ್ಬೊಬ್ಬರನ್ನಾಗಿ ನೋಡುತಾ ಬಂದನು. ಆಗ ಮುಲ್ತಾನೀ ಸಾಹುಕಾರನ ಮಗನನ್ನು ತೋರಿಸಿ, ಅವನ ಬೆಲೆ ಎಷ್ಟೆಂದು-ಮಾರುತಿದ್ದ ಸೆಟ್ಟಿಯನ್ನು ಕೇಳಿದನು. ಆ ವರ್ತಕನು ಅವನ ಬೆಲೆ ಹತ್ತುಸಾವಿರ ವರಹವೆನಲು, ಆ ಪುರು ಷನು—ಅಯ್ಯಾ ದೇಶದಲ್ಲಿ ಇವನಿಗಿಂತಲೂ ನಾಲ್ಕರಷ್ಟು ಶಕ್ತಿ ಹೆಚ್ಚಾ ಗಿರತಕ್ಕ ಜನರನ್ನು ನೂರುವರಹಾದ ಪ್ರಕಾರ ಮಾರಿದೆ. ಈಗ ಇವನಿಗೆ ಮಾತ್ರ ಒಂದಕ್ಕೆ ನೂರಾಗಿ ಹೇಳುತೀಯೆ, ಎಂದನು. ಆ ಮಾತಿಗೆ ವರ್ತಕನು—ಸ್ವಾಮಿ, ಇವನು ಶಕ್ತಿವಂತನಲ್ಲ, ನಿಜ, ಆದಾಗ್ಯೂ ಇವ ನಿಂದ ನಾನು ಶಾನೆ ನಷ್ಟಪಟ್ಟೆದೇನೆ. ಈ ಜನರನ್ನೆಲ್ಲಾ ಸಮುದ್ರದ ಮೇಲೆ ನಾವು ಹಿಡಿದೆವು. ಈಗ ನೀವು ಕ್ರಯಕ್ಕೆ ಕೇಳುತಿರುವ ಹಿಂದುವು ಆ ಹಡಗಿನಮೇಲಿದ್ದ ಜನರನ್ನೆಲ್ಲಾ ಎತ್ತಿಕಟ್ಟಿ, ನಮ್ಮ ಜನರು ಅನೇಕ ರನ್ನು ಕೊಲ್ಲಿಸಿದನು. ತಾನೂ ನಮ್ಮವರನ್ನು ಬಹಳವಾಗಿ ಕೊಂದನು. ಆದ್ದರಿಂದ ಇವನಿಂದ ಹತ್ತುಸಾವಿರ ವರಹವೇ ಬರಬೇಕು, ಇಲ್ಲ ಇವ ಸಾಯುವ ತನಕ ಇವನ ಕೈಯಲ್ಲಿ ಕತ್ತೆಚಾಕರಿಯನ್ನು, ನಾನು ಮಾಡಿಸಬೇಕು; ಎಂದನು. ಆಗ ಆ ಪುರುಷಶ್ರೇಷ್ಠನು, ಈ ಸಮು ದ್ರದ ಕಳ್ಳರನ್ನು ಅಷ್ಟರಮಟ್ಟಿಗೆ ಎದುರಿಸಿದ ಆ ಹಿಂದುವು ಯಾರೆಂದು ಚೆನ್ನಾಗಿ ದೃಷ್ಟಿಸಿ ನೋಡಿದನು. ಅದುವರೆಗೂ ತಲೆಯನ್ನು ಬಗ್ಗಿಸಿ ಕೊಂಡು ನೆಲವನ್ನೇ ನೋಡುತಿದ್ದ ಮುಲ್ತಾನಿ ಸಾಹುಕಾರನ ಮಗನು, ಕತ್ತೆತ್ತಿ ಆ ಮನುಷ್ಯನನ್ನು ನೋಡಿ, ತಟ್ಟನೆ ಸುಲೇಮಾನ್ ಎಂದು ಗಟ್ಟಿಯಾಗಿ ಕೂಗಿದನು. ಆ ಗಳಿಗೆಯಲ್ಲಿಯೇ ಆ ಮನುಷ್ಯನೂ ಸಹಿತ ಇವನ ಗುರುತನ್ನು ಕಂಡುಹಿಡಿದು ಹೋಗಿ ಗಟ್ಟಿಯಾಗಿ ತಬ್ಬಿ ಕೊಂಡನು. ಇವರಿಬ್ಬರೂ ಪರಸ್ಪರ ಬಹುದಿವಸ ಕಾಣದೇ ಇದ್ದ ತಂದೆಮಕ್ಕಳೊ, ಎಂದು ಅಲ್ಲಿದ್ದವರು ಊಹಿಸುವ ಹಾಗಾಯಿತು. ಮುಲ್ತಾನಿ ಸಾಹುಕಾರನು ತನಗೆ ಮಾಡಿದ ಉಪಕಾರವೆಲ್ಲಾ ಸುಲೇ ಮಾನನ ಜ್ಞಾಪಕಕ್ಕೆ ಬಂತು. ಸುಲೇಮಾನನ ಕೃತಜ್ಞತೆಯು ಉಕ್ಕಿ ಬಂತು. ವೃದ್ಧನಾದ ಮುಲ್ತಾನೀ ಸಾಹುಕಾರನೂ ಆ ಖೈದಿಗಳ

ಗುಂಪಿನಲ್ಲಿ ಸೇರಿದ್ದನು. ಸುಲೇಮಾನನು ಆ ಮುದುಕನಿಗೆ ನಮಸ್ಕಾರ ವನ್ನು ಮಾಡಿ,—ಅಯ್ಯಾ ನೀವು ನಮ್ಮ ತಂದೆಗಿಂತಲೂ ಹೆಚ್ಚು; ನನ್ನ ಪ್ರಾಣವನ್ನು ಎರಡುಸಾರಿ ಉಳಿಸಿದಿರಿ. ಎರಡುಸಾರಿ ನಮಗೆ ಸೆರೆಯಿಂದ ಬಿಡುಗಡೆಮಾಡಿಸಿದಿರಿ. ತಮ್ಮ ಸೀಮೆಯನ್ನು ಬಿಟ್ಟು ನಾನು ಇಲ್ಲಿಗೆ ಬಂದಮೇಲೆ ಈ ದೇಶದಲ್ಲಿ ಒಂದು ಯುದ್ಧವಾಗುತಿತ್ತು. ಅದರಲ್ಲಿ ನಾನು ಒಬ್ಬ ಸಿಪಾಯಿಯಾಗಿ ಸೇರಿದೆ. ಕದನದಲ್ಲಿ ಮುಂದಾ ಳಾದೆ. ಅದರಿಂದ ಸೇನಾಧಿಪತ್ಯವನ್ನು ಕೊಟ್ಟರು. ಇನ್ನೊಂದು ಯುದ್ಧದಲ್ಲಿ ನಾನು ಪರಾಕ್ರಮವನ್ನು ತೋರಿಸಿ ಶತ್ರುಗಳನ್ನು ಜೈಸಿದೆ. ಆಗ ಈ ದೇಶಸ್ಥರೆಲ್ಲರೂ ನನ್ನ ಮೇಲೆ ಸಂಪೂರ್ಣವಾದ ದಯವಿಟ್ಟು, ಈ ರಾಜ್ಯದ ದೊರೆತನವನ್ನು ನನಗೆ ಕೊಟ್ಟರು. ಆಗಿನಿಂದಲೂ ನಾನು ಇಲ್ಲಿ ದೊರೆಯಾಗಿದೇನೆ, ಎಂದನು.

ಹೀಗೆ ಆಡಿದ ಸುಲೇಮಾನನ ಮಾತಿನಿಂದ ಅಲ್ಲಿದ್ದ ಜನರೆಲ್ಲ ರಿಗೂ ಆಶ್ಚರ್ಯವಾಯಿತು. ಎಲ್ಲೆಲ್ಲಿದ್ದವರು ಅಲ್ಲಲ್ಲಿಯೇ ಬೆರಗಾಗಿ ನಿಂತುಕೊಂಡರು. ತರುವಾಯ ಸುಲೇಮಾನನು ಆ ತಂದೆಮಕ್ಕಳಿಬ್ಬ ರನ್ನೂ ಹಣಕೊಟ್ಟು ಬಿಡಿಸಿಕೊಂಡು ಹೋಗಿ ತನ್ನ ಅರಮನೆಯಲ್ಲಿ ಅವರಿಗೆ ವಿಶೇಷವಾಗಿ ಉಪಚಾರವನ್ನು ಮಾಡಿ, ಸಾಹುಕಾರನನ್ನು ಕುರಿತು—ಸ್ವಾಮಿ, ತಾವು ಮಾಡಿದ ಉಪಕಾರವನ್ನು ಎಂದೆಂದಿಗೂ ಮರೆಯಲಾರೆ. ಈ ದೇಹವೆಲ್ಲಾ ತಮ್ಮದೇ. ತಾವು ಮಾಡಿದ ಕುಂಬಳಕಾಯಿನಷ್ಟು ಉಪಕಾರಕ್ಕೆ ಒಂದು ಸಾಸಿವೆಯಷ್ಟು ಪ್ರತ್ಯುಪ ಕಾರವನ್ನು ಮಾಡಲು ನನಗೆ ದೊರೆತ ಸಮಯ ದೇವರ ದಯದಿಂದಲೇ ದೊರೆಯಿತೇ ಹೊರತು ಮನುಷ್ಯಪ್ರಯತ್ನದಿಂದಲ್ಲ. ನಾನು ಈ ದೇಶಕ್ಕೆ ಅರಸಾದಾಗಿನಿಂದಲೂ ಗುಲಾಮರಾಗಿ ಮಾಡಲ್ಪಟ್ಟ ಯಾವ ಹಿಂದು ವನ್ನು ಕಂಡರೂ, ಅವರಿಗೋಸ್ಕರ ಹಣವನ್ನು ಕೊಟ್ಟು ಅವರ ಬಂಧ ವನ್ನು ತಪ್ಪಿಸಿ, ಹಿಂದೂಸ್ಥಾನಕ್ಕೆ ಕಳುಹಿಸುತಾ ಇದೇನೆ ಎಂದು ಹೇಳಿ ದನು. ಮತ್ತು ತಂದೆಮಕ್ಕಳಾದ ಸಾಹುಕಾರರಿಗೂ ಬೇಕಾದಷ್ಟು ಐಶ್ವರ್ಯವನ್ನು ಕೊಟ್ಟು ಬಹುಮಾನವನ್ನು ಮಾಡಿ ಅವರ ಸಂಗಡ ಸೆರೆ ಯಲ್ಲಿದ್ದವರೆಲ್ಲರನ್ನೂ ಬಿಡುಗಡೆ ಮಾಡಿಸಿ, ಎಲ್ಲರನ್ನೂ ಒಟ್ಟಿಗೆ ಹಿಂದೂ ಸ್ಥಾನಕ್ಕೆ ಪ್ರಯಾಣಮಾಡಿ ಕಳುಹಿಸಿಕೊಟ್ಟನು.

ಈ ಪ್ರಕಾರ ಸುಲೇಮಾನನ ಕಥೆ ಮುಗಿಯಿತು. ತರುವಾಯ ಸುಮತಿ ಮದನಕುಮಾರರಿಬ್ಬರೂ ಗುರುವಾದ ರಾಮಜೋಯಿಸನೂ ಪೇಟೆಗೆ ಹೊರಟರು. ದೂರದಲ್ಲಿ ಒಂದು ಗುಂಪು ಬರುತಿತ್ತು. ಅವರ ಮಧ್ಯೆ ಒಬ್ಬ ಮನುಷ್ಯನು ಒಂದು ಕರಡಿಯನ್ನು ಹಿಡಿದುಕೊಂಡು ಬರುತಿದ್ದನು. ಆ ಕರಡಿಯು ಆ ಮನುಷ್ಯ ಹೇಳಿದಹಾಗೆ ನಿಂತು ಕೊಳ್ಳುವುದೂ, ಲಾಗಾ ಹಾಕುವುದೂ ಹೀಗೆಲ್ಲಾ ಮಾಡುತಿತ್ತು. ಅದು ವರೆಗೂ ಕರಡಿಯನ್ನು ಕಾಣದೇ ಇದ್ದ ಮದನನು—ಜೋಯಿಸರೆ, ಈ ಕರಡಿ ಕೆಟ್ಟ ಮೃಗವೆ? ಇದನ್ನು ಸಾಕಿ ಒಗ್ಗಿಸಿಕೊಳ್ಳಬಹುದೆ? ಎಂದು ಕೇಳಿದನು. ಅದಕ್ಕೆ ಜೋಯಿಸನು—ಅಯ್ಯ, ಹುಲಿ, ಸಿಂಹ, ಎಂಥಾ ಕೆಟ್ಟಮೃಗಗಳೊ, ಕರಡಿ ಅಂಥಾ ಕೆಟ್ಟ ಮೃಗವಲ್ಲ. ಆದರೂ ಇದು ಕೆಟ್ಟದೇ ಹೌದು. ಹಿಮಾಚಲ ಪರ್ವತಕ್ಕೆ ಉತ್ತರದಲ್ಲಿರುವ ರಾಜ್ಯದ ಕರಡಿಗಳು ಹೆಂಗಸರನ್ನೂ ಸಣ್ಣ ಮಕ್ಕಳನ್ನೂ ಸಹ ಕೊಂದು ತಿಂದು ಬಿಡುವವು. ಈ ಉತ್ತರದೇಶದ ಕರಡಿಯು ಹಿಂದೂಸ್ಥಾನದ ಕರಡೀ ಹಾಗೆ ಕಪ್ಪಾಗಿರುವುದಿಲ್ಲ. ಮಾಸಲುವರ್ಣವಾಗಿರುವುದು. ಒಂದಾ ನೊಂದು ಕರಡಿಯು ತನ್ನ ಎರಡು ಮರಿಗಳನ್ನೂ ಕರೆದುಕೊಂಡು ಕಾಡಿನಲ್ಲಿ ಬಂತು. ಊರಿಗೆ ಹೋಗುತಿದ್ದ ಮಾರ್ಗಸ್ಥರು ಒಂದು ಕಡೆ ಇಳಿದು, ಅಡಿಗೆಯನ್ನು ಮಾಡಿಕೊಂಡು ಊಟಕ್ಕೆ ಕೂತು ಕೊಂಡರು. ಆ ಕರಡಿಯು ಅಲ್ಲಿಗೆ ಬಂತು. ಅದನ್ನು ಕಂಡು ಜನರು ಓಡಿ ಹೋದರು. ಅವರು ಬಡಿಸಿಕೊಂಡಿದ್ದ ಅನ್ನವನ್ನು ಕರಡಿಯು ತೆಗೆದುಕೊಂಡು ಹೋಗುವುದಕ್ಕೆ ಮೊದಲು ಮಾಡಿತು. ತಮ್ಮ ಎಲೇ ಅನ್ನ ಹೋಯಿತಲ್ಲಾ ಎಂದು ದುಃಖದಿಂದ ಈ ಜನರು ತಮ್ಮ ಹತ್ತಿರಿದ್ದ ಒಂದು ಕೋವಿಯನ್ನು ಹಾರಿಸಿ, ಆ ಕರಡೀ ಮರಿ ಗಳನ್ನು ಕೊಂದರು. ದೊಡ್ಡ ಕರಡಿಗೂ ಒಳ್ಳೇ ಆಯಕ್ಕೆ ಏಟು ಬಿದ್ದು ಅದೂ ನಡೆಯಲಾರದಹಾಗಾಯಿತು. ದೊಡ್ಡ ಕರಡಿಯು ತನ್ನ ಏಟನ್ನು ಸಹಿಸಿಕೊಂಡು ಮೆಲ್ಲಗೆ ತೆವಳಿಕೊಂಡು ಹೋಗಿ ತನ್ನ ಮರಿಗಳ ಬಾಯಿಗೆ ಅನ್ನವನ್ನು ತೋರಿಸುವುದೂ, ಅವುಗಳನ್ನು ಮೇಲಕ್ಕೆ ಎತ್ತಿ ಕೊಳ್ಳುವುದೂ, ಕೆಳಗೆ ಮಲಗಿಸುವುದೂ, ಸ್ವಲ್ಪ ದೂರ ತೆವಳಿಕೊಂಡು

ಹೋಗಿ ಒಂದು ಬಗೇ ಕೂಗನ್ನು ಕೂಗಿ ಮರಿಗಳನ್ನು ಕರೆಯುವುದೂ, ಮತ್ತೆ ಬಂದು ಆ ಮರಿಗಳ ಗಾಯವನ್ನು ನೆಕ್ಕುವುದೂ, ಹೊ! ಎಂದು ಅಳುವುದೂ, ಆ ಸತ್ತುಹೋದ ಮರಿಗಳು ಏನುಮಾಡಿದರೂ ಮೇಲಕ್ಕೆ ಏಳದೇ ಇರುವುದನ್ನು ಕಂಡು, ಕೋವಿಯಿಂದ ಹೊಡೆದ ಜನರ ಕಡೆಗೆ ತಿರುಗಿ, ಗುರ್ರೆಂದು ಕೋಪದಿಂದ ಆರ್ಭಟಿಸುವುದೂ, ಹೀಗೆ ಮಾಡಿತು. ಮರಿಗಳ ಮೇಲಿನ ಪ್ರೇಮದಿಂದ ತನ್ನ ಯಾತನೆಯನ್ನೂ ಮರೆತು, ಅವುಗಳನ್ನು ಕೊಂದ ಜನರನ್ನು ದುರದುರನೆ ನೋಡಿತು. ಅವರು ಮತ್ತೆ ಕೋವಿಯನ್ನು ಬಾರುಮಾಡಿ, ಇದರ ಮೇಲೆ ಹಾರಿಸಿದರು. ಕರಡಿಯು ಆ ಏಟನ್ನು ತಿಂದು ತನ್ನ ಮರಿಗಳ ಮೇಲೆ ಬಿದ್ದು ಅವುಗಳಿಗೆ ಆದ ಘಾಯವನ್ನು ನೆಕ್ಕುತಾ ಪ್ರಾಣವನ್ನು ಬಿಟ್ಟಿತು. ಹೀಗೆಂದು ಜೋಯಿಸರು ಹೇಳಿದರು.

ಆಗ ಸುಮತಿಯು—ಮನುಷ್ಯರು ಬಡಜಂತುಗಳ ಮೇಲೆ ಇಂಥಾ ಕ್ರೌರ್ಯವನ್ನು ತೋರಿಸಬಹುದೆ? ಎನಲು, ಜೋಯಿಸ–ನಿನ್ನ ಮಾತು ನಿಜ. ಮೃಗಗಳನ್ನು ಹಿಂಸೆಮಾಡುವುದರಲ್ಲಿ ಮನುಷ್ಯರು ಸಂತೋಷ ಪಡುವರು. ಒಂದೊಂದು ಸಮಯದಲ್ಲಿ ಯಾವ ಪ್ರಯೋಜನವೂ ಇಲ್ಲ ದಿದ್ದಾಗ್ಯೂ ಬೇಕುಬೇಕೆಂದು ಅವುಗಳನ್ನು ಕೊಲ್ಲುವರು. ಆದಾಗ್ಯೂ ದುಷ್ಟ ಮೃಗಗಳಿಂದ ನಮಗೆ ಇರುವ ಪ್ರಾಣಭಯವು ಅವುಗಳು ನಿರಪರಾಧಿಗಳಾಗಿದ್ದಾಗ್ಯೂ, ಆ ಜಂತುಗಳನ್ನು ಕೊಲ್ಲುವಂತೆ, ನಮಗೆ ಬುದ್ಧಿ ಹುಟ್ಟಿಸುವುದು, ಕೆಟ್ಟ ಮೃಗಗಳು ನಮಗೆ ಹಿಂಸೆಯನ್ನು ಕೊಡುವವು. ಹಿಂಸೆಕೊಡುವಂಥಾ ಜಂತುಗಳಲ್ಲಿ ನಮಗೆ ದ್ವೇಷ ಹುಟ್ಟುವುದು. ಈ ದ್ವೇಷದಿಂದಲೇ ಆ ಮೃಗಗಳ ಪ್ರಾಣವನ್ನು ಸಮಯ ಸಿಕ್ಕಿದಾಗ ತೆಗೆಯುವೆವು, ಎಂದು ಹೇಳಿದನು. ಆಗ ಸುಮತಿಯು—ಆ ಮೃಗಗಳು ನಮ್ಮ ಮೇಲೆ ಬಿದ್ದರೆ ಅವುಗಳನ್ನು ನಾಶಮಾಡುವುದಕ್ಕೆ ಸಿದ್ಧವಾಗಿರುವಂತೆ ಆಯುಧಗಳನ್ನು ನಾವು ಹತ್ತಿರ ಇರಿಸಿಕೊಂಡಿದ್ದರೆ ಸಾಕು. ನಮ್ಮ ಗೋಜಿಗೆ ಅವು ಬರದೇ ಇರುವಾಗಲೂ ಆ ಬಡಜಂತುಗಳ ಪ್ರಾಣವನ್ನು ತೆಗೆಯುವುದು ಯಾವ ನ್ಯಾಯ? ಎಂದನು. ಇದನ್ನು ಕೇಳಿ—ಮಗು, ಸತ್ಪುರುಷರು ತಮ್ಮ

ಶತ್ರುವನ್ನು ಸಹಿತ ದಯೆಯಿಂದ ನೋಡುತಾರೆಯೇ ಹೊರತು ನಾಶ ಮಾಡುವುದಿಲ್ಲ, ಎಂದು ಜೋಯಿಸ ಉತ್ತರ ಕೊಟ್ಟನು.

ಹೀಗೆ ಇಬ್ಬರೂ ಮಾತನಾಡುತಿರುವಾಗ ಜನಗಳು ಗಾಬರಿಯಿಂದ ದಿಕ್ಕು ದಿಕ್ಕಿಗೆ ಓಡಿ ಹೋಗುತಿದ್ದರು. ಇದಕ್ಕೆ ಕಾರಣವೇನೆಂದು ನೋಡುವಲ್ಲಿ ಒಂದು ಕರಡಿ ಸರಪಣಿಯನ್ನು ಕಿತ್ತುಕೊಂಡು ಓಡಿ ಬರುತಿತ್ತು. ಅದನ್ನು ನೋಡಿ, ರಾಮಜೋಯಿಸನು ಓಡಿ ಹೋಗಿ, ತನ್ನ ಕೈಕಟ್ಟಿಗೆಯಿಂದ ಅದನ್ನು ಹೆದರಿಸಿ ಮಧ್ಯದಾರಿಯಲ್ಲಿ ನಿಲ್ಲಿಸಿದನು. ಕರಡಿಯು ಕೋಪದಿಂದ ಇವನ ಮೇಲೆ ಬೀಳುವುದಕ್ಕೆ ಬಂತು. ಜೋಯಿಸನು ಗಟ್ಟಿಯಾಗಿ ಕೂಗಿ ಗದರಿಸುತಾ ದೊಣ್ಣೆಯಿಂದ ಅದಕ್ಕೆ ಮೂರು ನಾಲ್ಕು ಬಲವಾದ ಏಟನ್ನು ಕೊಟ್ಟು, ಅದು ಎಳಕೊಂಡು ಬರುತಿದ್ದ ಸರಪಣಿಯ ಕೊನೆಯನ್ನು ಹಿಡಿದುಕೊಂಡನು. ಅಷ್ಟರಲ್ಲಿ ಕರಡಿಸಾಕುವವನು ಓಡಿಬಂದನು. ಅವನ ಕೈಗೆ ಜೋಯಿಸನು ಸರಪಣಿಯನ್ನು ಕೊಟ್ಟು ಮುಂದಕ್ಕೆ ಹೀಗೆ ಬಿಟ್ಟುಬಿಡದೆ ಜಾಗ್ರತೆಯಾಗಿರೆಂದು ಹೇಳಿದನು.

ಆಗ ಈ ಕರಡಿಯ ಸಂಗಡ ತನ್ನ ಹಗ್ಗವನ್ನು ಕಿತ್ತುಕೊಂಡು ಒಂದು ಕೋತಿಯು ಓಡಿಬರುತಿತ್ತು. ಮದನನು ಧೈರ್ಯದಿಂದ ಓಡಿ ಹೋಗಿ ಅದನ್ನು ನಿಲ್ಲಿಸಿದನು. ಅದು ಇವನನ್ನು ಕಚ್ಚುವುದಕ್ಕೆ ಬಂತು. ಇವನು ದೊಣ್ಣೆಯಿಂದ ಅದಕ್ಕೆ ಎರಡು ಏಟನ್ನು ಹೊಡೆದು ಹಗ್ಗವನ್ನು ಹಿಡಿದುಕೊಂಡನು. ಕಪಿಯು ಇವನಿಗೆ ಹೆದರಿಕೊಂಡು ನಿಂತುಕೊಂಡಿತು. ಅದನ್ನು ಅದರ ಪಾಲಕನು ಕರೆದುಕೊಂಡು ಹೊರಟು ಹೋದನು. ಆಗ

ಮದನ–ಜೋಯಿಸರೆ, ಈ ಜಂತುಗಳು ಕಿತ್ತುಕೊಂಡು ಹೋಗುತಿರುವಾಗ ನಾವು ನಿಲ್ಲಿಸುವುದು ಅಪಾಯಕರವಲ್ಲವೆ ?

ಜೋಯಿಸ—ಅಪಾಯವೇನೋ ಉಂಟು. ಆದರೆ ಅದರಿಂದ ಎಷ್ಟು ಅಪಾಯ ಉಂಟಾಗುವುದೆಂದು ಜನರು ತಿಳಿದಿದ್ದಾರೊ, ಅಷ್ಟಿಲ್ಲ. ನಾವು ಧೈರ್ಯಮಾಡಿ ಮುಂದಕ್ಕೆ ಹೋದರೆ, ಅವುಗಳು ಹೆದರಿಕೊಳ್ಳುವವು.

ಸುಮತಿ—ನಿಮ್ಮ ಮಾತು ದಿಟ, ನಾಯಿಗಳಲ್ಲಿಯೂ ಈ ಸ್ವಭಾವವಿದೆ. ಒಂದು ನಾಯಿಯು ಮತ್ತೊಂದು ಹೊಸ ನಾಯಿಯನ್ನು ನೋಡಿದರೆ ಎರಡೂ ಪರಸ್ಪರ ಹೆದರಿಕೊಂಡಿವೆಯೋ, ಎನ್ನುವಹಾಗೆ ಬಹಳ ಜಾಗರೂಕತೆಯಿಂದ ಇರುವವು. ಆದರೆ ಒಂದು ಓಡುವುದಕ್ಕೆ ಮೊದಲುಮಾಡಿದರೆ ಇನ್ನೊಂದು ಬೊಗಳುತಾ ಅದನ್ನು ಆಗ ಹರಿಸಿಕೊಂಡು ಹೋಗುವುದು.

ಜೋಯಿಸ—ಈ ಸ್ವಭಾವ ನಾಯಿಗಳಲ್ಲಿ ಮಾತ್ರವೇ ಇಲ್ಲ. ಇತರ ಜಂತುಗಳಲ್ಲಿಯೂ ಇದೆ. ಆಯುಧವಿಲ್ಲದೆ ಕಾಡುಜನರು ಹುಲಿ ಕರಡಿಗಳನ್ನು ಬರೀ ಕೂಗು ಕೂಗಿ ಓಡಿಸಿದಾರೆ. ಎಂಥಾ ಮೃಗವಾಗಲಿ ತಯಾರುಮಾಡಿಕೊಳ್ಳಬೇಕು. ಕಾಡಿನಲ್ಲಿ ಕುದುರೇ ಮರಿಗಳು ಓಡಿಯಾಡುತಿರುವುದನ್ನು ನೋಡಿಲ್ಲವೆ? ಇವುಗಳನ್ನು ಹಿಡಿದು ಮೇಲೆ ಹತ್ತಿಕೊಂಡು ಸವಾರಿ ಮಾಡುವುದು ಸುಲಭವೆ?

ಮದನ—ಸುಲಭವಲ್ಲ. ಅದರ ಮೇಲೆ ಹತ್ತಿಕೊಳ್ಳುವುದಕ್ಕೆ ಹೋದರೆ ಕೆಳಕ್ಕೆ ಕೆಡವಿಬಿಡುತ್ತೆ.

ಜೋಯಿಸ—ನಿನ್ನ ಕುದುರೆಯ ಮೇಲೆ ನೀನು ಕೂತು ಸವಾರಿ ಮಾಡುವುದಿಲ್ಲವೆ?

ಮದನ—ಅದಕ್ಕೆ ಅಭ್ಯಾಸವಾಗಿದೆ.

ಜೋಯಿಸ-ಅದಕ್ಕೆ ಪೂರ್ವದಲ್ಲಿ ಅಭ್ಯಾಸವಾಗಿರಲಿಲ್ಲ ಮೊದಲು ಕಾಡಿನಲ್ಲಿ ಪೋಲಿ ತಿರುಗುತಿತ್ತಷ್ಟೆ? ಅಂಥಾ ಕುದುರೆ ನಿನ್ನನ್ನು ಬೆನ್ನ ಮೇಲೆ ಕೂರಿಸಿಕೊಂಡು ತಿರುಗಾಡುವ ಬಗೆ ಹೇಗೆ?

ಮದನ—ಅದಕ್ಕೆ ನಾವು ತಿಂಡಿ ಹಾಕುತೇವೆ.

ಜೋಯಿಸ—ಅಷ್ಟೇ ಅಲ್ಲ, ತಾಯಿ ಸಂಗಡ ಅದು ಲಾಯಕ್ಕೆ ಬರುವಂತೆ ಅಭ್ಯಾಸಮಾಡುತೇವೆ; ಆಮೇಲೆ ಅದಕ್ಕೆ ಮಾಲೀಸು ಮಾಡುತೇವೆ. ಅದು ಕ್ರಮೇಣ ಸಾಧುವಾಗುವುದು. ಅದನ್ನು ಗೂಟಕ್ಕೆ ಕಟ್ಟುತೇವೆ. ಆಮೇಲೆ ಸಬರಾ ಹಾಕುತೇವೆ. ಕಡಿವಾಣ ಹಾಕುತೇವೆ. ಹೀಗೆ ಅವುಗಳನ್ನು ಕ್ರಮೇಣ ತಯಾರು ಮಾಡುತೇವೆ. ಮನುಷ್ಯ ಹೇಳಿ ಹೇಳಿದ ಹಾಗೆ ಈ ಕರಡಿ ಕೇಳಬೇಕಾದರೆ ಅದಕ್ಕೆ ತಾನೆ ಏಟು

ಬಿದ್ದಿರಬೇಕು. ಆ ಏಟಿನ ಭಯ ಮನಸ್ಸಿನಲ್ಲಿ ಇದ್ದದರಿಂದಲೇ ನಾನು ನಿಲ್ಲಿಸಿದಕೂಡಲೇ ನಿಂತುಕೊಂಡಿತು. ಇಲ್ಲದೇ ಇದ್ದರೆ ಅವರ ಹಾವಳಿಯನ್ನು ತಡೆಯುವುದಕ್ಕೆ ಆಗುತಿರಲಿಲ್ಲ.

ಹೀಗೆ ಮಾತನಾಡುತಿರುವಾಗ, ಮದನನ ಕೈ ಸ್ವಲ್ಪ ರಕ್ತವಾಗಿತ್ತು. ಅದರ ಮೇಲೆ ಜೋಯಿಸನ ಕಣ್ಣು ಬಿತ್ತು. ರಕ್ತ ಹೇಗೆ ಬಂತೆಂದು ಕೇಳಲು, ಕಪಿಯು ತನ್ನನ್ನು ಕಚ್ಚುವುದಕ್ಕೆ ಬಂದ ಸಂಗತಿಯನ್ನೆಲ್ಲಾ ಮದನನು ಹೇಳಿದನು. ಆಗ ಜೋಯಿಸನು ಆ ಹುಡುಗನಿಗೆ ಗಾಯ ವಾದ್ದಕ್ಕೆ ಪೇಚಾಡಿ ಅವನಿಗೆ ಮೊದಲಿಗಿಂತಲೂ ಈಗ ಧೈರ್ಯ ಹೆಚ್ಚಾದ್ದಕ್ಕೆ ಸಂತೋಷಪಡುತಾ ಹೇಳಿದ್ದೇನೆಂದರೆ :—

ಮೃಗಗಳಲ್ಲಿ ಕಪಿಯು ಬಹು ವಿಚಿತ್ರವಾದ್ದು. ಇದು ಆಕಾರದಲ್ಲಿ ಮನುಷ್ಯನನ್ನು ಹೋಲುವುದು. ಕರಡಿ ಹೇಗೆ ಸೀತ ದೇಶದಲ್ಲಿ ವಿಶೇಷ ವಾಗಿರುವುದೊ ಕಪಿ ಹಾಗೆ ಉಷ್ಣ ದೇಶದಲ್ಲಿರುವುದು. ಇದಕ್ಕೆ ಚಟ ವಟಿಕೆ ಹೆಚ್ಚು. ಮುಂದುಗಡೆ ಕಾಲು ಮನುಷ್ಯನ ಕೈಯಿನ ಹಾಗೆ ಇರುವುದು. ಕಾಡಿನಲ್ಲಿ ಇದು ಹಿಂಡು ಹಿಂಡಾಗಿರುತಾ, ಅಲ್ಲಿ ಸಿಕ್ಕುವ ಹಣ್ಣನ್ನು ಕಿತ್ತು ತಿಂದು ಜೀವಿಸುವುದು. ಗುಂಪುಕಟ್ಟಿಕೊಂಡು ತೋಟಗಳಿಗೆ ನುಗ್ಗುವುದು. ಯಾರಾದರೂ ಬಂದರೆ, ಸಂಚುನೋಡಿ ತಿಳಿಸುವುದಕ್ಕೆ ಒಂದೆರಡು ಕೋತಿಗಳನ್ನು ಕಾವಲಿಟ್ಟು, ಗುಂಪೆಲ್ಲಾ ಒಳಕ್ಕೆ ನುಗ್ಗುವುದು. ಕೆಲವು ಕೋತಿಗಳು ಗಿಡಕ್ಕೆ ಹತ್ತಿ ಹಣ್ಣುಗಳನ್ನು ಕಿತ್ತು ಕೆಳಕ್ಕೆ ಹಾಕುವವು. ಕೆಳಗೆ ಇರತಕ್ಕ ಕಪಿಗಳು ಅವುಗಳನ್ನೆಲ್ಲಾ ಜಾಗ್ರತೆಯಾಗಿ ಆಚೆಗೆ ಸಾಗಿಸುವವು.

ಸುಮತಿ—ಜೋಯಿಸರೆ, ಕಾಗೆಯಲ್ಲಿಯೂ, ಈ ಗುಣವಿದೆ. ಏನಾದರೂ ತಿಂಡಿಯನ್ನು ಹಾಕಿದ್ದರೆ ಅದನ್ನು ತಿನ್ನುವುದಕ್ಕೆ ಗುಂಪು ಗುಂಪಾಗಿ ಬರುವುದು. ಒಂದೆರಡುಮಾತ್ರ ಎತ್ತರವಾದ ಮರದ ಮೇಲೆ ಕೂತುಕೊಂಡು ಜನರು ಯಾರಾದರೂ ಬಂದರೆ, ಕೂಗಿ ಎಚ್ಚರವನ್ನು ಹೇಳುವವು. ಇದನ್ನು ತಿಳಿದು ಗುಂಪೆಲ್ಲಾ ಹಾರಿ ಹೋಗುವುದು ಎಂದನು.

ಇವರೆಲ್ಲರೂ ಮನೆಗೆ ಹೋದರು. ಅಷ್ಟರಲ್ಲಿ ರಾಜಪುತ್ರರನ್ನ

ಸ್ವಲ್ಪದಿನದ ಮಟ್ಟಿಗೆ ಕರೆತರಬೇಕೆಂದು ಕೊಟ್ಟಿದ್ದ ದೊರೆಯ ಅಪ್ಪಣೇ ಪ್ರಕಾರ ಆಳುಗಳು ಕುದುರೆಯನ್ನು ತಂದು ನಿಲ್ಲಿಸಿಕೊಂಡು ಜೋಯಿಸರ ಮನೇಬಾಗಿಲಲ್ಲಿ ಕಾದಿದ್ದರು. ಮದನನು ಇದನ್ನು ಕಂಡು ಪಂತರ ಅಪ್ಪಣೆಯನ್ನು ಪಡೆದು, ಕುದುರೆಯಮೇಲೆ ಕೂತು ಅರಮನೆಗೆ ಹೋದನು. ಅಲ್ಲಿ ದೊರೆಯೂ ಅರಸಿಯೂ ಬಹುಪ್ರೀತಿಯಿಂದ ಮಗನನ್ನು ಕಂಡರು. ಗುರುವಿನ ಸಮೀಪದಲ್ಲಿ ತಾನು ಕಲಿಯುವ ವಿದ್ಯದ ರೀತಿಯನ್ನು ಮದನನು ಆಗಾಗ್ಗೆ ತಂದೆ ತಾಯಿಗಳಿಗೆ ಹೇಳುತಾ ಬಂದನು. ಆದರೆ ತಾನು ದೊರೆಯಿಂದ ಇಸಕೊಂಡು ಹೋದ ಇಪ್ಪತ್ತೇಳು ವರಹದ ಸಂಗತಿಯನ್ನು ಮಾತ್ರ ಎತ್ತಲಿಲ್ಲ. ಹೀಗಿರಲು ಒಂದು ಸೋಮವಾರದ ದಿನ ರಾಜನು ತನ್ನ ಮಗ, ಹೆಂಡತಿ, ಮತ್ತು ಇತರ ಪರಿವಾರದೊಡನೆ ಶಿವದರ್ಶನಕ್ಕಾಗಿ ಸಾಯಂಕಾಲ ಗುಡಿಗೆ ಹೋದನು. ಅಲ್ಲಿ ದರ್ಶನವನ್ನು ಮಾಡಿಕೊಂಡು ಹಿಂತಿರುಗುತಿರುವಾಗ ಅಲ್ಲಿದ್ದ ಜನರೆಲ್ಲಾ ಮದನನನ್ನು ನೋಡಿ ಗುಸುಗುಸನೆ ಮಾತನಾಡುತಿದ್ದರು. ಆಗ ನಾಲ್ಕು ನಿಮಿಷದೊಳಗಾಗಿ ಒಬ್ಬ ಶೂದ್ರಿತ್ತಿ ಬಂದು ಮದನನ ಕಾಲಿಗೆ ಬಿದ್ದು,—ಬುದ್ದಿ ನೀವು ನಮ್ಮ ತಂದೆ, ನಮ್ಮಭಾಗದ ದೇವರು, ನಾನು ಹತ್ತಿಸುವ ದೀಪ ತಮ್ಮದು, ಎಂದು ವಿನಯವಾಗಿಹೇಳಿದಳು. ದೊರೆಯು ಈ ಆಶ್ಚರ್ಯಕರವಾದ ಸಂಗತಿ ಏನೆಂದು ವಿಚಾರಿಸಲಾಗಿ ರಾಜಕುಮಾರನು ಆ ಬಡ ಒಕ್ಕಲಿಗರಿಗೆ ಇಪ್ಪತ್ತೇಳು ವರಹವನ್ನು ಕೊಟ್ಟು ಅವರ ಕಷ್ಟವನ್ನು ಬಿಡಿಸಿದ ವಿಷಯ ಗೊತ್ತಾಯಿತು. ಕೂಡಲೆ ಅರಸ, ಅರಸಿ ಇಬ್ಬರಿಗೂ ವಿಶೇಷ ಸಂತೋಷವಾಯಿತು. ಅವರು ಮಗನನ್ನು ತಬ್ಬಿಕೊಂಡು ಮುದ್ದಾಡಿದರು. ಅರಸುಮಗನಿಗೆ ಪೂರ್ವಕ್ಕಿಂತಲೂ ಈಗ ದೇಹದ ಶಕ್ತಿ ಹೆಚ್ಚಾಗಿತ್ತು ; ಮೊದಲಿನಂತೆ ಕೋಪಮಾಡಿಕೊಂಡು, ಮನಸ್ಸು ಬಂದಹಾಗೆ ಆಡುತ್ತಿರಲಿಲ್ಲ. ಹೀಗೆ ಎಲ್ಲಾ ಭಾಗದಲ್ಲಿಯೂ ತಮ್ಮ ಮಗನು ವೃದ್ಧಿಯಾಗುತಾ ಇದಾನೆಂದು ತಿಳಿದು ರಾಜನಿಗೆ ಸಂತೋಷವಾಯಿತು.

ಮದನನು ಎಂದಿನಂತೆ ಮನೆಗೆ ಬಂದನು. ಒಂದಾನೊಂದು ದಿನ ಒಂದು ಗುಬ್ಬಿಯು ಕಿಟಕಿಯಲ್ಲಿ ಬಂದು ಕೂತುಕೊಂಡಿತು. ಅದನ್ನು

ಕಂಡು ಮದನ ಸ್ವಲ್ಪ ಅನ್ನವನ್ನು ತೆಗೆದುಕೊಂಡು ಹೋಗಿ ಹಾಕಿದನು. ಗುಬ್ಬಿಯು ಅದನ್ನು ತಿಂದು ಹಾರಿಹೋಯಿತು. ಮಾರನೇ ದಿನವೂ ಹಾಗೆಯೇ ಬಂದು ಕೂತುಕೊಂಡಿತು. ಮತ್ತೆ ಅನ್ನವನ್ನು ಚೆಲ್ಲಲು, ತಿಂದು ಹಾರಿಹೋಯಿತು. ಈ ಪ್ರಕಾರ ಗುಬ್ಬಿಯು ನಿತ್ಯವೂ ಬಂದು ಅನ್ನವನ್ನು ತಿಂದುಹೋಗುವ ರೂಢಿಯನ್ನು ಇಟ್ಟುಕೊಂಡಿತು. ಇದಕ್ಕೆ ಭಯ ಹೋಯಿತು. ಮದನನ ಕೈಯಿಂದಲೇ ಅನ್ನದ ಅಗುಳನ್ನು ಕಚ್ಚಿ ಕೊಳ್ಳುವುದು, ಅವನ ಮೈಮೇಲೆಲ್ಲಾ ಓಡಾಡುವುದು, ಹೀಗೆ ಗುಬ್ಬಿಯು ಬಹು ಸಲಿಗೆಯಾಗಿ ಒಗ್ಗಿಕೊಂಡಿತು. ಮತ್ತೊಂದು ದಿನ ಈ ಗುಬ್ಬಿ ಹಾರಿಬಂದುದನ್ನು ಕಂಡು, ಮದನನು ಹೋಗಿ ಅನ್ನವನ್ನು ಹಿಡಿದು ಕೊಂಡು ಬಂದು ನೋಡಲು, ಗುಬ್ಬಿಯು ಸತ್ತು ಬಿದ್ದಿತ್ತು. ಅದರ ಕತ್ತು ಕತ್ತರಿಸಿಹೋಗಿ, ರಕ್ತ ಸುರಿದಿತ್ತು. ಅತ್ತಿತ್ತ ನೋಡಲು ದೂರ ದಲ್ಲಿ ಮನೇ ಬೆಕ್ಕು ಕೂತಿತ್ತು. ಇವನನ್ನು ಕಂಡು ಅದು ಓಡಿ ಹೋಯಿತು. ಮದನನು ಕಣ್ಣಿನಲ್ಲಿ ನೀರಹಾಕುತಾ ಜೋಯಿಸನ ಸಮೀಪಕ್ಕೆ ಬಂದು, ನಿತ್ಯವೂ ತಾನು ಗುಬ್ಬಿಗೆ ಅನ್ನವನ್ನು ಹಾಕುತಿದ್ದ ಸಂಗತಿಯನ್ನು ಹೇಳಿದನು. ಅದಕ್ಕೆ

ಜೋಯಿಸ—ಹಾಗೆ ಪ್ರಾಣಿಗಳನ್ನು ಪ್ರೀತಿಯಿಂದ ನಾವು ಆದರಿಸಿದರೆ, ಅವುಗಳು ನಮ್ಮನ್ನು ಕಂಡು ಭಯಪಡದೇ ಒಗ್ಗಿಕೊಳ್ಳುವವು.

ಮದನ—ಹಾಗೆಯೇ ಒಗ್ಗಿಕೊಂಡು ಇತ್ತು. ಈ ದಿವಸ ಅದು ಕಿಟಕಿಗೆ ಬಂದು ಕೂತುಕೊಂಡಕೂಡಲೇ ಅನ್ನವನ್ನು ತರೋಣವೆಂದು ಈಚೆಗೆ ಬಂದೆ. ನಾನು ಹೋಗುವಷ್ಟರಲ್ಲಿಯೇ ನಮ್ಮ ಮನೇ ಬೆಕ್ಕು ಅದನ್ನು ಕಚ್ಚಿ ಕೊಂದುಹಾಕಿಬಿಟ್ಟಿತ್ತು.

ಜೋಯಿಸ—ಅಯ್ಯೋ! ಪಾಪ! ನಿನ್ನ ಗುಬ್ಬಿ ಸತ್ತುಹೋಯಿತೆ? ಆದರೆ ಈಗ ಆ ಬೆಕ್ಕಿಗೆ ಏನು ಮಾಡಬೇಕೆಂದು ಇದ್ದೀಯೆ?

ಮದನ—ಆ ಬೆಕ್ಕನ್ನ ಕೊಂದುಬಿಡಬೇಕು.

ಜೋಯಿಸ—ನಿನ್ನ ಗುಬ್ಬಿಯನ್ನು ಕಂಡರೆ ಆ ಬೆಕ್ಕಿಗೆ ವಿಶೇಷ ಹಗೆತನವಿತ್ತೊ, ಅಥವಾ ಬೆಕ್ಕು ಹೊಟ್ಟೆಗೆ ಕಾಣದೆ ಹಕ್ಕಿಗಳನ್ನು ಕೊಂದುಹಾಕುವ ತನ್ನ ಸ್ವಭಾವವನ್ನು ಅನುಸರಿಸಿ, ಈ ಗುಬ್ಬಿಯನ್ನು ಕೊಂದುಹಾಕಿತೊ?

ಮದನ—ಈ ಗುಬ್ಬಿಯ ಮೇಲೆ ಅದಕ್ಕೆ ವಿಶೇಷ ಹಗೆತನವಿತ್ತೆಂದು ಹೇಳಲಾರೆ. ಹೊಟ್ಟೆಗಿಲ್ಲದೆ ಇದನ್ನು ತಿನ್ನಬೇಕೆಂದು ಬಂದಿದ್ದರೂ ಇರಬಹುದು.

ಜೋಯಿಸ—ಅಳಿಲನ್ನೂ ಇಲಿಯನ್ನೂ ಆ ಜಾತಿ ಹಿಡಿಯುವದಿಲ್ಲವೆ, ನೀನು ಕಾಣೆಯ? ಹಾಗೆ ಮಾಡದಂತೆ ಬೆಕ್ಕಿಗೆ ಬುದ್ಧಿಯನ್ನು ನೀನು ಯಾವಾಗಲಾದರೂ ಕಲಿಸಿದ್ದೆಯ?

ಮದನ—ಇಲ್ಲ. ಒಂದುದಿನ ಒಂದು ಬೆಕ್ಕು ಇಲಿಯನ್ನು ಹಿಡಿದುಕೊಂಡಿತ್ತು. ಸುಮತಿಯು ಅದನ್ನು ಕಂಡು, ಇಲಿಯನ್ನು ಬಿಡಿಸಿಕೊಂಡು, ಆಚೆಗೆ ಬಿಟ್ಟುಬಿಟ್ಟ. ನಾನು ಅದರ ಗೋಜಿಗೆ ಹೋಗಲಿಲ್ಲ.

ಜೋಯಿಸ—ಹಾಗಾದರೆ, ಆ ಬೆಕ್ಕಿನ ತಪ್ಪಿಗಿಂತಲೂ ನಿನ್ನ ತಪ್ಪು ಹೆಚ್ಚಾಯಿತೊ ಇಲ್ಲವೋ? ಬೆಕ್ಕು ಸಣ್ಣ ಪಕ್ಷಿಗಳನ್ನು ಹಿಡಿದು ಕೊಲ್ಲುವುದನ್ನು ನೀನು ಬಲ್ಲೆ. ಆದಾಗ್ಯೂ ನಿನ್ನ ಗುಬ್ಬಿಯ ಪ್ರಾಣವನ್ನು ಕಾಪಾಡುವುದಕ್ಕೆ ನೀನು ಯತ್ನವನ್ನೇ ಮಾಡಲಿಲ್ಲ. ಅದಕ್ಕೆ ನೀನು ಅನ್ನವನ್ನು ಹಾಕಿ ಒಗ್ಗಿಸಿಕೊಳ್ಳದಿದ್ದರೆ ಅದು ಕಾಡಿನಲ್ಲೇ ಹಾರಾಡಿಕೊಂಡಿರುತಿತ್ತು ಬೆಕ್ಕಿನ ಕೈಗೆ ಸಿಕ್ಕುತಲೇ ಇರಲಿಲ್ಲ. ಆದ್ದರಿಂದ ಸಣ್ಣಪಕ್ಷಿಗಳನ್ನು ಕೊಲ್ಲಬಾರದೆಂದು ಒಳ್ಳೇ ಸ್ವಭಾವವನ್ನು ಬೆಕ್ಕಿಗೆ ಕಲಿಸಬೇಕೊ ಇಲ್ಲವೊ? ನೀನು ಹಾಗೆ ಕಲಿಸದೇ ಹೋದ್ದರಿಂದ, ತಪ್ಪು ನಿನ್ನದೆ, ಬೆಕ್ಕಿನದೆ?

ಮದನ—ನಾವು ಹಾಗೆ ಕಲಿಸುವುದಕ್ಕೆ ಆಗುವುದೆ?

ಜೋಯಿಸ—ಚೆನ್ನಾಗಿಯೂ ಕಲಿಸಬಹುದು.

ಮದನ—ಇಂಥಾ ಕೆಟ್ಟ ಜಂತುಗಳು ಯಾಕೆ ಇರಬೇಕು?

ಜೋಯಿಸ—ಮತ್ತೊಂದು ಪ್ರಾಣಿಯನ್ನು ತಿಂದು ಜೀವಿಸುವ ಜಂತುವನ್ನೆಲ್ಲಾ ನೀನು ಕೊಲ್ಲುತಾ ಬಂದರೆ, ಲೋಕದಲ್ಲಿ ಅನೇಕ ಜಂತುಗಳು ಸತ್ತುಹೋಗುವವು.

ಮದನ—ಗುಬ್ಬಿಯು ಇಂಥಾ ಕ್ರೂರಕೃತ್ಯವನ್ನು ಎಂದಿಗೂ ಮಾಡುವುದಿಲ್ಲ.

ಜೋಯಿಸ—ಮಾತಿಗೆ ಪ್ರತಿಮಾತನ್ನು ಈಗ ನಾನು ಹೇಳುವುದಿಲ್ಲ. ಅದಕ್ಕೆ ಸಮಯವಿದೆ.

ಜೋಯಿಸನು ಈ ಪ್ರಕಾರ ಹೇಳಿ, ಮದನನನ್ನು ಸಂಗಡ ಕರೆದುಕೊಂಡು ಬಂದು ಅವರೇ ಹೊಲದ ಸಮಿಾಪಕ್ಕೆ ಹೋದನು. ಅಲ್ಲಿ ಗುಬ್ಬಿಗಳು ಹೆಚ್ಚಾಗಿ ಹಾರಿಯಾಡುತಿದ್ದವು. ಒಂದು ಗುಬ್ಬಿಯು ಬಾಯಿಯಲ್ಲಿ ಏನನ್ನೋ ಕಚ್ಚಿಕೊಂಡಿತ್ತು. ಅದನ್ನು ಮದನನಿಗೆ ತೋರಿಸಿ ಜೋಯಿಸ ಹೇಳುವುದೇನೆಂದರೆ :—

ಜೋಯಿಸ—ಆ ಗುಬ್ಬಿಯ ಬಾಯಿಯಲ್ಲಿ ಇರುವುದೇನು, ಬಲ್ಲೆಯ ?

ಮದನ—ಅವರೇ ಹುಳುವಿನಹಾಗೆ ಕಾಣುತಿದೆ.

ಜೋಯಿಸ—ಆ ಹುಳುವು ಗುಬ್ಬೀ ಕೈಗೆ ಸಿಕ್ಕಿ ಪಡುತಿರುವ ಕಷ್ಟವನ್ನು ಗುಬ್ಬಿ ಬಲ್ಲುದೆ ?

ಮದನ—ಅರಿಯದು.

ಜೋಯಿಸ—ಬುದ್ಧಿಶಕ್ತಿಯುಳ್ಳ ಮನುಷ್ಯನು ಕೆಟ್ಟದೆಂದು ತಿಳಿದಿರತಕ್ಕ ಜ್ಞಾನವು ಬುದ್ಧಿಶಕ್ತಿಯಿಲ್ಲದ ಇತರ ಜಂತುಗಳಿಗೆ ಎಲ್ಲಿ ಬಂದೀತು ? ಹೊಟ್ಟೆಗೋಸ್ಕರ ದನಗಳು ಹುಲ್ಲನ್ನು ಹೇಗೆ ತಿನ್ನುವವೊ, ಗುಬ್ಬಿಯೂ ಹಾಗೆ ಹುಳುವನ್ನು ತಿನ್ನುವುದು.

ಮದನ—ಹಾಗಾದರೆ, ನನ್ನ ಗುಬ್ಬಿಯನ್ನು ಕಚ್ಚಿಹಾಕಿದ ಬೆಕ್ಕಿಗೆ ತಾನು ಮಾಡುವ ಕೆಲಸ ಅಪರಾಧವೆಂಬ ತಿಳಿವಳಿಕೆ ಇರಲಿಲ್ಲ.

ಜೋಯಿಸ—ಈ ಹುಳುವನ್ನು ಕಚ್ಚಿದ ಗುಬ್ಬಿಗೆ ತನ್ನ ಕೆಲಸದ ಕೆಟ್ಟತನ ಹೇಗೆ ಗೊತ್ತಿಲ್ಲವೊ, ಹಾಗೆಯೇ ಆ ಬೆಕ್ಕಿಗೂ ತನ್ನ ಕೆಟ್ಟತನ ಗೊತ್ತಿರಲಿಲ್ಲ. ನಿನ್ನ ಗುಬ್ಬಿಯಲ್ಲಿ ನಿನಗಿದ್ದ ಪ್ರೇಮವನ್ನು ಅದು ಅರಿಯದು. ಆದ್ದರಿಂದ ಆ ಗುಬ್ಬಿಯನ್ನು ಕೊಂದಾಗ ನಿನಗೆ ಕೇಡನ್ನು ಮಾಡಬೇಕೆಂದು ಅದು ಮನಸ್ಸಿನಲ್ಲಿ ಮಾಡಿಕೊಂಡಿರಲಿಲ್ಲ.

ಮದನ—ನಾನು ಇನ್ನೊಂದು ಪಕ್ಷಿಯನ್ನು ಸಾಕಿದರೂ ಈ ಬೆಕ್ಕು ಹೀಗೆಯೇ ಮಾಡೀತು.

ಜೋಯಿಸ—ಬೆಕ್ಕು ಹಾಗೆ ಕೊಲ್ಲದಂತೆ ತಪ್ಪಿಸಬಹುದು.

ಮದನ—ಅದು ಹೇಗೆ ತಪ್ಪಿಸುವುದು, ನನಗೆ ಅದನ್ನು ಹೇಳಿ ಕೊಡಿ.

ಜೋಯಿಸ—ಅಗತ್ಯವಾಗಿ ಆಗಲಿ. ಒಂದು ಪ್ರಾಣಿಯನ್ನು ಕೊಲ್ಲುವುದಕ್ಕಿಂತಲೂ ಅದರ ತಪ್ಪನ್ನು ತಿದ್ದುವುದು ಒಳ್ಳೇದು. ಈ ಬೆಕ್ಕನ್ನು ಮರಿಯಾಗಿದ್ದಾಗಿನಿಂದಾ ನಾನು ಸಾಕಿದೆ. ಇದರ ಸ್ವಭಾವ ಒಳ್ಳೇದು. ಊಟದಹೊತ್ತಿನಲ್ಲಿ ಬಂದು ಸುಮ್ಮನೇ ಕೂತುಕೊಳ್ಳುವುದು. ಎಲೆಗೆ ಬಾಯಿಹಾಕುವುದಿಲ್ಲ. ನಾವು ಹಾಕಿದ್ದನ್ನು ತಿಂದುಕೊಂಡು ಹೋಗುವುದು.

ಹೀಗೆ ಈ ಸಂಭಾಷಣೆ ಇಲ್ಲಿಗೆ ನಿಂತಿತು. ಕೆಲವು ದಿವಸ ಕಳೆಯಿತು. ಅದು ಗಿಡಸೀಮೆಯಾದ್ದರಿಂದ, ಅನೇಕ ಪಕ್ಷಿಗಳು ವಿಶೇಷವಾಗಿ ಸಂಚರಿಸುತಿದ್ದವು. ಜೋಯಿಸನು ಒಂದು ದಿನ ಒಂದು ಮೈನವನ್ನು ಹಿಡಿದು ಒಂದು ಕಬ್ಬಿಣದ ಪಂಜರದಲ್ಲಿ ಕೂಡಿದನು. ಆ ಪಂಜರದ ಕದದ ಕಡ್ಡಿಗಳನ್ನು ಬೆಂಕಿಯಲ್ಲಿ ಚೆನ್ನಾಗಿ ಕಾಸಿ, ಆ ಕದವನ್ನು ಪಂಜ ರದ ಬಾಗಿಲಿಗೆ ಎದುರಾಗಿ ಇಟ್ಟು, ಬೆಕ್ಕನ್ನು ಕರೆದು ಅಲ್ಲಿ ಬಿಟ್ಟು ಅಲ್ಲಿ ಯಾರೂ ಇಲ್ಲದಂತೆ ಮರೆಯಾಗಿ ನಿಂತುಕೊಂಡನು. ಆ ಮಾರ್ಜಾಲವು ಪಂಜರದೊಳಗಿನ ಮೈನವನ್ನು ಹಿಡಿದು ಕೊಲ್ಲಬೇಕೆಂದು ಬಾಗಿಲ ಮೇಲೆ ಹಾರಿತು. ಕಾದಿದ್ದ ಕಬ್ಬಿಣದ ಕಂಬಿಗಳು ತಗಲಿ ಅದರ ಮೈಯೂ ಮೂತಿಯೂ ಸುಟ್ಟುಹೋದವು. ಮತ್ತೆ ನೆಗೆಯಿತು; ಮತ್ತೆ ಹೀಗೆಯೇ ಸುಟ್ಟುಹೋಯಿತು. ಹೀಗೆ ೪-೫ ಸಾರಿ ಹಾರಿ ಮೈಯ ನ್ನೆಲ್ಲಾ ಸುಟ್ಟುಕೊಂಡು ಅರಚಿಕೊಳ್ಳುತಾ ಮೈನದ ಗೋಜಿಗೆ ಪುನಃ ಹೋಗದೆ, ಬೆಕ್ಕು ಹೊರಟುಹೋಯಿತು. ಅಂದಿನಿಂದ ಬೆಕ್ಕು ಯಾವ ಹಕ್ಕಿಯನ್ನೂ ಹಿಡಿಯುವುದಕ್ಕೆ ಹೋಗುತಿರಲಿಲ್ಲ.

ಆಗ ಬೇಸಗೆ ಮೊದಲಾಗುತಿತ್ತು. ಮೇವುಸಿಕ್ಕುವುದು ಕಷ್ಟ ವಾಗಿತ್ತು. ಒಂದಾನೊಂದು ದಿನ ರಾಮಜೋಯಿಸನೂ ಮದನನೂ ಹೊಲದ ಕಡೆಗೆ ಹೋದರು. ಅಲ್ಲಿ ಸುಮತಿ ಮದನರಿಬ್ಬರೂ ಹಾಕಿದ್ದ ಪೈರನ್ನು ಮೊಲಗಳು ಬಂದು ಮೇದು ಹಾಳುಮಾಡುತಿದ್ದವು. ಅದನ್ನು ಕಂಡು ಮದನನು—ಉಪಾಧ್ಯಾಯರೆ, ನೋಡಿದಿರ? ನಾನೂ ಸುಮತಿ

ಯೂ ಸೇರಿ ಮಾಡಿದ್ದ ಪೈರನ್ನು ಈ ಕೆಟ್ಟ ಮೊಲಗಳು ತಿಂದು ಕೆಡಿಸು ತಿವೆ. ಇವುಗಳಿಗೆ ತಕ್ಕದ್ದನ್ನು ಮಾಡಬೇಕು, ಎಂದು ಬಹು ಕೋಪ ದಿಂದ ನುಡಿದನು. ಆ ಮಾತಿಗೆ ಜೋಯಿಸನು—ಪೈರೆಲ್ಲಾ ಹಾಳಾ ದ್ದಕ್ಕೆ ಪೇಚಾಡತಕ್ಕದ್ದೇಸರಿ ; ಆದರೆ ಅದನ್ನು ಹೇಗೆ ಸರಿಮಾಡುವುದು, ಎಂದು ಕೇಳಿದನು. ಹೇಗೆ ಎಂದರೆ, ಈ ಮೊಲಗಳನ್ನೆಲ್ಲಾ ತುಪಾಕಿ ಯಿಂದ ಸುಟ್ಟುಬಿಡಬೇಕು, ಎಂದು ಮದನ ಉತ್ತರ ಹೇಳಿದನು. ಇದಕ್ಕೆ ಜೋಯಿಸನು—ಸ್ವಲ್ಪ ದಿವಸಕ್ಕೆ ಮುಂಚೆ ಬೆಕ್ಕನ್ನು ಕೊಂದ ಹಾಕಬೇಕು, ಯಾಕೆಂದರೆ ಗುಬ್ಬಿಯನ್ನು ತಿಂದಿತು ಎಂದು ಹೇಳಿದೆ. ಈಗ ನಿರಪರಾಧಿಗಳಾದ ಮೊಲಗಳನ್ನು ಕೊಂದುಹಾಕಬೇಕು, ಯಾಕೆಂ ದರೆ ಅವು ಸಸ್ಯಗಳನ್ನು ತಿಂದುಬಿಟ್ಟವು ಎಂದು ಹೇಳುತೀಯ ಎಂಬದಾಗಿ ನುಡಿದನು. ಈ ಮಾತನ್ನು ಕೇಳಿ ಮದನನು ಉತ್ತರ ಹೇಳುವುದಕ್ಕೆ ತಿಳಿಯದೆ ಪೆಚ್ಚುಮುಖವನ್ನು ಹಾಕಿಕೊಂಡು, ಕೊನೆಗೆ ಗುರುವಿನ ಸಂಗಡ—ಸಸ್ಯಗಳನ್ನು ತಿಂದುದಕ್ಕೋಸ್ಕರ ಅವುಗಳನ್ನು ಕೊಲ್ಲಬೇ ಕೆಂದು ಅಲ್ಲ. ನಾನು ಹಾಕಿದ ಪೈರನ್ನು ಅವು ತಿಂದುಬಿಟ್ಟವು, ಆದ್ದ ರಿಂದ ಕೊಲ್ಲಬೇಕು, ಎಂದನು. ಆ ಮೂಗಪ್ರಾಣಿಗಳು ನಿನ್ನ ಪೈರು ಮತ್ತೊಬ್ಬನ ಪೈರು ಎಂದು ಬಲ್ಲವೆ ? ನಿನ್ನ ಜಾಗ್ರತೆಯಲ್ಲಿ ನೀನು ಇರ ಬೇಕಾಗಿತ್ತು ; ಹೊಲಕ್ಕೂ ತೋಟಕ್ಕೂ ಸರಿಯಾದ ಬೇಲಿಯನ್ನು ಹಾಕಬೇಕಾಗಿತ್ತು. ಆಗ ಮೊಲಗಳು ಬಂದು ಪೈರನ್ನು ಹಾಳುಮಾಡು ತಿರಲಿಲ್ಲ. ಇದೂ ಅಲ್ಲದೆ, ಬೇಸಗೆ ಮೊದಲಾಯಿತು. ಪ್ರಾಣಿಗಳಿಗೆ ಮೇವು ಸಿಕ್ಕುವುದು ಕಡಮೆ. ಆದ್ದರಿಂದ ಅದು ಸಿಕ್ಕುವ ಕಡೆಗೆ ಬಂದು ತಿನ್ನುವುವು. ಅದಕ್ಕೋಸ್ಕರ ಅವುಗಳನ್ನು ಕೊಂದುಹಾಕುವುದ ಕ್ಕಿಂತಲೂ ಕ್ಷಮಿಸಿ ಬಿಟ್ಟುಬಿಡುವುದು ಲೇಸು, ಎಂದು ಜೋಯಿಸ ಹೇಳಿದನು.

ಈಪ್ರಕಾರ ಮಾತನಾಡುತಾ ಜೋಯಿಸನು ಮದನನನ್ನು ಕರೆದು ಕೊಂಡು ಮುಂದಕ್ಕೆ ಹೋದನು. ದಾರಿಯಲ್ಲಿ ಜೋಯಿಸನ ಹೊಲ ಸಿಕ್ಕಿತು. ಅಲ್ಲಿ ಬೆಳೆದು ನಿಂತಿದ್ದ ಪೈರನ್ನು ಮಾಘದ ಹಕ್ಕಿಗಳು ಗುಂಪು ಗುಂಪಾಗಿ ಬಂದು ತಿಂದು ನಾಶಮಾಡುತಿದ್ದವು. ಇವರು

ಇಬ್ಬರೂ ಹೋದಕೂಡಲೆ, ಆ ಹಕ್ಕಿಯ ಹಿಂಡು ಪರ‍್ರನೆ ಮೇಲಕ್ಕೆ ಹಾರಿತು. ಮದನನು ಪಂತರೆ, ಯಾಕೆ ಈ ಹಕ್ಕಿಗಳು ಹಾರಿಹೋಗು ತಿವೆ? ಎಂದು ಕೇಳಿದನು. ಅದಕ್ಕೆ ಜೋಯಿಸನು—ಇವುಗಳಿಗೆ ಮಾಘದ ಹಕ್ಕಿ ಎಂದು ಹೆಸರು. ಬೇಸಗೆಯ ಹೊಡೆತದಿಂದ ಎಲ್ಲೆ ಲ್ಲಿಯೂ ಮೇವು ಸಿಕ್ಕದೇ ಹೋದಕಾರಣ ಇಲ್ಲಿ ಬಂದು ಕಾಳನ್ನು ತಿಂದು ಕೊಂಡು ಹೋಗುತಿವೆ, ಎಂದು ಹೇಳಿದನು.

ಮದನ—ಈ ಬೇಸಗೆ ಯಾಕೆ ಬರಬೇಕು? ಈ ಕಾಲದಲ್ಲಿ ಎಲ್ಲಿಯೂ ಪ್ರಾಣಿಗಳಿಗೆ ಮೇವು ದೊರೆಯುವುದಿಲ್ಲ. ಈ ಕಾಲಕ್ಕಿಂತಲೂ ಹಿಮಕಾಲ ಉತ್ತಮ.

ಜೋಯಿಸ—ಈ ದೇಶದಲ್ಲಿ ಶಖೆ ಹೆಚ್ಚಾದ್ದರಿಂದ ಹಾಗೆ ತೋರು ವುದು. ಬೇರೆ ದೇಶದಲ್ಲಿ ಚಳಿ ಹೆಚ್ಚಾಗಿರುವುದು, ಅಂಥಾ ಕಡೆ ಬರೀ ಬೇಸಗೆಯೇ ಇದ್ದರೆ ಸಾಕು ಎಂದು ಅಪೇಕ್ಷಿಸುವರು.

ಮದನ—ಹಾಗಾದರೆ ವಿಶೇಷ ಶಖೆಯೂ ಇಲ್ಲದೆ, ವಿಶೇಷ ಚಳಿಯೂ ಇಲ್ಲದೆ ಸಮಧಾತುವಾದ ದೇಶದಲ್ಲಿರಬೇಕು.

ಜೋಯಿಸ—ಅಂಥಾ ದೇಶ ಸಿಕ್ಕುವುದು ಕಷ್ಟ. ಸಿಕ್ಕಿದರೂ ಅದರ ವಿಸ್ತಾರ ಕಡಮೆ.

ಮದನ—ಅಂಥಾ ದೇಶಕ್ಕೆ ಇತರ ಕಡೆಯಿಂದ ಜನಗಳೆಲ್ಲರೂ ಹೋಗಿ ಅಲ್ಲಿಯೇ ವಾಸಮಾಡಿಕೊಂಡಿರಬಹುದು. ಹಾಗಾದರೆ ಆ ದೇಶ ದಲ್ಲಿ ಸ್ವಲ್ಪವೂ ಸಿಕ್ಕುವುದಿಲ್ಲ.

ಜೋಯಿಸ—ಈ ಮಾತಬಿಡು, ಎಂಥಾ ಕೆಟ್ಟ ದೇಶವಾಗಲಿ, ಅಲ್ಲಿನ ಜನರಿಗೆ ಆ ದೇಶದಲ್ಲಿಯೇ ಅಭಿಮಾನವಿದ್ದೀತೇ ಹೊರತು ಮತ್ತೆ ಬೇರೆ ಇಲ್ಲ. ಉತ್ತರ ಪ್ರಾಂತದಲ್ಲಿ ಕೆಲವು ದೇಶಗಳಿವೆ. ಅಲ್ಲಿ ಚಳಿಯಿಂದ ನೀರೆಲ್ಲ ಗಡ್ಡೆಯಾಗುವುದು. ಭೂಮಿಯನ್ನು ಉಳು ವುದೂ ಇಲ್ಲ. ಬಿತ್ತುವುದೂ ಇಲ್ಲ. ಅಲ್ಲಿ ಸಸ್ಯವರ್ಗ ಬೆಳೆಯುವುದು ಕಷ್ಟ. ಹೊಟ್ಟೆಗಿಲ್ಲದೆ ಒಂದು ಬಗೆ ಪಾಸೆಯನ್ನು ಜನರು ತಿಂದು ಜೀವಿಸುವರು. ಈ ಪಾಸೆಯು ಭೂಮಿಯ ಮೇಲೆ ಸಿಕ್ಕುವುದು. ಅದರ ಮೇಲೆ ರಾಸಿ ರಾಸಿಯಾಗಿ ಹಿಮದಗಡ್ಡೆ ಬಿದ್ದಿರುವುದು. ಆ ಮಂಜಿನ

ಗಡ್ಡೆ ರಾಸಿಗಳನ್ನು ಆ ದೇಶದಲ್ಲಿ ಸಿಕ್ಕುವ ಒಂದು ಬಗೆ ಜಿಂಕೆಯು ಕಾಲಲ್ಲಿ ಕೆದಕುವುದು. ಅದರ ಕೆಳಗೆ ಸಿಕ್ಕುವ ಪಾಸೆಯನ್ನು ತಿನ್ನುವುದು. ಈ ಜಿಂಕೆಯ ಹಾಲನ್ನು ಜನರು ಉಪಯೋಗಿಸುವರು. ಹಿಮ ಕಾಲದಲ್ಲಿ ಕೊಡಲಿಯಿಂದ ಹೊಡೆದರೂ ಒಡೆಯದ ಹಾಗೆ ಆ ಜಿಂಕೆಯ ಹಾಲು ಗಟ್ಟಿಯಾಗುವುದು. ಜನರು ಮರವನ್ನು ನೆಲದಲ್ಲಿ ನೆಟ್ಟು ಮನೆಯನ್ನು ಮಾಡಿಕೊಳ್ಳುವರು. ಆ ಜನರು ಅತ್ಯಂತ ಬಡವರು. ಆ ಜಿಂಕೆಯ ಹಾಲೂ ಅದರ ಮಾಂಸವೂ ಕರಡೀಮಾಂಸವೂ ಜನರ ಆಹಾರವಾಗಿವೆ. ಆ ಕರಡೀ ಮಾಂಸ ಒಂದನ್ನು ಮಾತ್ರ ಬೇಯಿಸುವರು. ಇದನ್ನು ಅಡತಕ್ಕದ್ದು ವಿಶೇಷ ದಿವಸಗಳಲ್ಲಿಯೇ. ನೆಲದಮೇಲೆ ಮಂಜಿನ ಗಡ್ಡೆ ಬಿದ್ದು ನಡೆಯುವುದಕ್ಕೆ ಆಗದೇ ಇರುವುದು. ಆದ್ದರಿಂದ ಚಕ್ರವಿಲ್ಲದ ಗಾಡಿಯನ್ನು ಮಾಡಿ ಆ ಜಿಂಕೆಯನ್ನು ಕಟ್ಟಿ ಅದರಲ್ಲಿ ಕೂತು ಹೊರಡುವರು. ಆ ಜನರ ಹತ್ತಿರ ಯಾವ ಹಣಕಾಸೂ ಇಲ್ಲ. ಆದರೂ ಸ್ವಭಾವದಲ್ಲಿ ಒಳ್ಳೆಯವರು. ಪರದೇಶದವರು ಬಂದರೆ ಅವರನ್ನು ಉಪಚರಿಸುವರು.

ಮದನ—ಇಷ್ಟು ಕಷ್ಟಪಟ್ಟುಕೊಂಡು ಆ ದೇಶದಲ್ಲಿ ಜನರು ಯಾಕೆ ಇದಾರೆ?

ಜೋಯಿಸ—ಆ ದೇಶದಲ್ಲಿ ಮೊದಲಿನಿಂದಲೂ ಅವರು ಇದ್ದು ರೂಢಿಯಾಗಿದೆ, ಎಷ್ಟು ಕಷ್ಟವಾದರೂ ಸರಿಯೆ, ಸಹಿಸಿಕೊಂಡಾರೇ ಹೊರತು ಬೇರೆ ದೇಶಕ್ಕೆ ಹೋಗುವುದಿಲ್ಲ.

ಮದನ—ಅವರು ಆ ಕಷ್ಟದಿಂದ ಸತ್ತು ಹೋಗುವುದಿಲ್ಲವೆ?

ಜೋಯಿಸ—ಸುಮ್ಮನೆ ತಿಂದು ಮೈ ಬೆಳಸಿಕೊಂಡು ಯಾವ ಕೆಲಸವನ್ನೂ ಮಾಡದೇ ಇರತಕ್ಕ ಜನರು ಯಾವ ಜಾಡ್ಯವೂ ಇಲ್ಲದೆ ಸೌಖ್ಯವಾಗಿರುತಾರೆಯೆ?

ಮದನ—ಯಾವಾಗಲೂ ಹಾಗೆ ಸೌಖ್ಯವಾಗಿರುವುದಿಲ್ಲ.

ಜೋಯಿಸ—ಸಾಕು ಸಾಲದು ಎನ್ನುವ ಹಾಗೆ ಹೊಟ್ಟೆಗೆ ತಿಂದು ಜೀವಿಸತಕ್ಕ ಜನರು ಎಷ್ಟು ಕಷ್ಟವನ್ನಾದರೂ ಸಹಿಸತಕ್ಕವರಾಗಿರುವುದನ್ನು ನೀನು ಬಲ್ಲೆಯ? ಈ ವಿಷಯದಲ್ಲಿ ಒಂದು ಕಥೆಯನ್ನು ಹೇಳುತೇನೆ, ಕೇಳು. ಹೀಗೆಂದು ಜೋಯಿಸನು ಕಥೆಯನ್ನು ಹೇಳುವುದಕ್ಕೆ ಪ್ರಾರಂಭಿಸಿದನು.

# ೧೨ ನೆ ಅಧ್ಯಾಯ

ಮಾನಸಪುರವೆಂಬ ಪಟ್ಟಣದಲ್ಲಿ ಲಂಬೋದರನೆಂಬ ಒಬ್ಬ ಧನವಂತ ಇದ್ದನು. ಇವನು ಯಾವಾಗಲೂ ಆಹಾರದ ಮೇಲೆಯೇ ಜ್ಞಾನವನ್ನು ಇಟ್ಟುಕೊಂಡಿದ್ದನು. ಇವನು ಹಾಸಿಗೆಯಿಂದ ಎದ್ದ ಕೂಡಲೆ ಹುರಿಹಿಟ್ಟು, ಅವಲಕ್ಕಿ, ಪುಳ್ಳಂಗಾಯಿ ಉಂಡೆ ಇವುಗಳನ್ನೂ ಇನ್ನೂ ಇತರ ತಿಂಡಿಯನ್ನೂ ತಿಂದು ಹಾಸಿಗೆಯನ್ನು ಬಿಟ್ಟು ಮೇಲಕ್ಕೆ ಏಳುವುದೇ ಹೊರತು ಎದ್ದ ಮೇಲೆ ತಿಂಡಿಯನ್ನು ತಿಂದವನೇ ಅಲ್ಲ. ಇದು ಆದ ತರುವಾಯ ಬಗೆ ಬಗೇ ಷರಬತ್ತುಗಳನ್ನು ಬಟ್ಟಲುಗಳಿಗೆ ಬಗ್ಗಿಸಿ ಬಗ್ಗಿಸಿ ಆಳುಗಳು ತಂದುಕೊಡುತಿದ್ದರು. ಇದನ್ನೆಲ್ಲಾ ಹಿಂಗಿದ ತರುವಾಯ ಲಂಬೋದರನು ಅಡಿಗೇ ದಫೇದಾರನನ್ನು ಕರೆಯಿಸಿ, ಬಗೆಬಗೇ ಅಡಿಗೆಯನ್ನು ಈ ಪ್ರಕಾರ ಮಾಡೆಂದು ಅವನಿಗೆ ಆಜ್ಞಾಪಿಸುತಿದ್ದನು. ಆ ಅಡಿಗೆಯವರು ಐದು ಆರು ಜನರಿದ್ದರು. ಒಬ್ಬ ಸೀಪದಾರ್ಥವನ್ನೇ ಮಾಡುವುದು; ಇನ್ನೊಬ್ಬ ಸಾರು, ಹುಳಿಯನ್ನೇ ಮಾಡುವುದು; ಮತ್ತೊಬ್ಬ ಕರಿಯುವ ಕೆಲಸವನ್ನು ನೋಡಿಕೊಳ್ಳುವುದು; ನಾಲ್ಕನೆಯವನು ಅನ್ನವನ್ನು ಮಾಡುವುದು; ಐದನೆಯವನು ಕೋಸುಂಬರಿಗಳನ್ನು ಮಾಡುವುದು. ಈ ಪ್ರಕಾರ ಒಬ್ಬೊಬ್ಬರು ಒಂದೊಂದು ಬಗೆಯನ್ನು ಮಾಡುವುದಕ್ಕೆ ನೇಮಕವಾಗಿದ್ದರು. ಯಜಮಾನನು ಹತ್ತುಗಳಿಗೆಯೊಳಗಾಗಿ ಊಟಕ್ಕೆ ಕೂತರೆ, ಹದಿನೈದು ಇಪ್ಪತ್ತು ಜನ ಒಬ್ಬನಿಗೆ ಬಡಿಸುವುದಕ್ಕೆ ಹೊರಡುತಿದ್ದರು. ಎಂಥಾ ಪದಾರ್ಥವನ್ನು ಮಾಡಿ ಬಡಿಸಿದರೂ ಇವನಿಗೆ ತೃಪ್ತಿಯಾಗುತಿರಲಿಲ್ಲ. ಹೀಗೆ ನಾಲ್ಕುಗಳಿಗೆ ಕೂತು ತಿಂಡಿಯನ್ನು ತಿಂದು, ಕೂತಕಡೆಯಲ್ಲಿಯೇ ಕೈಯನ್ನು ತೊಳೆದುಕೊಳ್ಳುತಿದ್ದನು. ಇವನ ಕೈಗೆ ನೀರ ಹಾಕುವನೊಬ್ಬ. ಆ ಕೈಯನ್ನೂ ಮೂತಿಯನ್ನೂ ಉಜ್ಜುವನೊಬ್ಬ. ತೊಳೆದ ಮೇಲೆ ಚೌಕದಲ್ಲಿ ಒರಸುವನೊಬ್ಬ. ಈ ಪ್ರಕಾರ ಉಪಚಾರವಾಗುತಿತ್ತು. ಊಟವಾದ ಸ್ಥಳದಿಂದ ಇವನನ್ನು ನಾಲ್ಕು ಜನ ಕೈಹಿಡಿದು ಎತ್ತುತಿದ್ದರು. ಅವರ ಸಹಾಯದಿಂದ ಮೆಲ್ಲಗೆ ಮೇಲಕ್ಕೆ ಎದ್ದು

ಒಂದುಮಾರು ದೂರ ಇರುವ ಮಂಚದಮೇಲೆ ಹಾ ಎಂದು ಬಿದ್ದು ಕೊಳ್ಳುತಿದ್ದನು. ಅತ್ತ ಅಡಿಗೆಯವರು ಇವನ ಊಟವಾದ ಕೂಡಲೆ ಮಧ್ಯಾಹ್ನದ ಫಲಾಹಾರಕ್ಕೆ ಮಾಡಲು ತೊಡಗುತಿದ್ದರು. ಮೂರನೇ ಜಾವಕ್ಕೆ ಬೇಕುಬೇಕಾದ ರವೇ ಭಕ್ಷ್ಯಗಳನ್ನು ಮಾಡಿ ಯಜಮಾನನಿಗೆ ತಂದು ಇರಿಸುತಿದ್ದರು. ಇವನು ಅದೆಲ್ಲವನ್ನೂ ಕವಳಿಸಿ ಪುನಃ ಮಲಗಿ ಕೊಂಡು ತಾಂಬೂಲವನ್ನು ಅಗಿಯುತಾ ರಾತ್ರಿ ಊಟದ ಪರಿಕರವನ್ನು ಅಡಿಗೆಯವರಿಗೆ ಹೇಳುತಿದ್ದನು. ಈ ಮಧ್ಯೆ ಏನಾದರೂ ತಿರುತಿಂಡಿ ಯನ್ನು ತಿನ್ನುತಲೇ ಇರುವುದೊ, ತಾಂಬೂಲವನ್ನು ಅಗಿಯುತಲೇ ಇರುವುದೊ, ಅಂತೂ ಯಾವದಾದರೂ ಒಂದು ನೆಪದಿಂದ ಬಾಯಾಡು ತಲೇ ಇದ್ದನು. ಸಾಯಂಕಾಲವಾದಕೂಡಲೆ, ಎಡೆ ಸಿದ್ಧವಾಗುತಿತ್ತು. ಅದನ್ನು ಮೆಲ್ಲುತಿದ್ದನು. ರಾತ್ರಿ ಒಂಭತ್ತು ಹತ್ತು ಗಳಿಗೆಯ ಸಮಯ ದಲ್ಲಿ ನಿದ್ರೆ ಬರುವುದಕ್ಕೆ ಮುಂಚೆ ತೆಂಗಿನಕಾಯಿ ಗಾತ್ರ ಹಾಲುಕೋವೆ ಯನ್ನು ಮಾಡಿ ಇರಿಸುತಿದ್ದರು. ಇದನ್ನು ಮೆದ್ದ ತರುವಾಯ ಅಬ್ಬರಿಸಿ ಕೊಂಡು ಬಿದ್ದುಕೊಳ್ಳುತಿದ್ದನು. ಒಂದೆರಡು ಹೆಜ್ಜೆ ಅತ್ತ ಇತ್ತ ಇಡ ಬೇಕಾಗಿದ್ದಾಗ್ಯೂ, ಎಲಾ ಯಾರಿದ್ದೀರೊ? ಎಂದು ಆಳುಗಳನ್ನು ಕೂಗುತಿದ್ದನು. ನಾಲ್ಕು ಜನ ಎರಡು ಕಡೆಯಲ್ಲಿಯೂ ಹಿಡಿದುಕೊಂಡು ಎಬ್ಬಿಸಿ ಕರೆದುಕೊಂಡುಹೋಗುತಿದ್ದರು. ಜಲಮಲಾದಿಗಳೆಲ್ಲಾ ಕೂತ ಕಡೆಯಲ್ಲಿಯೇ ಆಗುತಿತ್ತು. ಇಂಥಾ ಉಪಚಾರವನ್ನು ಹೊಂದುತಿದ್ದ ಈ ತಿಂಡಿಪೋತನ ಸ್ಥಿತಿಯನ್ನು ಏನು ಹೇಳೋಣ! ಹೊಟ್ಟೆ ಒಂದು ಬೆಟ್ಟದ ಹಾಗಿತ್ತು. ಕೈಕಾಲೆಲ್ಲಾ ದೊಡ್ಡ ದೊಡ್ಡ ತೊಲೆಯ ಹಾಗಿತ್ತು. ಕೆನ್ನೆಯೆಲ್ಲಾ ದಪ್ಪದಪ್ಪವಾಗಿ ಊದಿಕೊಂಡಿತ್ತು. ಯಾವಾಗಲೂ ಮೇಲು ಸಿರನ್ನೇ ಹುಯ್ಯುತಿದ್ದನು. ರಾತ್ರೆ ಸ್ವಲ್ಪವೂ ನಿದ್ದೆ ಬರುತಿರಲಿಲ್ಲ. ಪ್ರಾತಃಕಾಲದಲ್ಲಿ ಎದ್ದರೆ ಹೊಟ್ಟೆಯಲ್ಲಿ ಏನೋ ಸಂಕಟವಾಗುತಿತ್ತು. ಆದರೂ ತಿಂಡಿಯನ್ನು ಮಾತ್ರ ಇವನು ಕಡಮೆ ಮಾಡುತಿರಲಿಲ್ಲ. ಯಾವ ಹೊಸ ತಿಂಡಿಯನ್ನು ಮಾಡಿಸಿ ತಿನ್ನೋಣವೆಂಬುವುದೇ ಇವನ ಮುಖ್ಯವಾದ ಜಪವಾಗಿತ್ತು. ಇಂಥವನಿಗೆ ರೋಗ ಬರುವುದೇನಾಶ್ಚರ್ಯ ವಲ್ಲ. ತಿಂದ ತಿಂಡಿ ಸ್ವಲ್ಪವೂ ಜೀರ್ಣವಾಗುತಿರಲಿಲ್ಲ. ಅಜೀರ್ಣ

ವಾಯು ಹೆಚ್ಚಿ ಕೈ ಕಾಲುಗಳಲ್ಲಿ ಒಂದು ಬಗೆ ಒಡೆತ ಹುಟ್ಟಿತು.

ಈ ರೀತಿಯಲ್ಲಿ ರೋಗದಿಂದ ಪೀಡಿತನಾಗಿದ್ದ ಲಂಬೋದರನು ಆ ಸ್ಥಳದಲ್ಲಿ ಪ್ರಖ್ಯಾತಿಯನ್ನು ಹೊಂದಿದ್ದ ಒಬ್ಬ ವೈದ್ಯನನ್ನು ಕರೆಯಿಸಿ —ಪಂಡಿತರೆ, ನನಗೆ ಹೀಗೆ ಜಾಡ್ಯವುಂಟಾಗಿದೆ. ತಾವು ಹೊರತು ಗುಣಮಾಡತಕ್ಕವರು ಇನ್ನು ಯಾರೂ ಇಲ್ಲ, ಎಂದನು.

ವೈದ್ಯ—ಜಾಡ್ಯವೇನೊ ಬಲವಾಗಿದೆ. ಆದರೆ ತಮ್ಮ ಆಹಾರ ಕ್ರಮದಿಂದ ತಾವು ರೋಗಕ್ಕೆ ಸಹಾಯ ಮಾಡುತೀರೊ, ಹೇಗೆ?

ಲಂಬೋದರ—ಪಂಡಿತರೆ, ಇಲ್ಲ, ಆಹಾರದಲ್ಲಿ ನಾನು ಎಷ್ಟೊ ಜಾಗರೂಕನಾಗಿದೇನೆ. ಈ ಹಾಳ ಅಡಿಗೆಯವರು ನನಗೆ ನಿತ್ಯವೂ ಅರೆಹೊಟ್ಟೆಯನ್ನೇ ಹಾಕುತಾರೆ. ನಾನು ಹೇಳುವುದೇ ಒಂದು, ಇವರು ಮಾಡುವುದೇ ಒಂದು, ಹೀಗೆ ಆಗಿದೆ.

ವೈದ್ಯ—ತಾವು ನಿದ್ರೆಯನ್ನು ಹೆಚ್ಚಾಗಿ ಮಾಡುತೀರ?

ಲಂಬೋದರ—ಬೆಳಗ್ಗೆ, ಮಧ್ಯಾಹ್ನ, ಸಾಯಂಕಾಲ, ರಾತ್ರೆ, ಯಾವಾಗಲಾದರೂ ಸ್ವಲ್ಪ ನಿದ್ರೆ ಬಂದರೆ ಸಾಕೆಂದು ಹಾಸಿಗೆ ಮೇಲೆಯೇ ಮಲಗಿರುತೇನೆ, ಒಂದುಸಾರಿಯೂ ನಿದ್ರೆ ಬರುವುದಿಲ್ಲ.

ವೈದ್ಯ—ನೀವುಬೆಳಗ್ಗೆ ಎದ್ದು ಸಂಚಾರಮಾಡುವುದುಂಟೊ?

ಲಂಬೋದರ—ನಾನು ಚಳಿಯಲ್ಲಿ ಎದ್ದರೆ, ನನ್ನ ಮೈಗೆ ಆಗುವುದಿಲ್ಲ. ಐದು ಗಳಿಗೆಗೆ ಮುಂಚೆ ನಾನು ಮುಸುಕನ್ನೇ ತೆಗೆಯುವುದಿಲ್ಲ. ಅಂತೂ ನಾನು ಎಷ್ಟು ಜಾಗ್ರತೆಯಾಗಿ ಎದ್ದರೂ, ಹೊಟ್ಟೆಯಲ್ಲಿ ಏನೋ ಉರಿಯುತಲೇ ಇರುವುದು. ತೇಗು ಬರುವುದು ಗೊತ್ತೇ ಇಲ್ಲ. ವಾಯು ಸಡಿಲುವುದಂತೂ ಎಣಿಸುವುದಕ್ಕಾಗುವುದೇ ಇಲ್ಲ.

ವೈದ್ಯ—ಜಾಡ್ಯವೇನೋ ಸ್ವಭಾವದಲ್ಲಿ ಕೆಟ್ಟದ್ದಾಗಿ ತೋರುತ್ತಿದೆ.

ಲಂಬೋದರ—ಅಫೀಮನ್ನು ತಿಂದರೆ ನಿದ್ರೆ ಬರುವುದೆಂದು ಒಬ್ಬರು ಹೇಳಿದರು. ನಾನು ಅದೇಪ್ರಕಾರ ಸಾಧಿಸುತಿದೇನೆ. ನಿಂಬೇಕಾಯಿ ಗಾತ್ರದವರೆಗೂ ಅಫೀಮನ್ನು ನಿತ್ಯವೂ ನುಂಗುತಿದೇನೆ. ನಿದ್ರೆ ಬೇರೆ ಬರುವುದಿಲ್ಲ. ಮತ್ತಾಗಿ ಬಿದ್ದಿರುತೇನೆ. ಮಲವಿಸರ್ಜನೆ ಸರಿಯಾಗಿ ಆಗುವುದೇ ಇಲ್ಲ.

ವೈದ್ಯ—ನೀವು ಹೊರಗೆ ಸಂಚಾರಮಾಡುವುದು ಉತ್ತಮ.

ಲಂಬೋದರ—ಎಂಟಕ್ಕೆ ಹತ್ತಕ್ಕೆ ಎತ್ತಿನ ಗಾಡಿಯಲ್ಲಿ ಕೂತು ಒಂದು ಕೊಂಬಿನ ಕೂಗು ಹಾಗೆಯೇ ಹೋಗಿಬರುತಿದ್ದೆ. ಗಾಡಿಯ ಕುಲುಕಾಟದಿಂದ ಮೈ ಸೇನೆ ಅಲುಗಿ ಸಂಕಟವಾಯಿತು. ಆದ್ದರಿಂದ ಈಚೆಗೆ ಒಂದು ಪಲ್ಲಕ್ಕಿಯಲ್ಲಿ ಕೂತು ಹೊರಡುತಿದ್ದೆ. ಒಂದೊಂದುಕಡೆಗೆ ಎಂಟೆಂಟು ಜನ ಬೆಸ್ತರನ್ನು ಹಾಕಿದರೂ ಹೊರಲಾರೆವೆಂದು ಅವರು ಓಡಿಹೋಗುತಿದ್ದರು. ಅದರಲ್ಲಿಯೂ ಕುಲುಕಾಟ ಹೆಚ್ಚಾಯಿತು. ಆದಕಾರಣ ಅದನ್ನೂ ಈಚೆಗೆ ಬಿಟ್ಟುಬಿಟ್ಟೆ.

ವೈದ್ಯ—ನೀವು ತಿನ್ನುವ ಆಹಾರವನ್ನು ಸ್ವಲ್ಪ ಕಡಮೆಮಾಡಿ, ನಿಮ್ಮ ಮನೆಯಲ್ಲಿಯೇ ದಿನಕ್ಕೆ ಐದುಸಾರಿ ಶತಪಥವನ್ನು ಸುತ್ತೀರಾ?

ಲಂಬೋದರ—ಪಂಡಿತರೆ, ಹೀಗೆಲ್ಲಾ ಗುಣವಾಗುವುದಿಲ್ಲ. ನನ್ನ ದೇಹಪ್ರಕೃತಿಯನ್ನು ಇನ್ನೂ ತಾವು ಚೆನ್ನಾಗಿ ಪರೀಕ್ಷಿಸಬೇಕು. ನಾಡಿಯನ್ನು ಚೆನ್ನಾಗಿ ನೋಡಿ ಹೇಳಿ. ಇದು ತಮ್ಮ ಹಸ್ತಗುಣದಿಂದ ವಾಸಿಯಾಗಬೇಕು.

ವೈದ್ಯ—ಅಳಲೇಕಾಯಿ ಕಷಾಯವನ್ನೂ, ಜಾಪಾಳದ ಮಾತ್ರೆಯನ್ನೂ, ರಸಗಂಧಕ ಪಾಷಾಣಗಳನ್ನೂ, ನಿಮಗೆ ಕೊಟ್ಟರೆ, ನಿಮ್ಮ ರೋಗ ಹೋಗುವುದೆಂದು ನೀವು ತಿಳಿದು ಇದ್ದೀರಿ. ಆದರೆ, ನಿಮ್ಮದು ಔಷಧಕ್ಕೆ ಗುಣವಾಗತಕ್ಕ ಜಾಡ್ಯವಲ್ಲ.

ಲಂಬೋದರ—ನೀವು ಏನು ಕಠಿಣವಾಗಿ ಮಾತನಾಡುತೀರಿ! ಸ್ವಲ್ಪವೂ ದಯಾರಸವಿಲ್ಲ.

ವೈದ್ಯ—ನನಗೆ ತಿಳಿದುದನ್ನೆಲ್ಲಾ ನಾನು ಆಗಲೇ ನಿಮಗೆ ಹೇಳಿಬಿಟ್ಟೆ, ನಿಮಗೆ ಚಿಕಿತ್ಸೆಯನ್ನು ಮಾಡುವುದಕ್ಕೆ ದೇವಪುರದಲ್ಲಿ ಒಬ್ಬ ತಕ್ಕ ಪಂಡಿತರು ಇದಾರೆ. ನಾನು ಅವರಿಗೆ ಕಾಗದವನ್ನು ಬರೆದು ಕೊಡುತೇನೆ. ಅವರು ಅನೇಕರಿಗೆ ವಾಸಿಮಾಡಿದಾರೆ. ನಿಮಗೆ ಅವರಿಂದ ಅನುಕೂಲವಾಗಬಹುದು.

ಹೀಗೆ ಹೇಳಿದ ವೈದ್ಯನ ಮಾತನ್ನ ಕೇಳಿ, ಲಂಬೋದರನು ಬಹಳ ಅಧೈರ್ಯಪಟ್ಟನು. ಆದಿನ ಸಾಯಂಕಾಲ ತನ್ನ ರೋಗ ಇನ್ನೂ ಹೆಚ್ಚೀ

ತೆಂದು ತಿಳಿದು, ದೇವಪುರಕ್ಕೆ ಹೋಗಿ ಅಲ್ಲಿನ ಪಂಡಿತನನ್ನು ಕಾಣ ಬೇಕೆಂದು ನಿಶ್ಚಯಿಸಿಕೊಂಡನು. ಇದಕ್ಕಾಗಿ ಒಂದು ಪಲ್ಲಕ್ಕಿಯನ್ನು ಏರ್ಪಡಿಸಿಕೊಂಡು ಅದರಲ್ಲಿ ಕೂತಹಾಗೆಯೇ ಆಹಾರಾದಿಗಳನ್ನು ತೆಗೆದು ಕೊಳ್ಳುವುದಕ್ಕೆ ಅನುಕೂಲಮಾಡಿಕೊಂಡಿದ್ದನು. ದೇವಪುರವು ಅಲ್ಲಿಗೆ ಒಂದು ದಿವಸದ ಪಯಣ. ಆದರೆ ಲಂಬೋದರನು ಅದನ್ನು ನಾಲ್ಕು ದಿವಸದ ಪಯಣವಾಗಿಮಾಡಿಕೊಂಡು ಆ ವೂರಿಗೆ ತಲಪಿ, ಅಲ್ಲಿ ವೈದ್ಯನ ಮನೆಯನ್ನು ವಿಚಾರಿಸಿಕೊಂಡು ಹೋಗಿ ಸೇರಿದನು. ಪಲ್ಲಕ್ಕಿಯಿಂದ ಇವನನ್ನು ಏಳೆಂಟು ಜನ ಹಿಡಿದು, ಈಚೆಗೆ ಇಳಿಸಿಕೊಂಡು ಒಳಕ್ಕೆ ಕರೆದುಕೊಂಡು ಹೋದರು.

ಆ ಮನೆಯೊಳಗೆ ಶಿರೋಮಣಿ ಎಂಬ ಪಂಡಿತನು—ಒಬ್ಬ ರೋಗಿಗೆ ಈ ರೊಟ್ಟಿಯನ್ನು ತಿನ್ನು ಎನ್ನುವುದು, ಮತ್ತೊಬ್ಬ ರೋಗಿಗೆ ಈ ತುಪ್ಪ ವನ್ನು ಅನ್ನಕ್ಕೆ ಹಾಕಿಕೊ ಎನ್ನುವುದು, ಈ ರೀತಿಯಲ್ಲಿ ರೋಗಿಗಳಿಗೆ ಉಪಚಾರವನ್ನು ಮಾಡುತಿದ್ದನು. ಲಂಬೋದರನಿಗೆ ಆ ಪಂಡಿತ ನನ್ನು ನೋಡಿ ಬಹು ಸಂತೋಷವಾಯಿತು; ಇವನು ತನ್ನ ಮನಸ್ಸಿ ನಲ್ಲಿ—ಶಹಬಾಸು, ಪಂಡಿತ ಎಂದರೆ ಈತನೇ ಸರಿ, ಬೇಕಾದ ತಿಂಡಿ ಯನ್ನು ತಿನ್ನಿ ಎಂದು ತಾನೇ ರೋಗಿಗಳಿಗೆ ಕೊಡುತಾನೆ. ನಮ್ಮ ಊರಿನ ವೈದ್ಯನಹಾಗೆ ಇದು ತಿನ್ನಬೇಡ ಅದು ಕುಡಿಯಬೇಡ ಎಂದು ಹೇಳುವುದಿಲ್ಲ. ಔಷಧದಲ್ಲಿ ತ್ರಾಣವಿದ್ದರೆ, ಪಥ್ಯವು ಯಾತಕ್ಕೆ ? ಈತ ನನಗೆ ಸಿಕ್ಕಿದ್ದು ನನ್ನ ಪುಣ್ಯೋದಯ, ಎಂದುಕೊಂಡನು. ತರುವಾಯ ಶಿರೋಮಣಿ ಪಂಡಿತನನ್ನು ಕಂಡು, ತಮ್ಮ ಊರ ಪಂಡಿತನ ಕಾಗದ ವನ್ನು ಕೊಟ್ಟು ತನ್ನ ರೋಗವನ್ನೆಲ್ಲಾ ಹೇಳಿದನು. ಅದಕ್ಕೆ ಆ ಪಂಡಿತನು—ಸ್ವಾಮಿ, ನಿಮ್ಮ ಜಾಡ್ಯ ನನಗೆ ಗೊತ್ತಾಯಿತು. ಇದನ್ನು ವಾಸಿಮಾಡುವ ಭಾರ ನನ್ನದಾಗಿರಲಿ. ಆದರೆ ನಾನು ಹೇಳಿದಂತೆ ಒಂದು ತಿಂಗಳಮಟ್ಟಿಗೆ ನೀವು ಕೇಳಬೇಕು. ನಿಮ್ಮ ಆಳುಗಳನ್ನೆಲ್ಲಾ ಒಬ್ಬರೂ ಇಲ್ಲದಹಾಗೆ ಊರಿಗೆ ಕಳುಹಿಸಿಬಿಡಬೇಕು. ನನ್ನ ಮಾತಿನ ಪ್ರಕಾರ ನಡೆಯದೆಹೋದರೆ, ಯಾವ ದೊರೆಯೇ ಆಗಲಿ, ನಾನು ಔಷಧ ವನ್ನು ಕೊಡಲಾರೆ ಎಂದನು. ಇದಕ್ಕೆ ಲಂಬೋದರನು—ತಾವು

ಹೇಳಿದ್ದರಿಂದ ಈ ಮಾತಿಗೆ ಒಪ್ಪಿಕೊಳ್ಳುತೇನೆ. ಆದರೆ ನನ್ನ ಉಪ ಚಾರಕ್ಕಾಗಿ ಯಾರೂ ಇರಕೂಡದು ಎಂದು ಹೇಳಿದ ಮಾತು ನಿಮ್ಮ ಚಿಕಿತ್ಸೆಗೆ ವಿರೋಧವಾಗಿದೆ. ಔಷಧವನ್ನು ತೆಗೆದುಕೊಂಡರೆ, ನನ್ನ ಆರೈಕೆಗೆ ಯಾರೂ ಇಲ್ಲದೆ ಪಥ್ಯ ಕೆಟ್ಟುಹೋದೀತು.

ವೈದ್ಯ—ನಾನು ಚಿಕಿತ್ಸೆಯನ್ನು ಮಾಡಿ ವಾಸಿಮಾಡುವ ಭಾರ ವನ್ನು ವಹಿಸಿದ ಮೇಲೆ, ಅದಕ್ಕೆ ತಕ್ಕ ಏರ್ಪಾಡುಗಳನ್ನು ಮಾಡಿ ಕೊಳ್ಳುವ ಕೆಲಸವೂ ನನ್ನದಾಗಿದೆ. ಇಷ್ಟವಿದ್ದರೆ, ಔಷಧವನ್ನು ತೆಗೆದು ಕೊಳ್ಳಿ. ಇಲ್ಲದಿದ್ದರೆ ಊರಿಗೆ ಹೊರಡಿ. ತಮ್ಮ ದಾಕ್ಷಿಣ್ಯಕ್ಕೋಸ್ಕರ ಚಿಕಿತ್ಸೆ ಕ್ರಮವನ್ನು ಬಿಟ್ಟು ಬಿಟ್ಟು ನನ್ನ ಹೆಸರನ್ನು ಕೆಡಿಸಿಕೊಳ್ಳಲಾರೆ. ಜಾಡ್ಯವು ಪ್ರಬಲವಾಗಿದೆ. ಆದರೂ ನಿಮ್ಮ ಮುಷ್ಕರವು ಅದನ್ನು ವೃದ್ಧಿ ಮಾಡುತಿದೆ.

ಲಂಬೋದರ—ತಮ್ಮ ಚಿಕಿತ್ಸೆಯಲ್ಲಿ ನನಗೆ ಸೇನೆ ನಂಬಿಕೆವುಂಟು. ಆದಕಾರಣ ತಾವು ಹೇಳಿದಂತೆಯೇ ಆಗಲಿ. ಹೀಗೆಂದು ಹೇಳಿ ತನ್ನ ಚಾಕರರನ್ನೆಲ್ಲಾ ಲಂಬೋದರ ಊರಿಗೆ ಕಳುಹಿಸಿ ಬಿಟ್ಟನು.

ವೈದ್ಯ—ಈ ದಿನ ನಿಮ್ಮ ದೇಹಸ್ಥಿತಿ ಹೇಗಿದೆ ?

ಲಂಬೋದರ—ಇಷ್ಟುದೂರ ಪ್ರಯಾಣಮಾಡಿ ಬಂದದರಿಂದ ವಿಗಡವಾಗಬಹುದು ಎಂದು ತಿಳಿದು ಇದ್ದೆ. ಆದರೆ ಹಾಗಿಲ್ಲ, ಎಂದಿ ಗಿಂತಲೂ ಈ ದಿನ ಹಸಿವು ಹೆಚ್ಚಾಗಿದೆ. ಆದ್ದರಿಂದ ದಯಮಾಡಿ ಜಾಗ್ರತೆಯಲ್ಲಿ ನನಗೆ ಅನ್ನವನ್ನು ಹಾಕಿಸಬೇಕು.

ವೈದ್ಯ—ಸ್ವಾಮಿ, ಈ ರಾತ್ರೆ ಎಂಟು ಗಂಟೆಗೆ ಎಡೆ ಸಿದ್ಧವಾಗು ವುದು. ಈ ಮಧ್ಯೆ ನಾನು ಔಷಧ ಕೊಡತಕ್ಕ ರೋಗಿಗಳನ್ನು ಹೋಗಿ ನೋಡಿಕೊಂಡು ಬರುತೇನೆ.

ಹೀಗೆ ಹೇಳಿ, ಶಿರೋಮಣಿ ಪಂಡಿತನು ಹೊರಕ್ಕೆ ಹೊರಟು ಹೋದನು. ಈ ಮಧ್ಯೆ ಲಂಬೋದರನು ತನ್ನ ಮನಸ್ಸಿನಲ್ಲಿ—ಈಗಲೇ ನನಗೆ ಊಟದಹೊತ್ತು ಮಿಾರಿತು. ಇನ್ನೂ ಎರಡು ಗಂಟೆ ಕಾಯ ಬೇಕೆಂದು ಪಂಡಿತ ಹೇಳುತಾನೆ. ಆದ್ದರಿಂದ ಪ್ರಾಯಶಃ ಒಳ್ಳೆ ಅಡಿಗೆ ಯನ್ನೇ ಮಾಡಿಸಿಯಾನು. ನಾನು ಈ ಮನೆಗೆ ಬಂದಾಗ ಬಡಬಗ್ಗರಿಗೆ

ಎಷ್ಟೋ ಉಪಚಾರವನ್ನು ಮಾಡಿ ಬೇಕಾದ ತಿಂಡಿಯನ್ನು ಕೊಡುತಿದ್ದ; ನನ್ನಂಥವನಿಗೆ ಏನುಕಡಮೆ. ಪಂಚಭಕ್ಷ್ಯವೇ ತಯಾರಾಗುತಿರ ಬಹುದು. ವೈದ್ಯನ ಅಡಿಗೆಯವನು ಬುದ್ಧಿಶಾಲಿಯಾಗಿಯೇ ಇರ ಬಹುದು, ಹೀಗೆಂದುಕೊಳ್ಳುತಿದ್ದನು. ಹಸಿವು ಹೆಚ್ಚಾಯಿತು. ಕೋಪ ಬಂತು. ಮನೆಯಲ್ಲಿದ್ದ ಪರಿಚಾರಕನನ್ನು ಕರೆದು—ಪಂಡಿತರು ಈಗಲೇ ಮನೆಗೆ ಬರಲಾರರು. ನನ್ನ ಊಟಕ್ಕೆ ಹೊತ್ತಾಯಿತು. ತಂದು ಬಡಿಸು, ಎಂದನು. ಪರಿಚಾರಕನು—ಸ್ವಾಮಿ, ಪಂಡಿತರ ಅಪ್ಪಣೆಯಿಲ್ಲದೆ ರೋಗಿ ಗಳು ಹೇಳುವ ಮಾತನ್ನು ನಾವು ಕೇಳಕೂಡದು, ಎಂದನು. ಅದಕ್ಕೆ ಲಂಬೋದರನು—ಇನ್ನೂ ಐದುಗಳಿಗೆ ಕಳೆಯಬೇಕಾಯಿತಲ್ಲಾ ! ಹೊತ್ತು ಹೋಗುವುದೇ ಇಲ್ಲ. ಬಹು ತಾಮಸವಾಗಿದೆ ಎಂದು ಹೇಳಿ ಕೊಳ್ಳುತಿದ್ದನು.

ಹೇಳಿದ್ದ ಹೊತ್ತಿಗೆ ಸರಿಯಾಗಿ ವೈದ್ಯ ಮನೆಗೆಬಂದನು. ಮೇಲೆ ಎಲೆಯನ್ನು ಮುಚ್ಚಿ ಮುಚ್ಚಿ ಐದು ಆರು ಬೆಳ್ಳಿ ತಟ್ಟೆಗಳನ್ನು ತಂದಿ ಟ್ಟರು. ಮೇಲೆ ಮುಚ್ಚಿ ಒಂದು ಬೆಳ್ಳಿಪಂಚಪಾತ್ರೆಯನ್ನೂ ತಂದಿ ಟ್ಟರು. ಲಂಬೋದರನಿಗೆ ಅನೇಕ ಭಕ್ಷ್ಯಭೋಜ್ಯಗಳು ಬಂದಿರಬಹುದು. ಹೊಟ್ಟೆಯನ್ನು ತುಂಬಿಕೊಳ್ಳೋಣವೆಂದು ಆಸೆ ಹುಟ್ಟಿತು. ಅವನು ಆ ತಟ್ಟೆಗೆ ಕೈ ಹಾಕುವ ಸಮಯದಲ್ಲಿ ಶಿರೋಮಣಿಯು—ಸ್ವಾಮಿ, ಬೇರೆ ಔಷಧವನ್ನು ಕೊಟ್ಟರೆ ನಿಮಗೆ ತಡೆಯುವುದಿಲ್ಲ. ನೀವು ತಿನ್ನುವ ಆಹಾರಕ್ಕೆ ಔಷಧವನ್ನು ಹಾಕಿದೆ. ಆದರೆ ನಿಮ್ಮ ರುಚಿಗೆ ಆ ಔಷಧ ತೋರಲಾರದು. ಔಷಧದ ವೇಗವು ಹೆಚ್ಚಾದ್ದರಿಂದ, ಹೆಚ್ಚಾಗಿ ತಿಂದರೆ ವಿರೋಧವಾದೀತು. ಆದಕಾರಣ ನೀವು ಆಹಾರವನ್ನು ಮಿತವಾಗಿಯೇ ತಿನ್ನಬೇಕು, ಎಂದು ಹೇಳಿ ತಟ್ಟೆಗಳ ಮೇಲಿದ್ದ ಎಲೆಯನ್ನು ತೆಗೆಯಿ ಸಿದನು. ಒಂದರಲ್ಲಿ ಒಂದುಹಿಡಿ ದ್ರಾಕ್ಷಿ, ಇನ್ನೊಂದರಲ್ಲಿ ಎರಡು ಕಿತ್ತಿಳೆಹಣ್ಣು, ಮತ್ತೊಂದರಲ್ಲಿ ನಾಲ್ಕು ಖರ್ಜೂರ, ಹೀಗೆ ನಾಲ್ಕು ಐದು ಬಗೆ ಹಣ್ಣುಗಳನ್ನು ಇರಿಸಿದ್ದರು. ಪಂಚಪಾತ್ರೆಯಲ್ಲಿ ಬರೀ ನೀರು ಇತ್ತು. ಇದೆಲ್ಲವನ್ನೂ ನೋಡಿ ಲಂಬೋದರನಿಗೆ ವಿಶೇಷವಾಗಿ ಆಗ್ರಹ ಬಂತು. ಅವನು ವೈದ್ಯನನ್ನು ಕುರಿತು—ಏನಿರಯ್ಯ, ಇದೇಯೋ

ನೀವು ನನಗೆ ಮಾಡಿಸಿರುವ ಭಕ್ಷ್ಯಭೋಜ್ಯಗಳು! ನನ್ನ ಐಶ್ವರ್ಯಕ್ಕೆ ಈ ದರಿದ್ರ ಆಹಾರವನ್ನು ತಿನ್ನಲೆ? ಎಂದನು. ಪಂಡಿತನು ಸುಮ್ಮನಿರದೆ, ನಾನು ಬೇಕೆಂತಲೇ ಈ ತಿಂಡಿಯನ್ನು ಇಡಿಸಿದೇನೆ, ಇದಲ್ಲದೆ, ನಿಮಗೆ ಬೇಕಾದ ಪಕ್ವಾನ್ನಗಳನ್ನು ಬಡಿಸಿದರೆ, ಮಾರ್ಗಾಯಾಸದಿಂದ ದಣಿದಿರುವ ನಿಮಗೆ ಜ್ವರ ಬಂದೀತು, ಎಂದು ಹೇಳಿದನು. ಲಂಬೋದರನಿಗೆ ಇತರ ಮಾರ್ಗವೇನೂ ಇಲ್ಲದೆ ಹೋಯಿತು. ಆ ಹಂಣುಗಳನ್ನು ತಿಂದು, ನೀರನ್ನು ಕುಡಿದು ಸಮ್ಮನೆ ಆದನು. ತಿಂಡಿಯನ್ನು ತಿಂದ ಕೂಡಲೆ ಮಲಗಿಕೊಂಡು ನಿದ್ರೆಮಾಡುವ ಅಭ್ಯಾಸವು ಇವನಿಗಿತ್ತು. ಆದರೆ ಶಿರೋಮಣಿ ಪಂಡಿತನು ಚಮತ್ಕಾರವಾದ ಮಾತುಗಳನ್ನಾಡುತಾ ನಾಲ್ಕುಗಳಿಗೇವರೆಗೆ ಕೂರಿಸಿಕೊಂಡನು. ತರುವಾಯ ಒಂದು ಚಿಕ್ಕ ಮನೆಯಲ್ಲಿ ಹಾಸಿಗೆಯನ್ನು ಹಾಸಿ ಅಲ್ಲಿಗೆ ಲಂಬೋದರನನ್ನು ಒಬ್ಬ ಆಳು ಕರೆದುಕೊಂಡು ಹೋದನು. ಆ ಹಾಸಿಗೆಯ ಸ್ಥಿತಿಯನ್ನು ಏನು ಹೇಳೋಣ! ಮಂಚವಿಲ್ಲ, ಮೆತ್ತೆ ಇಲ್ಲ, ಸಂದಿಸಂದಿಗೆ ಹಾಕಿಕೊಳ್ಳುವ ದಿಂಬುಗಳು ಮೊದಲೇ ಇಲ್ಲ. ಸೊಳ್ಳೇ ತೆರೆಯನ್ನು ಅಲ್ಲಿಗೆ ತರಲೇ ಇಲ್ಲ. ಆದರೆ ಅಲ್ಲಿದ್ದದ್ದೇನು? ಒಂದು ಚಾಪೆಯನ್ನೂ ಅದರಮೇಲೆ ಒಂದು ಜಮುಖಾನವನ್ನೂ ಹಾಸಿ ಒಂದು ತಲೆದಿಂಬನ್ನು ಇಟ್ಟಿದ್ದರು. ಇದನ್ನು ಕಂಡು ಲಂಬೋದರನಿಗೆ ಕೋಪ ಇನ್ನೂ ಹೆಚ್ಚಿತು. ಅವನು ಆಳಿನ ಮುಖವನ್ನು ದುರುಗುಟ್ಟಿ ಕೊಂಡು ನೋಡಿ— ಏನೆಲಾ, ನನಗೆ ಇದೇನೆಲಾ ಹಾಸಿಗೆ? ಸರಿಯಾದ ಹಾಸಿಗೆಯನ್ನು ತಂದು ಹಾಸು. ಎಂದು ಅಹಂಕಾರದಿಂದ ಗದರಿಸಿದನು. ಆಗ ಆ ಆಳು—ತಮ್ಮ ಹಾಸಿಗೇ ವಿಷಯದಲ್ಲಿ ಪಂಡಿತರು ನನಗೆ ಮಾಡಿದ ಅಪ್ಪಣೆಯನ್ನು ನಾನು ಸರಿಯಾಗಿಯೇ ತಿಳಿದು ಕೆಲಸ ಮಾಡಿದೇನೆ. ಅವರ ಮಾತನ್ನು ಮೀರಿ ನಿಮಗೆ ಆಗುವ ಚಿಕಿತ್ಸೆಯನ್ನು ಕೆಡಿಸಲಾರೆ, ಎಂದು ಹೇಳುತಾ ಆ ಚಿಕ್ಕಮನೆಯನ್ನು ಬಿಟ್ಟು ಹೊರಕ್ಕೆ ಹೋಗಿ, ಹೊರಗಡೇ ಬಾಗಿಲನ್ನು ಹಾಕಿಕೊಂಡನು. ಲಂಬೋದರನಿಗೆ ರೋಷ ಇದ್ದುದೂ ಹೆಚ್ಚಿ ವೈದ್ಯನ ಕೆಟ್ಟತನಕ್ಕೆ ಹೇಗೆ ಶಿಕ್ಷೆಯನ್ನು ಮಾಡಬೇಕೆಂದು ಯೋಚಿಸುತಿದ್ದನು. ಹಾಗೆಯೇ ನಿದ್ರೆ ಬಂತು.

ಬೆಳಗಾಗುವ ತನಕಲೂ ಎಚ್ಚರವಾಗಲಿಲ್ಲ. ಪಂಡಿತನು ಪ್ರಾತಃಕಾಲ ದಲ್ಲಿ ಎದ್ದು ಲಂಬೋದರ ಮಲಗಿದ್ದ ಕೊಟಡಿಗೆ ಹೋಗಿ ವಿಶೇಷ ಮರ್ಯಾದೆಯಿಂದ ಅವನ ಶರೀರಸ್ಥಿತಿಯನ್ನು ವಿಚಾರಿಸಿದನು. ರಾತ್ರೆ ಒಳ್ಳೆನಿದ್ರೆ ಬಂದಿದ್ದಕಾರಣ ಇವನ ಸಿಡುಕೆಲ್ಲಾ ಕಡಮೆಯಾಗಿತ್ತು. ಪಂಡಿತನು ಮರ್ಯಾದೆಯಿಂದ ಆಡಿದ ಮಾತು ಕಳಲಿಹೋಗುತಿದ್ದ ಲಂಬೋದರನ ಆಗ್ರಹವೆಂಬ ಬೆಂಕಿಯನ್ನು ಚೆನ್ನಾಗಿ ಇದ್ದಿಲ ಮಾಡಿತು.

ಲಂಬೋದರನು ಪಂಡಿತನಿಗೆ ಸರಿಯಾದ ಉತ್ತರವನ್ನು ಹೇಳಿ ದನು. ಆದರೂ ಹಾಸಿಗೆ, ಆಹಾರ ಉಪಚಾರ, ಇವುಗಳ ವಿಷಯದಲ್ಲಿ ಇವನಿಗಿದ್ದ ಅಸಮಾಧಾನವನ್ನು ಮಾತ್ರ ಮರೆಮಾಚಲಿಲ್ಲ. ಆಗ ವೈದ್ಯನು—ನಾನು ಹೇಳಿದಹಾಗೆಲ್ಲಾ ತಾವು ಕೇಳಬೇಕೆಂದು ಮೊದಲೇ ನಿಮ್ಮಲ್ಲಿ ಕಟ್ಟುಮಾಡಿಕೊಂಡಿದ್ದೆ, ತಮ್ಮ ಆರೋಗ್ಯಹೊರತು ನನಗೆ ಬೇರೆ ತಾತ್ಪರ್ಯವಿಲ್ಲ. ನಿಮ್ಮ ಹಾಸಿಗೆಗೂ ಸಹಿತ ಔಷಧವನ್ನು ಹಾಕಿಸಿ ದೇನೆ, ಈ ಔಷಧವನ್ನು ಮೆತ್ತೆಗೆ ಹಾಕುವುದಕ್ಕಾಗುವುದಿಲ್ಲ, ಆದ್ದ ರಿಂದ ಈ ಜಮಖಾನವನ್ನು ಹಾಕಿಸಿದೇನೆ, ಎಂದು ಹೇಳಿದನು. ಮಾರನೇದಿನ ಊಟಕ್ಕೆ ಸಿದ್ಧವಾಯಿತು; ಒಂದು ಹಿಡಿ ಅನ್ನ ಒಂದು ಬಟ್ಟಲು ಪಾಯಸ, ಎರಡು ಕಿತ್ತಿಳೇಹಣ್ಣು, ಇಷ್ಟನ್ನೂ ತಂದು ಬಡಿಸಿ ದರು. ಲಂಬೋದರನ ಹೊಟ್ಟೆಯ ಒಂದು ಮೂಲೆಗೆ ಕೂಡ ಇದು ಸಾಕಾಗಲಿಲ್ಲ. ಆನೇಹೊಟ್ಟೆಗೆ ಅರಕಾಸಿನ ಮಜ್ಜಿಗೆ ಎಂದ ಹಾಗಾ ಯಿತು. ಆದರೂ ಯತ್ನವಿಲ್ಲದೆ ಅದನ್ನೇ ತಿಂದು ಸುಮ್ಮನಾದನು.

ಆಮೇಲೆ ಪಂಡಿತನು ಅವನನ್ನು ಒಂದು ಚಿಕ್ಕಮನೆಗೆ ಎತ್ತಿಸಿ ಕೊಂಡು ಹೋಗಿ ನಿಂತುಕೊಳ್ಳೆಂದು ಹೇಳಿದನು. ಲಂಬೋದರನು— ಪಂಡಿತರೇ ಕಾಲೆಲ್ಲಾ ಊದಿದೆ. ಒಳಗೆ ನೋವಾಗುತಿದೆ. ನಿಂತು ಕೊಳ್ಳಲಾರೆ, ಎಂದು ಹೇಳಿದನು. ಇದಕ್ಕೆ ಪಂಡಿತನು—ಎರಡು ಕೈಯಲ್ಲಿಯೂ ಎರಡು ದೊಣ್ಣೆಗಳನ್ನು ಊರಿಕೊಂಡು ಸ್ವಲ್ಪ ಏಳಿ. ಬೇಕಾದರೆ ಗೋಡೆಯನ್ನು ಒರಗಿಕೊಳ್ಳಿ ಎನಲು, ರೋಗಿಯು ಬಹು ಪ್ರಯಾಸದಿಂದ ದೊಣ್ಣೆಯನ್ನು ಊರಿಕೊಂಡು ಎದ್ದು ನಿಂತುಕೊಂಡನು.

ಒಂದು ಕಾಲು ಇನ್ನೊಂದು ಕಾಲಿಗಿಂತ ಹೆಚ್ಚಾಗಿ ಬಾತಿದ್ದರಿಂದ, ಒಂಟಿ ಕಾಲಲ್ಲಿಯೇ ನಿಂತುಕೊಂಡನು. ದೊಣ್ಣೆಗಳೆರಡೂ ಊರೆಯಾದುವು. ಆಗ ಪಂಡಿತನು ಥಟ್ಟನೆ ಆ ಕೊಟಡಿಯನ್ನು ಬಿಟ್ಟು ಹೊರಕ್ಕೆ ಹೋಗಿ ಕದವನ್ನು ಮುಚ್ಚಿಕೊಂಡನು. ಆ ಕೊಟಡಿಯ ನೆಲವೆಲ್ಲಾ ದೊಡ್ಡ ಕಬ್ಬಿಣದ ತಗಡಾಗಿತ್ತು. ಮುಂಚಿತವಾಗಿಯೇ ಪಂಡಿತನು ಗುಟ್ಟಾಗಿ ಏರ್ಪಡಿಸಿದ್ದಂತೆ, ಅದರ ಕೆಳಗೆ ಬೆಂಕಿ ಹಾಕಿ ಉರಿಸುತಿದ್ದರು. ಆ ಕಬ್ಬಿಣದ ನೆಲವು ಚೆನ್ನಾಗಿ ಕಾಯಿತು. ಲಂಬೋದರನ ಕಾಲಿಗೆ ಬಿಸಿಹತ್ತಿತು. ಆ ಕಾಲನ್ನು ಮೇಲಕ್ಕೆ ಎತ್ತಿಕೊಂಡು, ಇನ್ನೊಂದು ಕಾಲನ್ನು ಮೆಲ್ಲಗೆ ಊರಿ ಮುಂದಕ್ಕೆ ಹೊರಡಲು ಯತ್ನಿಸಿದನು. ಅದಕ್ಕೂ ಬಿಸಿ ಹತ್ತಿತು. ಕೊನೆಗೆ ಬಾಗಿಲು ತೆಗೆಯಿರಿ ಎಂದು ಅರಚುತ್ತಾ, ಕೋಲನ್ನು ಊರಿಕೊಂಡು ಮೂಲೆಯಿಂದ ಮೂಲೆಗೆ ಬೇಗ ಬೇಗ ಸುತ್ತಾಡುವುದಕ್ಕೆ ಆರಂಭಿಸಿದನು. ನಾಲ್ಕು ಘಳಿಗೆ ಓಡಾಟವಾಯಿತು. ಆಯಾಸ ಹೆಚ್ಚಾಯಿತು. ಮೈ ಎಲ್ಲಾ ಬೆವರಿ ನೀರು ನೀರಾಯಿತು. ಪಂಡಿತನು ರೋಗಿಗೆ ಆದ ಸಾಧಕ ಸಾಕೆಂದು ಯೋಚಿಸಿ, ಒಂದು ಹಾಸಿಗೆ ಮೇಲೆ ಅವನನ್ನು ಮಲಗಿಸುವಂತೆ ಆಳಿಗೆ ಹೇಳಿದನು. ಅದರಮೇಲೆ ಅವನು ಕೊಟಡಿಯಿಂದ ಈಚೆಗೆ ಕರೆತರಲ್ಪಟ್ಟು ಬೇರೆ ಹಾಸಿಗೆಮೇಲೆ ಮಲಗಿಕೊಂಡನು. ಆ ವಿಶ್ರಾಂತಿಯು ಅವನಿಗೆ ಎಂದೂ ಇಲ್ಲದ ಆನಂದವನ್ನುಂಟುಮಾಡಿತು. ಸಾಯಂಕಾಲಕ್ಕೆ ಪಂಡಿತನು ರೋಗಿಯನ್ನು ಕಾಣಿಸಿಕೊಂಡನು. ವೈದ್ಯನಮೇಲೆ ಲಂಬೋದರನಿಗೆ ಅತ್ಯಂತ ಕೋಪ ಬಂದಿತ್ತು. ಆದರೂ ಎಲೆಗೆ ತಂದು ಬಡಿಸಿದ ಅನ್ನದ ವಾಸನೆಯಿಂದ ಅದು ಸ್ವಲ್ಪ ಅಡಗಿತು. ಈ ಪ್ರಕಾರ ರೋಗಿಗೆ ವೈದ್ಯನಮೇಲೆ ಸಿಟ್ಟು ಹೆಚ್ಚುತಾ ಬಂದಹಾಗೆಲ್ಲಾ, ಜಾಡ್ಯ ಹರಿಯುತಾ ಬಂತು. ಪಂಡಿತ ಹೇಳಿದಂತೆ ಕೇಳಿಕೊಂಡು ಲಂಬೋದರನು ಒಂದು ತಿಂಗಳವರೆಗೂ ಕಾಲಹರಣಮಾಡಿದನು. ಈ ಒಂದು ತಿಂಗಳು ಅವನಿಗೆ ಒಂದು ವರುಷದ ಹಾಗೆ ಕಂಡಿತು. ಇವನ ಅಪ್ಪಣೇ ಪ್ರಕಾರ ಇವನ ಚಾಕರರೂ ಬೆಸ್ತರೂ ಒಂದು ತಿಂಗಳ ತರುವಾಯ ಬಂದು ಕಾದಿದ್ದರು. ಲಂಬೋದರನು ವೈದ್ಯನಿಗೂ ಹೇಳದೇ ಮೌನದಲ್ಲಿ ಕೂತು ತನ್ನ

ಊರಿಗೆ ಹೊರಟನು. ಬರುತಾ ತನ್ನ ಮನಸ್ಸಿನಲ್ಲಿ ನಮ್ಮ ಊರ ಪಂಡಿತನು ಈ ನೀಚನಾದ ಶಿರೋಮಣಿಗೆ ಏನೋ ಹೇಳಿಕೊಟ್ಟು ಹೀಗೆ ಮಾಡಿಸಿದಾನೆ, ಇರಲಿ. ನಾನು ಊರಿಗೆ ಹೋದಮೇಲೆ ಅವನ ಆಟವನ್ನು ತಿಳಿಸುತೇನೆ, ಎಂದುಕೊಳ್ಳುತಿದ್ದನು. ಊರಿಗೆ ಬಂದು ಮಾನಸಪುರದ ಪಂಡಿತನಮನೆಗೆ ಹೋದನು. ಆ ವೈದ್ಯನಿಗೆ ಲಂಬೋದರನ ಗುರುತೇ ತಿಳಿಯಲಿಲ್ಲ. ಪೂರ್ವಕ್ಕೆ ಈಗ್ಗೆ ವೈ ನಾಲ್ಕರಲ್ಲಿ ಒಂದು ಪಾಲಾಗಿತ್ತು. ಮುಖಬಣ್ಣ ತಿರುಗಿತ್ತು, ಕೋಲಿಲ್ಲದೆ ನಡೆಯುತಿದ್ದನು. ತಿಂಡಿಪೋತನಾದ ಈ ರೋಗಿಯು ಆಗ್ರಹದಿಂದ ವಿಶೇಷವಾಗಿ ಆಡಿದ ಹೆಚ್ಚು ಮಾತುಗಳನ್ನು ಕೇಳಿ—

ಪಂಡಿತನು—ಯಾಕೆ ಇಂಥಾ ನಿಷ್ಠುರೋಕ್ತಿಗಳನ್ನು ಆಡುತೀರಿ? ನೀವಾಗಿಯೇ ಶಿರೋಮಣಿ ವೈದ್ಯರಲ್ಲಿ ಹೋದಿರಿ; ನಿಮ್ಮನ್ನು ಯಾರೂ ಬಲವಂತ ಮಾಡಲಿಲ್ಲ.

ಲಂಬೋದರ—ಆ ವೈದ್ಯ ಬಹು ದೊಡ್ಡವನು, ಹೆಸರಾದ ಪಂಡಿತ ಎಂದು ನೀವೇ ಹೇಳಿದವರು.

ಪಂಡಿತ—ಹಾಗಾದರೆ ನಿಮಗೆ ಆತನಿಂದ ಕೇಡಾಯಿತೆ? ಜಾಡ್ಯ ಕಡಮೆಯಾಯಿತೆ, ಹೆಚ್ಚಾಯಿತೆ?

ಲಂಬೋದರ—ಹೆಚ್ಚಾಯಿತೆಂದು ಹೇಳಲಾರೆ. ಈಗ ಹಸಿವು ಚೆನ್ನಾಗಿದೆ, ನಿದ್ರೆ ಚೆನ್ನಾಗಿ ಹತ್ತುವುದು. ಸರಿಯಾಗಿ ನಡೆಯಬಲ್ಲೆ.

ಪಂಡಿತ—ಇಷ್ಟರಮಟ್ಟಿಗೆ ಗುಣವನ್ನುಂಟುಮಾಡಿದ ವೈದ್ಯ ಕೆಟ್ಟವನೆಂದು ಹೇಳುವುದಕ್ಕೆ ಬಂದಿರ?

ಈ ಮಾತಿಗೆ ಲಂಬೋದರನು ಉತ್ತರ ಹೇಳುವುದಕ್ಕೆ ತಿಳಿಯದೆ ಪೆಚ್ಚು ಮುಖವನ್ನು ಹಾಕಿಕೊಂಡು ನನ್ನ—ಮಾನಕ್ಕೆ ತಕ್ಕಹಾಗೆ ಆಹಾರ ಉಪಚಾರಗಳಿಲ್ಲದೆ ಶಿರೋಮಣಿ ವೈದ್ಯನು ನನಗೆ ಅವಮಾನ ಮಾಡಿದನು, ಎಂದನು. ಕೂಡಲೆ ಪಂಡಿತನು—ಹೇಗಾದರೂ ನಿಮಗೆ ಮೋಸವನ್ನು ಮಾಡಿ ನಿಮಗೆ ಆರೋಗ್ಯವನ್ನು ಉಂಟುಮಾಡಿಕೊಟ್ಟರು. ಆ ಪಂಡಿತರ ಯೋಗ್ಯತೆಗೆ ಸಮಾನವಿಲ್ಲ. ಬಡವರಿಗೆ ವಿಶೇಷವಾಗಿ ಆಹಾರ ಉಪಚಾರಗಳಿಲ್ಲ; ಆದುದರಿಂದ ಅವರಿಗೆ ರೋಗಬಂತು. ಅವ

ರಿಗೆ ತಕ್ಕ ಹಾಗೆ ತಿಂಡಿಯನ್ನು ಹಾಕಿ ಗುಣಮಾಡುತಾನೆ. ಐಶ್ವರ್ಯ ವಂತರಾದ ನಿಮಗೆ ಉಪಚಾರ ಹೆಚ್ಚಾಯಿತು ; ಆದುದರಿಂದ ರೋಗ ಬಂತು. ನಿಮಗೆ ತಿಂಡಿಯನ್ನು ಹಾಕದೆ ಗುಣಮಾಡಿದಾನೆ. ಇನ್ನು ಯಾರಿಂದಲೂ ನಿಮ್ಮ ಜಾಡ್ಯ ವಾಸಿಯಾಗುತ್ತಿರಲಿಲ್ಲ. ಇದನ್ನು ಖಂಡಿತವಾಗಿ ತಿಳಿಯಿರಿ, ಎಂದು ಸಮಾಧಾನ ಪಡಿಸಿದನು. ಆಗ ಲಂಬೋದರನು ತನ್ನ ಮನಸ್ಸಿನಲ್ಲಿ ವೈದ್ಯನ ಮಾತೆಲ್ಲ ನಿಶ್ಚಯವೆಂದು ಯೋಚಿಸಿಕೊಂಡು ಮಾನಸಪುರದ ಪಂಡಿತನಿಗೂ ಶಿರೋಮಣಿ ಪಂಡಿತ ನಿಗೂ ಬಹುಮಾನವನ್ನು ಕೊಟ್ಟು ಕಳುಹಿಸಿ, ಅವನು ಹೇಳಿದಂತೆ ಆಹಾರವ್ಯವಹಾರಗಳಲ್ಲಿ ಮಿತವರಿತು ನಡೆದುಕೊಳ್ಳುತಿದ್ದನು. ಆದ್ದ ರಿಂದ ಯಾವ ಜಾಡ್ಯವೂ ಇಲ್ಲದೆ ಬಹು ದಿವಸ ಬದುಕಿದ್ದನು.

ಈ ಪ್ರಕಾರದಲ್ಲಿ ಕಥೆ ಮುಗಿಯಿತು.

ಆಗ ಮದನನು—ಈ ಕಥೆ ಬಹು ವಿನೋದಕರವಾಗಿದೆ. ಇಂಥಾ ಜಾಡ್ಯದಿಂದ ನರಳುತಿರುವ ಜನರು ನಮ್ಮ ಮನೆಗೆ ಬಂದರೆ, ಈ ಉಪಾ ಯವನ್ನು ಅವರಿಗೆ ಹೇಳಿ ಕೊಡುತೇನೆ, ಎಂದನು. ಇದಕ್ಕೆ ಜೋಯಿ ಸನು—ಹಾಗೆ ಸುಮ್ಮನೇ ಹೇಳುವುದು, ಸರಿಯಲ್ಲ. ನಿನ್ನನ್ನು ಕೇಳಿದರೆ ಹೇಳಬೇಕು. ಮನಸ್ಸು ಬಂದಹಾಗೆ ತಿಂದರೆ, ತಮ್ಮ ರೋಗ ಹೆಚ್ಚು ವುದು ಎಂಬ ಸಂಗತಿಯನ್ನು ಆ ಜನರು ಅರಿಯದೇ ಇರಲಾರರು. ಆದ್ದರಿಂದ ನೀನು ಹೊಸಮಾತನ್ನು ಅವರಿಗೆ ಹೇಳಿಕೊಟ್ಟ ಹಾಗಾಗ ಲಿಲ್ಲ. ಇದೂ ಅಲ್ಲದೆ ನೀನು ಚಿಕ್ಕಹುಡುಗ. ನೀನೇ ಎಷ್ಟೋ ವಿಷಯ ಗಳನ್ನು ತಿಳಿದುಕೊಳ್ಳಬೇಕಾಗಿದೆ. ಆದ್ದರಿಂದ, ಇತರರಿಗೆ ಬುದ್ಧಿ ಯನ್ನು ಕಲಿಸುವುದು ನಿನ್ನ ಕೆಲಸವಲ್ಲ. ಲೋಕದಲ್ಲಿ ಇರತಕ್ಕ ಐಶ್ವರ್ಯ ವಂತರಲ್ಲಿ ಅರ್ಧಜನರಿಗೆ ಈ ಕಥೆ ಅನ್ವಯಿಸುತ್ತೆ. ಕಷ್ಟವೂ ಬಡತನವೂ ಹೇಗೆ ಕೆಟ್ಟದೊ, ಮಿತವಿಲ್ಲದೆ ಇರತಕ್ಕದ್ದೂ ಹಾಗೆಯೇ ಕೆಟ್ಟದು, ಎಂದು ಇದರಿಂದ ನಾವು ತಿಳಿದುಕೊಳ್ಳಬಹುದು. ವಿಶೇಷ ಚಳಿಯಾಗಿರುವ ಉತ್ತರದೇಶದ ಜನರು ಕಷ್ಟಪಡುವುದೇನೋ ನಿಜ. ಆದರೆ ರೋಗ ವಿಲ್ಲದೇ ಇರುವವರು ಬಹುದಿವಸ ಬದುಕುವರು ; ಹೀಗೆಂದು ಜೋಯಿಸ ಹೇಳಿದನು.

ಹೀಗೆ ಸ್ವಲ್ಪಕಾಲ ಕಳೆಯಿತು. ಒಂದು ದಿನ ಸುಮತಿ ಮದನ ಕುಮಾರರಿಬ್ಬರೂ ಆಡುತ್ತಾ ಕಾಡಿಗೆ ಹೊರಟುಹೋದರು. ಹಿಂತಿರುಗಿ ಬರುವಾಗ ಇವರಿಗೆ ದಾರಿ ತಪ್ಪಿತು. ದೊಡ್ಡ ಮಳೆ ಬಂತು. ಮುಂದಕ್ಕೆ ಕಾಲಿರಿಸುವುದು ಬಹು ಕಷ್ಟವಾಯಿತು. ದೈವಾಧೀನದಿಂದ ಸಮೀಪ ದಲ್ಲೇ ಹಾಳುಗುಡಿ ಸಿಕ್ಕಲು ಬಂದು ಅದರೊಳಗೆ ಇವರಿಬ್ಬರೂ ಹೋಗಿ ಸೇರಿಕೊಂಡರು. ಮಳೆ ಹೆಚ್ಚಾಗಿ, ಗುಡಿಯ ಒಳಕ್ಕೂ ನೀರು ನುಗ್ಗು ವುದಕ್ಕೆ ಮೊದಲಾಯಿತು. ಮದನನು ಇದನ್ನೆಲ್ಲಾ ನೋಡಿ ಹೆದರಿ ಕೊಂಡು ಕಣ್ಣಿನಲ್ಲಿ ನೀರನ್ನು ಬಟ್ಟಾಡಿಸುತಾ—ಸುಮತಿ, ಏನುಮಾ ಡೋಣ? ಎಂದನು. ಅದಕ್ಕೆ ಸುಮತಿಯು—ಮಾಡುವುದೇನು? ಮಳೆ ಕಡಮೆಯಾಗುವವರೆಗೂ ನಾವು ಇಲ್ಲಿಯೇ ಇರಬೇಕು, ಎಂದನು.

ಮದನ—ಮಳೆ ಕಡಮೆಯಾಗದೆಯೇ ಇದ್ದರೆ?

ಸುಮತಿ—ಮಳೆಯಲ್ಲಿಯೇ ನೆನೆದುಕೊಂಡು ಹೋಗಬೇಕು, ಇಲ್ಲ, ಇದ್ದ ಕಡೆಯಲ್ಲಿಯೇ ಇರಬೇಕು.

ಮದನ—ಈ ಮಹಾರಣ್ಯದಲ್ಲಿ ನಾವಿಬ್ಬರೇ ಇರುವುದು ಹೇಗೆ? ನನಗೆ ಹಸಿವು ಆಗುತಿದೆ. ಚಳಿ ಹೆಚ್ಚು. ಎಲ್ಲಿಯಾದರೂ ಬೆಂಕಿ ಸಿಕ್ಕಿದರೆ ಕಾಸಿಕೊಳ್ಳಬಹುದು.

ಸುಮತಿ—ಕಾಡಿನಲ್ಲಿ ಎರಡು ಮರದ ತುಂಡನ್ನು ಒಂದಕ್ಕೊಂದು ಉಜ್ಜಿ ಬೆಂಕಿಯನ್ನು ಮಾಡುತಾರೆಂದು ಕೇಳಿದೇನೆ. ಆದರೆ ಇನ್ನೊ ಒಂದು ಉಪಾಯವಿದೆ. ನನ್ನಲ್ಲಿ ಒಂದು ಚೂರಿ ಇದೆ. ಒಂದು ಚೂರು ಚಕ್ಕಮುಕ್ಕಿಕಲ್ಲು ಸಿಕ್ಕಿದರೆ ಅದರ ಮೇಲೆ ಹೊಡೆದು ಬೆಂಕಿ ಯನ್ನು ಮಾಡಬಹುದು.

ಹೀಗೆ ಹೇಳಿ ಸುಮತಿಯು ಅತ್ತಿತ್ತ ನೋಡಿದನು. ಅಲ್ಲಿ ಒಂದು ಚೂರು ಚಕ್ಕಮುಕ್ಕಿಯು ಸಿಕ್ಕಿತು. ಅದನ್ನು ತೆಗೆದುಕೊಂಡು ಚಾಕು ವಿನ ಹಿನ್ನೆಯಿಂದ ಹೊಡೆದನು. ಒಂದೆರಡು ಬೆಂಕಿ ಕಿಡಿಗಳು ಉದುರಿ ದವು. ಹತ್ತಿಕೊಳ್ಳುವುದಕ್ಕೆ ಏನೂ ಇರಲಿಲ್ಲ, ಅಲ್ಲಿ ಬಿದ್ದಿದ್ದ ತರಗನ್ನು ಸೇರಿಸಿ ಚಕ್ಕಮುಕ್ಕಿಯನ್ನು ಹೊಡೆದನು. ಆ ತರಗು ತೇವೈಸಿಕೊಂಡಿ ದ್ದುದರಿಂದ ಹತ್ತಿಕೊಳ್ಳಲಿಲ್ಲ. ಇದನ್ನು ಕಂಡು ಮದನನಿಗೆ ಇನ್ನೂ

ಭಯಹೆಚ್ಚಿತು. ಅಷ್ಟುಹೊತ್ತಿಗೆ ಮಳೆ ಸ್ವಲ್ಪ ಕಡಮೆಯಾಯಿತು. ಸುಮತಿಮದನಕುಮಾರರಿಬ್ಬರೂ ಮನೆಗೆ ಹೊರಟರು. ಕಷ್ಟವನ್ನು ಅರಿಯದ ಮದನನು ಹೆಜ್ಜೆಹೆಜ್ಜೆಗೂ ಸೊಂಟದುದ್ದ ಬದಿಯಲ್ಲಿ ಹೂತು ಕೊಳ್ಳುತಿದ್ದನು. ಮಧ್ಯೆಮಧ್ಯೆ ಸುಮತಿಯು ಅವನಿಗೆ ಧೈರ್ಯವನ್ನು ಹೇಳಿ, ಮೇಲಕ್ಕೆ ಎತ್ತಿ ಕರೆದುಕೊಂಡು ಹೋಗುತಿದ್ದನು. ದಾರಿಯಲ್ಲಿ ಯಾರೊ ಕಾಸಿಕೊಳ್ಳುತಾ ಇದ್ದು ಬಿಟ್ಟುಹೋದ ಸ್ವಲ್ಪ ಬೆಂಕಿಯು ಸಿಕ್ಕಿತು. ಸುಮತಿಯು ಅಲ್ಲಿ ಬಿದ್ದಿದ್ದ ಒಣಕಡ್ಡಿಗಳನ್ನು ಆರಿಸಿ ಕೊಂಡು ಬಂದು ಬೆಂಕಿಗೆ ಹಾಕಿ ಉರಿಮಾಡಿದನು. ಇವರಿಬ್ಬರೂ ಬೆಚ್ಚಗೆ ಕಾಸಿಕೊಂಡರು. ಆಗ ಮದನನು—ಈ ಕಡ್ಡಿಗಳು ಎಂಥಾ ಸಮಯಕ್ಕೆ ಬಂದವು ನೋಡಿದೆಯ?—ಎಂದನು.

ಸುಮತಿ—ಅಯ್ಯಾ, ನೀನು ಅರಮನೆಯಲ್ಲಿ ಸುಖವಾಗಿ ಬೆಳೆದವನು. ದೊರೆಮಗ. ಈ ಕಷ್ಟವನ್ನೆಲ್ಲಾ ಅರಿಯೆ. ಮೈಮೇಲೆ ಅಂಗೈ ಅಗಲ ಬಟ್ಟೆಯೂ ಇಲ್ಲದೆ, ಒಪ್ಪೊತ್ತಿಗೂ ಅನ್ನಕ್ಕೆ ಗತಿಯಿಲ್ಲದೆ, ಇರತಕ್ಕ ಬಡವರ ಮಕ್ಕಳು ಎಷ್ಟೋ ಜನರಿದಾರೆ. ಅವರ ಗತಿ ಏನಾಗಬೇಕೋ, ನೋಡು. ಇಷ್ಟು ಕಷ್ಟಕ್ಕೇ ನೀನು ಈಗ ಒಂದು ಗಳಿಗೆಯಿಂದ ಎಷ್ಟು ಅತ್ತೆಯೋ, ಅಷ್ಟರಮಟ್ಟಿಗೆ ಆ ಬಡಜನರು ಒಂದು ವರುಷದಲ್ಲಿ ಸಹಿತಾ ಅಳುವುದಿಲ್ಲ.

ಮದನ—ಈ ಕಷ್ಟವನ್ನೆಲ್ಲಾ ಬಡವರು ಅನುಭವಿಸುವ ಹಾಗೆ ದೊರೆಯೂ ದೊರೆಮಕ್ಕಳೂ ಅನುಭವಿಸಬೇಕಾದ ಅಗತ್ಯವಿಲ್ಲ.

ಸುಮತಿ—ಅದು ಯಾಕೆ ಇಲ್ಲ? ದೊರೆಮಗನು ಬಡವರ ಹಾಗೆ ಮನುಷ್ಯನಲ್ಲವೋ? ಮನುಷ್ಯನಾದಮೇಲೆ ಇತರರು ಅನುಭವಿಸುವ ಹಾಗೆ ತಾನೂ ಕಷ್ಟವನ್ನು ಅನುಭವಿಸುವುದಕ್ಕೆ ರಾಜಕುಮಾರನು ಯಾಕೆ ಅಭ್ಯಾಸಮಾಡಿಕೊಳ್ಳಬಾರದು?

ಮದನ—ಆಗಬಹುದು. ಆದರೆ, ದೊರೆಮಕ್ಕಳಿಗೆ ಎಲ್ಲಾ ಅನುಕೂಲವಾಗಿರುವುದು. ತಿನ್ನುವುದಕ್ಕೆ ತಿಂಡಿ ಇದೆ. ಹೊದೆಯುವುದಕ್ಕೆ ಬಟ್ಟೆ ಇದೆ. ವೆಚ್ಚಮಾಡುವುದಕ್ಕೆ ಹಣವಿದೆ. ಬೇಕಾದ್ದೆಲ್ಲಾ ಇದೆ.

ಸುಮತಿ—ಇದೆಲ್ಲಾ ಏಕರೀತಿಯಾಗಿರುವುದೊ? ಧನವಂತರು

ತಲೆಯಿಂದ ಕಾಲಿನವರೆಗೂ ಬಟ್ಟೆಯನ್ನು ಹಾಕಿಕೊಂಡಿದ್ದಾಗ್ಯೂ, ಉತ್ತಮವಾದ ಶಾಲುಗಳನ್ನು ಹೊದ್ದುಕೊಂಡಿದಾಗ್ಯೂ, ಇವರಿಗೆ ಛಳಿ ಜ್ವರ ಬಂತೊ ಎಂದು ತೋರುವ ಹಾಗೆ, ಛಳಿಗೆ ಗಡಗಡನೆ ನಡುಗುವರು ಬಡವರ ಮಕ್ಕಳು ಬೆತ್ತಲೆ ಹೊಲದಲ್ಲೆಲ್ಲಾ ಓಡಾಡುವರು.

ಮದನ—ಇದೇನೋ ನಿಜ. ನಮ್ಮ ಅಪ್ಪಾಜಿಯ ಓಲಗಕ್ಕೆ ಬರತಕ್ಕ ಜನರು ಬೇಕಾದ ಬಟ್ಟೆಯನ್ನು ಹಾಕಿಕೊಂಡು ಇರುವರು. ಆದರೂ ಛಳಿ, ಛಳಿ, ಎಂದು ಪೇಚಾಡುವರು. ಅತ್ತ ನಮ್ಮ ಚಾಕರೆಲ್ಲರೂ ಬರೀ ಮೈಯನ್ನು ಬಿಟ್ಟುಕೊಂಡು ಓಡಾಡುವರು.

ಸುಮತಿ—ಆದ್ದರಿಂದ ಓಡಾಡಿಕೊಂಡು ನಾವು ಮಾಡತಕ್ಕ ಕೆಲಸದಿಂದ ನಮಗೆ ಮೈ ಬೆಚ್ಚಗಾಗುವುದು.

ಮದನ—ಆದರೆ ದೊಡ್ಡವರು ಈ ಅಲ್ಪರಹಾಗೆ ಓಡಾಡುವುದು ಯುಕ್ತವೆ?

ಸುಮತಿ—ದೊಡ್ಡವರಿಗೆ ಕಾಯಪುಷ್ಟಿ ಇರಬೇಕಾದ್ದು ಯುಕ್ತವಲ್ಲವೆ? ಹಾಗೆ ಯುಕ್ತವಾದರೆ ದೊಡ್ಡವರು ತಮ್ಮ ಅಂಗಗಳಿಗೆ ಸಾಧಕವಾಗುವಂತೆ ಕೆಲಸಮಾಡಬೇಕು; ಇಲ್ಲದಿದ್ದರೆ ಅವರಿಗೆ ಬಲ ಬರುವುದಿಲ್ಲ. ನಿಮ್ಮ ತಂದೆಯ ಸಭೆಗೆ ಬರತಕ್ಕ ಸಾಮಾಜಿಕರಿಗೆ ಹೊಲದಲ್ಲಿ ಗೆಯ್ಯುವ ಒಕ್ಕಲು ಮಕ್ಕಳ ಶಕ್ತಿ ಇದೆಯೆ?

ಮದನ—ನನಗೆ ತೋರಲಿಲ್ಲ. ಜೋಯಿಸರ ತೋಟದಲ್ಲಿ ನಾನು ಈಚೆಗೆ ಕೆಲಸಮಾಡುತಾ ಬಂದಮೇಲೆ ಮೊದಲಿಗಿಂತಲೂ ಈಗ ಶಕ್ತಿ ಹೆಚ್ಚಿತು.

ಇವರು ಹೀಗೆ ಮಾತನಾಡುತಿರುವಲ್ಲಿ, ಒಬ್ಬ ಹುಡುಗನು ತಲೆಯ ಮೇಲೆ ಒಂದು ಸೌದೇ ಹೊರೆಯನ್ನು ಹೊತ್ತುಕೊಂಡು ಬರುವುದನ್ನು ಸುಮತಿಯು ಕಂಡು, ಅವನ ಗುರುತು ಹಿಡಿದು—ಮದನ, ಹೋದ ವರುಷ ನೀನು ಬಟ್ಟೆಯನ್ನು ಕೊಟ್ಟ ಆ ಬಡಹುಡಗನು ಇಗೊ ಇಲ್ಲಿ ಬರುತಾ ಇದಾನೆ. ಇವನ ಊರು ಎಲ್ಲಿಯೋ ಸಮೀಪವಾಗಿರುವ ಹಾಗೆ ಕಾಣುತಿದೆ. ಇವನು ನಮಗೆ ದಾರಿಯನ್ನು ತೋರಿಸಿಯಾನು, ಎಂದನು; ತರುವಾಯ—ದಾರಿಯನ್ನು ತೋರಿಸುತ್ತೀಯು? ಎಂದು ಆ

ಬಡಹುಡುಗನನ್ನು ಕೇಳಿದನು. ಅವನು ಬುದ್ಧಿ, ಅಗತ್ಯವಾಗಿ ತೋರಿ ಸುತ್ತೇನೆ. ನಮ್ಮ ಬುದ್ಧಿಯುವರಾದ ಮದನಕುಮಾರರು ಈ ಮಳೆಗೂ, ಗಾಳಿಗೂ, ಈ ಕತ್ತಲೆಯಲ್ಲಿ ಸಿಕ್ಕಿದ್ದು ಆಶ್ಚರ್ಯ. ನಿಮ್ಮ ಬಟ್ಟೆಯೆಲ್ಲಾ ಒದ್ದೆಯಾಗಿದೆ. ಚಳಿಯಲ್ಲಿ ನಡುಗುತೀರಿ. ನಮ್ಮ ಗುಡಿಸಲಿಗೆ ದಯ ಮಾಡಿ. ಬೆಂಕೀ ಕಾಸಿಕೊಂಡು ಹೋಗಬಹುದು. ನಮ್ಮ ತಂದೆ ಓಡಿ ಹೋಗಿ ನೀವು ಇಲ್ಲಿದಾರೆಂದು, ರಾಮಜೋಯಿಸರಿಗೆ ಹೇಳಿ ಬರುತಾನೆ. ತಾವು ಬನ್ನಿ, ಎಂದು ಕರೆದನು. ಮದನನು ಅದಕ್ಕೆ ಒಪ್ಪಿಕೊಂಡು, ಸುಮತಿಯನ್ನು ಒಡಗೂಡಿ ಆ ಬಡಹುಡುಗನ ಸಂಗಡ ಹೋದನು. ಸ್ವಲ್ಪ ದೂರದಲ್ಲಿಯೇ ಅವನ ಮನೆ ಸಿಕ್ಕಿತು. ಆ ಹುಡುಗನ ತಾಯಿ ಹಂಜೀನೂಲುತ್ತಿದ್ದಳು. ಅವನ ಅಕ್ಕ ಹಿಟ್ಟಮಾಡುತ್ತಿದ್ದಳು. ಅವರ ಅಪ್ಪನು ಒಂದು ಪುಸ್ತಕವನ್ನು ಮೆಲ್ಲಗೆ ಓದಿಕೊಳ್ಳುತಾ ಅಗ್ಗಿಷ್ಟಿಕೇ ಹತ್ತಿರ ಬೆಂಕಿ ಕಾಯಿಸಿಕೊಳ್ಳುತಿದ್ದನು. ಅವನ ಮಗ್ಗುಲಲ್ಲಿ ಮೂರು ನಾಲ್ಕು ಮಕ್ಕಳು ಚಿಂದಿಯನ್ನು ಹೊದ್ದು ಈಚಲ ಚಾಪೆಯ ಮೇಲೆ ಮಲಗಿಕೊಂಡಿದ್ದವು. ಆ ಬಡಹುಡುಗನು ಮನೆಯ ಒಳಕ್ಕೆ ಹೋಗಿ ಸವುದೇ ಹೊರೆಯನ್ನು ಇಳುಕಿ—ಅಪ್ಪಾ, ಹೋದವರುಷ ನಮಗೆಲ್ಲ ರಿಗೂ ಬಟ್ಟೆಯನ್ನು ಕೊಟ್ಟು ಉದ್ಧಾರಮಾಡಿದ ಮದನಕುಮಾರರು ಬಂದು ಇದಾರೆ, ಕಾಡಿನಲ್ಲಿ ದಾರಿತಪ್ಪಿ ಹೋಗುತಿದ್ದರು. ನಾನು ಕರೆದುಕೊಂಡು ಬಂದೆ ಎಂದನು. ಆ ಕ್ಷಣವೇ ಹುಡುಗನ ತಂದೆಯು ಥಟ್ಟನೆ ಎದ್ದು, ಬಾಗಿಲಿಗೆ ಬಂದು, ಸುಮತಿ, ಮದನ, ಇಬ್ಬರನ್ನೂ ಕುರಿತು—ಸ್ವಾಮಿ, ಒಳಕ್ಕೆ ದಯಮಾಡಬೇಕು, ಚಳಿಯಲ್ಲಿ ನಡುಗು ತಿದ್ದೀರಿ, ಬೆಂಕೀಕಾಯಿಸಿಕೊಳ್ಳಿ; ತಮ್ಮ ಬಟ್ಟೆಯನ್ನು ಕೊಡಿ, ಹಿಂಡಿ ಒಣಗಹಾಕುತೇನೆ, ಎಂದು ಬಹಳ ಮರ್ಯಾದೆಯಿಂದ ಒಳಕ್ಕೆ ಕರೆದು ಕೊಂಡುಹೋಗಿ, ಬೆಂಕಿಯ ಮುಂದೆ ಕೂರಿಸಿದನು. ಆಗ ಅವನ ಹೆಂಡ ತಿಯು—ಅಯ್ಯೋ, ನಾವು ಬಹಳ ಬಡವರು. ನನ್ನ ಮನೆ ಸುಧಾಮನ ಮನೆಯಾಗಿದೆ. ತಾವು ತಿನ್ನುವ ಪದಾರ್ಥವನ್ನು ನಾನು ಏನು ಕೊಟ್ಟೇನು? ಜೋಳದ ಅರಳು ಇದೆ. ಇದನ್ನು ತಾವು ತಿಂದೀರ? ಎಂದಳು. ಆ ಮಾತಿಗೆ ಮದನನು—ತಾಯಿ, ನನಗೆ ಬಹಳ ಹೊತ್ತಿ

ನಿಂದಲೂ ಹಸಿವು ಆಗುತಿದೆ. ನೀನು ಏನಕೊಟ್ಟರೂ ತಿನ್ನುತೇವೆ, ಎಂದು ಹೇಳಿದನು. ಆಗ ಜೋಳದ ಅರಳನ್ನು ಅವರಿಬ್ಬರೂ ತಿಂದು ಅವರು ಕೊಟ್ಟ ಸ್ವಲ್ಪ ಮಜ್ಜಿಗೆಯನ್ನು ಕುಡಿದರು. ಆ ಮೇಲೆ ಆ ಮನುಷ್ಯ ಓದುತಿದ್ದ ಪುಸ್ತಕ ಯಾವುದು ಎಂದು ಕೇಳಿದರು. ಅದಕ್ಕೆ ಅವನು ಅದು ಭಾರತವೆಂದು ಹೇಳಿದನು. ಮದನನು—ನಮ್ಮ ಜೋಯಿಸರು ಆ ಪುಸ್ತಕವನ್ನು ಓದು ಎಂದು ನಮಗೆ ಹೇಳಿದಾರೆ. ಅವರು ಅದನ್ನು ಓದಿ ಆಗಾಗ್ಗೆ ಜನರಿಗೆ ಪುರಾಣಾ ಹೇಳುವುದುಂಟು. ಆಗ ಎಲ್ಲರೂ ಸದ್ದುಮಾಡದೆ ಬಹು ಭಕ್ತಿಯಿಂದ ಕೇಳುತಾರೆ, ಎಂದು ಹೇಳಿದನು. ಅದಕ್ಕೆ ಆ ಮನುಷ್ಯನು-ಬುದ್ಧಿ, ಹವುದು, ರಾಮಜೋಯಿಸರು ಬಹು ದೊಡ್ಡವರು. ಬಡಬಗ್ಗರಿಗೆ ಬಹು ಆಧಾರವಾಗಿದಾರೆ. ಅನ್ನವಿಲ್ಲದವರಿಗೆ ಅನ್ನವನ್ನು ಕೊಡುತಾರೆ. ಬಟ್ಟೆಯಿಲ್ಲದವರಿಗೆ ಬಟ್ಟೆಯನ್ನು ಕೊಡುತಾರೆ. ಆಲಸ್ಯವಾದಾಗ ಔಷಧವನ್ನು ಕೊಡುತಾರೆ. ನಾವು ತಪ್ಪಿನಡೆದರೆ, ಬುದ್ಧಿಯನ್ನು ಹೇಳುತಾರೆ. ಪರಲೋಕಸಾಧನೆಗೆ ಮಾರ್ಗವನ್ನು ತೋರಿಸುತಾರೆ. ನಾನು ಒಂದಾನೊಂದು ಕಾಲದಲ್ಲಿ ಶುದ್ಧವಾಗಿ ಕೆಲಸಕ್ಕೆ ಬಾರದ ತುಂಟನಾಗಿದ್ದೆ. ಅವರು ನನಗೆ ಬುದ್ಧಿಯನ್ನು ಹೇಳಿ ಮಾರ್ಗಕ್ಕೆ ತಂದರು. ಈಗ ನನ್ನ ಕೈಲಾದಮಟ್ಟಿಗೆ ಸಂಸಾರವನ್ನು ಮಾಡಿಕೊಂಡು ಇದೇನೆ. ಹೋದ ವರುಷ ಮನೆಯವರೆಲ್ಲರೂ ರೋಗದಲ್ಲಿ ಬಿದ್ದಿದ್ದೆವು. ರಾಮಜೋಯಿಸರು ಆ ಬೀಳನ್ನೆಲ್ಲಾ ಎತ್ತಿದರು. ನಮಗೆ ಆಗಾಗ್ಗೆ ಅನ್ನವನ್ನು ತಂದು ಇಕ್ಕಿ, ಈ ಸುಮತಿ ನಮ್ಮನ್ನು ಉದ್ಧಾರಮಾಡಿದರು. ಆಗಿನಿಂದ ತಿಂಗಳಿಗೆ ಹತ್ತು ಹಣದಮಟ್ಟಿಗೆ ಸಂಪಾದಿಸಿಕೊಂಡು ಸುಖವಾಗಿ ಜೀವನಮಾಡುತಿದೇವೆ; ಹೀಗೆಂದು ನುಡಿದನು. ಅದಕ್ಕೆ ಮದನನು ಆಶ್ಚರ್ಯಪಟ್ಟು—ಏನಯ್ಯ ಒಂದು ತಿಂಗಳಿಗೆ ಹತ್ತು ಹಣವೇ ಸರಿಯೆ, ನೀನು ಸಂಪಾದಿಸುವುದು? ಎಂದು ಕೇಳಲು, ಆ ರೈತನು—ಸ್ವಾಮಿ, ಇತರರು ಇದರಲ್ಲಿ ಅರ್ಧವನ್ನೂ ಸಂಪಾದಿಸಲಾರರು. ನಾನೇ ವಾಸಿ. ನನ್ನ ಹೆಂಡತಿ ಹಂಜಿಯನ್ನು ನೂತು ಹಣವಡ್ಡದಮಟ್ಟಿಗೆ ಸಂಪಾದಿಸುತಾಳೆ.

ಮದನ—ಹನ್ನೊಂದು ಹಣ ಅಡ್ಡವಾಯಿತಲ್ಲ. ಇದು ನಿಮ್ಮ

ಜೀವನಕ್ಕೆ ಸಾಕೆ? ನಮ್ಮ ಅಮ್ಮಯ್ಯ ಒಂದು ದಿನ ಮುಡಿದುಕೊಳ್ಳುವ ಹೂವಿಗೆ ಇದರ ಮೂರರಷ್ಟು ಕೊಡುತಾರಲ್ಲಾ!

ರೈತ—ಬುದ್ಧಿ, ತಾವು ದೊಡ್ಡವರು. ದೊಡ್ಡವರ ಮಾತನ್ನು ಆಡುತೀರಿ. ನಾವು ಬಡವರು. ಕೂಲಿ ಕಂಬಳಮಾಡಿಕೊಂಡು ದೇವರು ಕೊಟ್ಟಿದ್ದರಲ್ಲಿ ತೃಪ್ತರಾಗಿದೇವೆ.

ಮದನ—ದೇವರು ನಿಮಗೆ ಯಾವ ಮಹದೈಶ್ವರ್ಯವನ್ನು ಕೊಟ್ಟಿದ್ದಕ್ಕೆ ನೀವು ತೃಪ್ತರಾಗಿರಬೇಕು.

ರೈತ—ಬುದ್ಧಿ, ನಮಗಿರುವುದೆಲ್ಲಾ ದೇವರು ಕೊಟ್ಟಿದ್ದೇ. ಹೊದಿಯುವುದಕ್ಕೆ ಅಷ್ಟು ಬಟ್ಟೆ ಇದೆ. ಬಿಸಿಲಿಗೂ ಮಳೆಗೂ ಮರೆಯಾಗಿ ಒಂದು ಮನೆ ಇದೆ. ಒಂದೇರು ಆರಂಬವಿದೆ. ಒಂದು ಹೊಲವಿದೆ. ಇಷ್ಟು ಸಾಕು. ಇದೂ ಇಲ್ಲದೆ ಇರುವವರಿಗಿಂತಲೂ ನಾವು ಉತ್ತಮರಲ್ಲವೆ? ಎಂದನು. ಆಗ ಆ ರೈತ ಆಡಿದಮಾತನ್ನು ಕೇಳಿ, ಮದನನು ಆ ಬಡವನ ಒಳ್ಳೇತನಕ್ಕೆ ಆಶ್ಚರ್ಯಪಟ್ಟನು. ಅಷ್ಟರಲ್ಲೇ ಮನೇಗರತಿಯು ಸುಮತಿ ಮದನ ಇಬ್ಬರಿಗೂ ಒಂದೊಂದು ಪಾವು ಹಾಲನ್ನೂ, ಇನ್ನೂ ಅಷ್ಟು ಜೋಳದ ಅರಳನ್ನೂ, ಸ್ವಲ್ಪ ಬೆಲ್ಲವನ್ನೂ, ನಾಲ್ಕೈದು ಬಾಳೇಹಣ್ಣನ್ನೂ ತಂದು ಇಟ್ಟು,—ಹಸಿದು ಇರಬೇಡಿ, ಇದನ್ನು ತಿನ್ನಿ, ಎಂದು ಹೇಳಿದಳು. ಬಹಳವಾಗಿ ಓಡಾಡಿ ಹಸಿದು ಆಯಾಸಪಟ್ಟಿದ್ದ ಇಬ್ಬರು ಹುಡುಗರಿಗೂ ಆ ಬಡವೆ ತಂದ ತಿಂಡಿಯೇ ಬಹು ರುಚಿಯಾಗಿತ್ತು. ಇವರು ಅದನ್ನು ಮೆದ್ದರು. ಈ ಮಧ್ಯೆ ಆ ರೈತನು ಹೋಗಿ, ರಾಮಜೋಯಿಸನಿಗೆ ಈ ಇಬ್ಬರು ಹುಡುಗರೂ ಸೌಖ್ಯವಾಗಿದಾರೆ ಎಂದು ತಿಳಿಸಿದನು. ಇವರನ್ನು ಹುಡುಕಿಕೊಂಡು ಬರುತಿದ್ದ ಜೋಯಿಸನು ಅರ್ಧದಾರಿಯಲ್ಲಿಯೇ ಈ ಸಮಾಚಾರವನ್ನು ಕೇಳಿ, ಆ ರೈತನ ಸಂಗಡಲೇ ಬಂದನು.

ಸುಮತಿ ಮದನ, ಇಬ್ಬರೂ, ಗುರುಗಳು ಬರುವುದನ್ನು ಕೇಳಿ ಎದ್ದು ಹೋಗಿ, ಅವರನ್ನು ಎದುರುಗೊಂಡು ಅವರಿಗೆ ನಮಸ್ಕಾರಮಾಡಿದರು. ತರುವಾಯ, ತಾವು ಮಳೆಗೆ ಸಿಕ್ಕಿದ್ದೇ ಮೊದಲಾಗಿ ಆ ದಿನ ತಮಗೆ ಸಂಭವಿಸಿದ್ದ ಕಷ್ಟಗಳನ್ನೆಲ್ಲಾ ಹೇಳಿದರು. ಜೋಯಿಸನು

ಅವರು ಮಾಡಿದ ಕೆಲಸಕ್ಕೆ ಕೋಪಮಾಡಿಕೊಳ್ಳದೆ—ಮುಂದಕ್ಕೆ ಹೀಗೆ ಹೋಗಬೇಡಿ, ಸ್ವಲ್ಪ ಜಾಗ್ರತೆಯಾಗಿರಿ, ಎಂದು ಹೇಳಿ, ಈ ಬಡರೈತನು ಈ ಹುಡುಗರನ್ನು ಆದರಿಸಿದ್ದಕ್ಕಾಗಿ ಸಂತೋಷಪಟ್ಟು, ಅವರನ್ನು ಕರೆದುಕೊಂಡು ಬಂದನು. ಬರುತಾ ದಾರಿಯಲ್ಲಿ—ಎಲೆ ಹುಡುಗರ, ಕಾಡಿಗೆ ನೀವು ಹೀಗೆ ಹೊರಟುಹೋಗಬಾರದು. ಮಳೆಗೂ ಗಾಳಿಗೂ ಕಾಡಿನಲ್ಲಿ ಸಿಕ್ಕಿ, ದಾರಿಯನ್ನು ಕಾಣದೆ ಹಳ್ಳಕೊಳ್ಳಕ್ಕೆ ಬಿದ್ದು ಸತ್ತು ಹೋಗಿದಾರೆ; ಹಿಮದ ಗಡ್ಡೆಗಳೊಳಗೆ ಸಿಕ್ಕಿಸತ್ತುಹೋಗಿದ್ದಾರೆ, ಎಂದನು. ಮದನ— ಇಂಥಾ ಸಂದರ್ಭದಲ್ಲಿ ಪ್ರಾಣವನ್ನು ಉಳಿಸಿಕೊಂಡು ಬರುವುದು ಕಷ್ಟವಲ್ಲವೆ? ಜೋಯಿಸ— ಹವುದು, ಆದರೆ ಇಂಥಾ ಕಷ್ಟವನ್ನೂ ಸಹಿಸಿಕೊಂಡು, ಪ್ರಾಣಸಹಿತ ಬಂದ ಜನ ಗಳ ಕಥೆ ವಿಚಿತ್ರವಾದ್ದು ಒಂದು ಇದೆ, ಅದನ್ನು ನಾಳೆ ಹೇಳುತೇನೆ, ಎಂದುಸುರಿದನು.

ಹೀಗೆ ಬರುತಾ ಮದನನು ಕತ್ತೆತ್ತಿ ಆಕಾಶವನ್ನು ನೋಡಿ—ಈ ದಿನ ನಕ್ಷತ್ರಗಳು ಬಹಳವಾಗಿ ಕಾಣುವವು. ಇಷ್ಟೊಂದು ಯಾವಾ ಗಲೂ ಕಾಣಿಸಲಿಲ್ಲ, ಎಂದನು. ಅದಕ್ಕೆ

ಜೋಯಿಸ—ಇಷ್ಟೊಂದು ನಕ್ಷತ್ರಗಳು ಕಾಣಿಸಿದಾಗ್ಯೂ, ಇದ ನ್ನೆಲ್ಲಾ ಲೆಕ್ಕಮಾಡಿದಾರೆ. ನಮ್ಮ ಬರೀಕಣ್ಣಿಗೆ ಕಾಣಿಸದ ನಕ್ಷತ್ರಗಳು ಇನ್ನೂ ಎಷ್ಟೋ ಇವೆ.

ಮದನ—ಈ ನಕ್ಷತ್ರಕ್ಕೆ ಮೊದಲೂ ಇಲ್ಲ, ಕೊನೆಯೂ ಇಲ್ಲ. ಇದನ್ನು ಲೆಕ್ಕ ಮಾಡುವುದು ಹೇಗೆ? ಈವತ್ತು ಕಾಡಿನಲ್ಲಿ ಮಳೆ ಹುಯ್ಯಿತಷ್ಟೆ. ಆ ಹನಿಗಳನ್ನು ಲೆಕ್ಕಮಾಡುವುದಕ್ಕಾದೀತೆ? ಹಾಗೆ ಈ ನಕ್ಷತ್ರಗಳಿಗೂ ಲೆಕ್ಕ ಸಿಕ್ಕುವುದಿಲ್ಲ.

ಜೋಯಿಸ—ಸುಮತಿ, ನಕ್ಷತ್ರಗಳ ಕೆಲವು ರಾಶಿಗಳನ್ನು ನಿನ್ನ ಸ್ನೇಹಿತನಿಗೆ ತೋರಿಸಲಾರೆಯ?

ಸುಮತಿ— ಜೋಯಿಸರೆ, ತಾವು ಹೇಳಿಕೊಟ್ಟಿರುವುದನ್ನೆಲ್ಲಾ ಅಗತ್ಯವಾಗಿ ತೋರಿಸುತೇನೆ.

ಮದನ—ನಕ್ಷತ್ರಗಳ ರಾಶಿ ಅಂದರೇನು?

ಜೋಯಿಸ—ಪೂರ್ವದಲ್ಲಿ ಈ ಆಕಾಶದ ನಕ್ಷತ್ರಗಳನ್ನು ನೋಡಿದವರಿಗೆ ಅಧಿಕವಾದ ಪ್ರಕಾಶದಿಂದ ಕೆಲವೂ, ಸ್ಥಾನವಿಶೇಷದಿಂದ ಕೆಲವೂ ಮುಖ್ಯವಾದವುಗಳೆಂದು ಕಾಣಿಸಿದವು.

ಇಂಥಾ ನಕ್ಷತ್ರಗಳು ಪುನಃ ನೋಡಿದಾಗ ನೇಟಾಗಿ ಸಿಕ್ಕುವಂತೆ ಅವುಗಳಿಗೆ ಬೇರೆಬೇರೆ ಹೆಸರುಗಳನ್ನು ಕೊಟ್ಟಿದಾರೆ. ಇಂಥಾ ನಕ್ಷತ್ರಗಳ ಗುಂಪುಗಳೇ ರಾಶಿಗಳು. ಸುಮತಿ, ಸಪ್ತ ಋಷಿಗಳ ರಾಶಿಯನ್ನು ತೋರಿಸು.

ಆಗ ಸುಮತಿ ಕತ್ತೆತ್ತಿ ನೋಡಿ, ಉತ್ತರದಿಕ್ಕಿನಲ್ಲಿ ಪ್ರಕಾಶಮಾನವಾಗಿರುವ ಆ ಏಳು ನಕ್ಷತ್ರಗಳನ್ನು ತೋರಿಸಿದನು.

ಜೋಯಿಸ—ಮದನ, ಆಕಾಶವನ್ನೆಲ್ಲಾ ಚೆನ್ನಾಗಿ ನೋಡು. ಈ ಏಳು ನಕ್ಷತ್ರಗಳು ಯಾವಯಾವ ಸ್ಥಳದಲ್ಲಿ ಯಾವ ರೀತಿಯಾಗಿ ಪ್ರಕಾಶಿಸುತ್ತಿವೆಯೋ ಹಾಗೆ ಇನ್ನು ಯಾವುದಾದರೂ ಏಳು ನಕ್ಷತ್ರಗಳು ಇವೆಯೆ? ತೋರಿಸು.

ಮದನ—ಅಂಥಾ ನಕ್ಷತ್ರಗಳು ಇನ್ನು ಯಾವುದೂ ಇಲ್ಲ.

ಜೋಯಿಸ—ಈ ಸಪ್ತಋಷಿಗಳ ನಕ್ಷತ್ರಗಳನ್ನು ಪುನಃ ತೋರಿಸು.

ಮದನ—(ಅದೇಪ್ರಕಾರ ತೋರಿಸಿದನು.)

ಜೋಯಿಸ—ಸರಿ. ಈ ನಕ್ಷತ್ರಗಳು ಜ್ಞಾಪಕವಿದ್ದರೆ, ಇವುಗಳ ಸಮೀಪದಲ್ಲಿರತಕ್ಕ ನಕ್ಷತ್ರಗಳನ್ನೆಲ್ಲಾ ನೋಡಿ ತಿಳಿದುಕೊಳ್ಳಬಹುದು.

ಮದನ— ಜೋಯಿಸರೆ, ಇದು ಆಶ್ಚರ್ಯವಾಗಿದೆ. ನಮ್ಮ ಅಮ್ಮಯ್ಯನಿಗೆ ಇದನ್ನು ತೋರಿಸಬೇಕು.

ಜೋಯಿಸ—ಈ ರಾಶಿಯಲ್ಲಿ ಮಂಚದ ಕಾಲಿನಹಾಗೆ ನಾಲ್ಕು ನಕ್ಷತ್ರಗಳನ್ನು ನೋಡಿದೆಯಾ? ಆ ಹಿಂದುಗಡೆ ಕಾಲಿನಂಥಾ ಎರಡು ನಕ್ಷತ್ರಗಳನ್ನು ಕಂಡೆಯಾ? ಅದರಿಂದ ಮೇಲಕ್ಕೆ ಹಾಗೆಯೇ ನೋಡು. ಬಹಳ ಪ್ರಕಾಶವಾಗಿರುವ ಒಂದು ನಕ್ಷತ್ರವು ಕಾಣಿಸುವುದಿಲ್ಲವೆ? ಅದು ಹನ್ನೆರಡು ನಕ್ಷತ್ರಗಳ ಸಾಲಿನಲ್ಲಿದ್ದಹಾಗೆಯೇ ಕಾಣುವುದು.

ಮದನ—ಹವುದು. ನನಗೆ ಕಾಣಿಸಿತು. ಅದು ಯಾವುದು?

ಜೋಯಿಸ—ಅದೇ ಧ್ರುವನಕ್ಷತ್ರ. ಅದು ಇದ್ದಕಡೆಯಲ್ಲಿಯೇ ಇರುವುದು. ತನ್ನ ಸ್ಥಳವನ್ನು ಬಿಟ್ಟು ಅತ್ತಿತ್ತ ಚಲಿಸುವುದಿಲ್ಲ. ಅದನ್ನು ನೋಡಿ ಉತ್ತರದಿಕ್ಕನ್ನು ತಿಳಿದುಕೊಳ್ಳಬಹುದು.

ಮದನ—ಆ ನಕ್ಷತ್ರದ ಕಡೆಗೆ ನಾನು ತಿರುಗಿದರೆ, ಅದೇ ಉತ್ತರದಿಕ್ಕೋ? ಹಾಗಾದರೆ ನನ್ನ ಬೆನ್ನ ಕಡೆಯೇ ದಕ್ಷಿಣದಿಕ್ಕಾಯಿತು.

ಜೋಯಿಸ—ನೀನು ಹೇಳಿದ್ದು ಸರಿ. ಈಗ ಪೂರ್ವ ಯಾವುದು, ಪಶ್ಚಿಮ ಯಾವುದು, ಹೇಳು.

ಮದನ—ಸೂರ್ಯ ಹುಟ್ಟುವ ದಿಕ್ಕು ಪೂರ್ವವಲ್ಲವೆ?

ಜೋಯಿಸ—ಹವುದು. ಆದರೆ ಈಗ ಸೂರ್ಯ ಇಲ್ಲವಲ್ಲಾ.

ಮದನ—ಹಾಗಾದರೆ ನನಗೆ ತಿಳಿಯದು.

ಜೋಯಿಸ—ಸುಮತಿ, ನೀನು ಬಲ್ಲೆಯಾ?

ಸುಮತಿ—ಉತ್ತರದಿಕ್ಕಿಗೆ ನಾವು ತಿರುಗಿಕೊಂಡು ನಿಂತರೆ, ನಮ್ಮ ಬಲಗಡೆಯೇ ಪೂರ್ವ, ಎಡಗಡೆಯೇ ಪಶ್ಚಿಮ.

ಜೋಯಿಸ—ನೀನು ಹೇಳಿದ್ದು ಸರಿ.

ಮದನ—ಇದು ಜಾಣತನವೇ ಸರಿ. ಧ್ರುವನಕ್ಷತ್ರ ಒಂದು ತಿಳಿದರೆ, ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ಈ ನಾಲ್ಕು ದಿಕ್ಕೂ ತಿಳಿದ ಹಾಗಾಯಿತು. ಧ್ರುವನಕ್ಷತ್ರ ಇದ್ದ ಸ್ಥಳವನ್ನು ಬಿಟ್ಟು ಅಲುಗುವುದಿಲ್ಲವೆಂದು ಹೇಳಿದಿರಿ. ಹಾಗಾದರೆ, ಇತರ ನಕ್ಷತ್ರಗಳು ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗುವವೆ?

ಜೋಯಿಸ—ಈಗ ಆಕಾಶವನ್ನು ನೋಡು. ಇನ್ನೊಂದು ಕಾಲದಲ್ಲಿಯೂ ನೋಡು. ತರುವಾಯ ನೀನು ಕೇಳಿದ ಪ್ರಶ್ನೆಗೆ ಉತ್ತರವನ್ನು ನೀನೇ ಹೇಳುತೀಯೆ.

ಮದನ—ಇದನ್ನು ಜ್ಞಾಪಕದಲ್ಲಿಟ್ಟುಕೊಳ್ಳುವುದಕ್ಕೆ ಒಂದು ಕಾಗದದಮೇಲೆ ಗುರುತುಹಾಕಿಕೊಳ್ಳುವುದು ಉತ್ತಮ.

ಜೋಯಿಸ—ಹೇಗೆ ಗುರುತು ಹಾಕುತೀಯೆ?

ಮದನ—ಒಂದು ಕಾಗದವನ್ನು ತೆಗೆದುಕೊಳ್ಳುವುದು. ಮೊದಲು ಸಪ್ತಋಷಿ ನಕ್ಷತ್ರವನ್ನು ಗುರುತು ಮಾಡುವುದು. ಆಮೇಲೆ ಆಕಾಶ

ದಲ್ಲಿರುವ ಹಾಗೆಯೇ, ಇತರ ನಕ್ಷತ್ರಗಳನ್ನು ಗುರುತುಮಾಡುವುದು, ಅವುಗಳ ಹೆಸರುಗಳನ್ನು ಬರೆದುಕೊಡಬೇಕೆಂದು, ತಮ್ಮನ್ನು ಕೇಳಿ ಕೊಳ್ಳುವುದು.

ಜೋಯಿಸ—ಅದು ಒಳ್ಳೇ ಕೆಲಸವೇ ಸರಿ. ಆದರೆ ಕಾಗದ ಒಂದೇ ಸಮನಾಗಿ ಚಪ್ಪಟೆಯಾಗಿರುವುದು. ಆಕಾಶ ಹಾಗಿದೆಯೆ?

ಮದನ—ಇಲ್ಲ, ಆಕಾಶವು ಎಲ್ಲಾ ಕಡೆಯಲ್ಲಿಯೂ ಭೂಮಿಯಿಂದ ಮೇಲಕ್ಕೆ ಎದ್ದು ಮೇಲೆ ವ್ಯಾಪಿಸಿದ ದೊಡ್ಡ ಬುರುಜಿನ ಹಾಗೆ ಕಾಣುವುದು.

ಜೋಯಿಸ—ಹಾಗಾದರೆ ಗುಂಡಾಗಿರುವ ಒಂದು ಪದಾರ್ಥವನ್ನು ತಂದರೆ, ಆಕಾಶಕ್ಕೆ ಇದನ್ನು ಹೋಲಿಸಬಹುದು. ನಕ್ಷತ್ರಗಳ ಗುರುತನ್ನು ತಪ್ಪಿಲ್ಲದೆ ಹಾಕಿಕೊಳ್ಳಬಹುದು.

ಮದನ—ಅಂಥಾ ಗೋಳ ಎಲ್ಲಿದೆ?

ಜೋಯಿಸ—ನಾನು ಕೊಡಿಸಿಕೊಡುತೇನೆ.

ಮದನ—ಜೋಯಿಸರೆ, ನಕ್ಷತ್ರಗಳ ವಿಷಯವನ್ನು ತಿಳಿದುದರಿಂದ ಪ್ರಯೋಜನವೇನು?

ಜೋಯಿಸ—ಇವುಗಳಿಂದ ಇನ್ನು ಯಾವ ಉಪಯೋಗವೂ ಇಲ್ಲದೇ ಇದ್ದಾಗ್ಯೂ, ನೋಡುವುದಕ್ಕಾದರೂ ಬಹು ಚೆನ್ನಾಗಿ ಕಾಣಿಸುವದಿಲ್ಲವೆ? ಒಬ್ಬರು ಒಳ್ಳೇ ಬಟ್ಟೆಯನ್ನು ಹಾಕಿಕೊಂಡು ಹೋದರೂ, ಒಡವೆಯನ್ನು ಇಟ್ಟುಕೊಂಡು ಹೋದರೂ, ಒಂದು ಚಿತ್ರವನ್ನು ಬರೆದಿದ್ದರೂ, ಒಂದು ಮನೆಯನ್ನು ಚೆನ್ನಾಗಿ ಕಟ್ಟಿದ್ದರೂ, ಅದನ್ನೆಲ್ಲಾ ನಾವು ನೋಡಿ ಆನಂದಪಡುತೇವೆ. ಆದರೆ ಈ ಗಗನದಲ್ಲಿ ಥಳಥಳಗುಟ್ಟುವ ಅದ್ಭುತವಾದ ಈ ನಕ್ಷತ್ರವನ್ನು ನೋಡಿದರೆ, ಆನಂದವಿಲ್ಲವೆ? ಇಷ್ಟೇ ಉಪಯೋಗ ಸಾಕು. ಆದರೆ ಈ ನಕ್ಷತ್ರಗಳನ್ನು ತಿಳಿಯುವುದರಿಂದ ಇನ್ನೂ ಕೆಲವು ಪ್ರಯೋಜನ ಉಂಟು. ಸುಮತಿ, ನಿಮ್ಮ ಚಿಕ್ಕಯ್ಯನ ಮನೆಗೆ ನೀನು ಹೋಗಿದ್ದಾಗ ನಡೆದ ಸಂಗತಿಯನ್ನು ಹೇಳು.

ಸುಮತಿ—ಇಲ್ಲಿಗೆ ಒಂದು ಫಿರಂಗೀ ಎಸಗೆಯಲ್ಲಿ ನಮ್ಮ ಚಿಕ್ಕಪ್ಪನ

ಊರು ಇರುವುದನ್ನು ನೀನು ಬಲ್ಲೆಯಷ್ಟೆ? ಒಂದು ದಿನ ನಮ್ಮ ತಂದೆಯು ಅಲ್ಲಿಗೆ ಹೋಗಿ ಒಂದು ಮಾತನ್ನು ಹೇಳಿ ಬಾ, ಎಂದು ಕಳುಹಿಸಿದರು. ನನಗೆ ದಾರಿ ಚೆನ್ನಾಗಿ ಗೊತ್ತುಂಟು. ಆದ್ದರಿಂದ ನಾನು ಅಲ್ಲಿಗೆ ಹೋಗಿ, ನಮ್ಮ ಚಿಕ್ಕಪ್ಪನನ್ನು ಕಂಡು ಮಾತನಾಡಿ ಪುನಃ ಊರಿಗೆ ಹೊರಟೆ. ಹೊರಡುವಾಗ್ಗೆ ಸಾಯಂಕಾಲದ ಸಮಯವಾಗಿತ್ತು. ಅದು ಶ್ರಾವಣಮಾಸ. ಕೃಷ್ಣಪಕ್ಷ, ಹೊತ್ತಾಯಿತು, ಹೋಗಬೇಡವೆಂದು ನಮ್ಮ ಚಿಕ್ಕಪ್ಪ ಹೇಳಿದನು. ಆದರೆ, ಆ ದಿನವೇ ಹಿಂತಿರುಗಿ ಬರಬೇಕೆಂದು ನಮ್ಮ ತಂದೆಯವರು ಆಜ್ಞಾಪಿಸಿದ್ದಕಾರಣ ನಾನು ಅಲ್ಲಿ ನಿಲ್ಲಲಿಲ್ಲ, ಜಾಗ್ರತೆಯಾಗಿಯೇ ಬಂದೆ. ಅರ್ಧದಾರಿಗೆ ಕತ್ತಲೆಯಾಯಿತು.

ಮದನ—ನಿನಗೆ ಭಯವಾಗಲಿಲ್ಲವೆ?

ಸುಮತಿ—ಭಯ ಯಾಕೆ? ದಾರಿಕಾಣದೆ ರಾತ್ರೆಯೆಲ್ಲಾ ಕಾಡಿನಲ್ಲಿದ್ದು ಬೆಳಗಾದಮೇಲೆ ಊರಿಗೆ ಬರುತಿದ್ದೆ. ಅಷ್ಟೇಹೊರತು ಇನ್ನು ಯಾವ ಭಯವೂ ಇರಲಿಲ್ಲ. ಆದರೂ ಸ್ವಲ್ಪ ಮುಂದಕ್ಕೆ ಬಂದೆ. ದೊಡ್ಡದಾಗಿ ಮಳೆಯೂ ಗಾಳಿಯೂ ಹೊಡೆಯುವುದಕ್ಕೆ ಮೊದಲಾಯಿತು. ಮುಂದೆ ಹೆಜ್ಜೆ ಇಡುವುದಕ್ಕೆ ಆಗಲಿಲ್ಲ. ಆ ದಾರಿಯ ಮಗ್ಗುಲಲ್ಲಿದ್ದ ಒಂದು ಹೊದರಿನ ಕೆಳಗೆ ಹೋಗಿ ಕೂತುಕೊಂಡೆ. ಬಹಳ ಹೊತ್ತಿನಮೇಲೆ ಮಳೆ ಕಡಮೆಯಾಯಿತು. ಮತ್ತೆ ಊರಕಡೆ ಹೊರಟೆ. ದಾರಿ ಚೆನ್ನಾಗಿ ತಪ್ಪಿಹೋಯಿತು. ಕಾಡಿನಲ್ಲಿ ಎಲ್ಲೆಲ್ಲಿಯೂ ತಿರುಗಿದೆ. ದಾರಿಗೊತ್ತುಮಾಡುವುದಕ್ಕೆ ಯಾವ ಗುರುತೂ ಸಿಕ್ಕಲಿಲ್ಲ. ಅಲ್ಲಲ್ಲಿ ಮಳೇನೀರಿನಿಂದ ತುಂಬಿ ಹರಿಯುವ ಕೆಲವು ಕೊಲ್ಲಿಗಳನ್ನು ಹಾದುಕೊಂಡು ಬಂದೆ. ಮುಳ್ಳುಬೇಲಿಗಳನ್ನು ಹಾರಿಕೊಂಡು ಬಂದೆ. ನನ್ನ ಕಾಲೆಲ್ಲಾ ತರೆದುಹೋಯಿತು. ಒಂದುಸಾರಿ ನೀರಿನಲ್ಲಿ ಕೊಚ್ಚಿಕೊಂಡು ಹೋಗುತಿದ್ದೆ. ನನಗೆ ಈಜುವುದಕ್ಕೆ ಬರುತ್ತಿದ್ದಕಾರಣ ಪ್ರಾಣ ಉಳಿಯಿತು. ಆಗ ಒಂದುಕಡೆ ಸ್ವಲ್ಪ ಬೆಳಕು ಕಾಣಿಸಿತು. ಯಾರೋ ಪಂಜನ್ನು ಹಿಡಿದುಕೊಂಡು ಬರುವಹಾಗಿತ್ತು.

ಮದನ—ಆಗ ಸ್ವಲ್ಪ ಅನುಕೂಲವಾಯಿತಲ್ಲವೆ!

ಸುಮತಿ—ಹುಸಿನಗು ನಗುತ್ತಾ—ಮುಂದಕ್ಕೆ ಕೇಳು; ಯಾರಾದರೂ ಕಳ್ಳರು ಬರುತಾರೆಯೊ, ಎಂದು ಮೊದಲು ನನಗೆ ಸಂಶಯವಾಯಿತು. ಕಳ್ಳರು ಬಂದು ತಾನೆ ನನ್ನಂಥಾ ಬಡಹುಡುಗನನ್ನು ಏನುಮಾಡುತಿದ್ದರು? ಹಾಗದಕಾಸಿನ ಚಿನ್ನವಾಗಲಿ ಬೇಳೇಕಾಸಿನ ಬೆಳ್ಳಿಯಾಗಲಿ ನನ್ನ ಮೈಮೇಲೆ ಇರಲಿಲ್ಲ. ಆದರೆ ಕಳ್ಳತನಕ್ಕೆ ಬರತಕ್ಕವನಾಗಿದ್ದರೆ, ದೀಪವನ್ನು ತರಲಾರ, ಎಂದು ಯೋಚಿಸಿ, ಧೈರ್ಯವಾಗಿ ಆ ಪಂಜಿನಕಡೆಗೆ ನಾನು ಹೊರಟೆ. ಮೊದಲು ನನ್ನ ಬಲಗಡೆ ಕಾಣಿಸಿದ ಬೆಳಕು ನನ್ನ ಮುಂದುಗಡೆ ಹೋಗಿ ಇನ್ನೊಂದು ದಿಕ್ಕಿಗೆ ತಿರುಗಿದ ಹಾಗಾಯಿತು. ಇದೇನಾಶ್ಚರ್ಯ ಎಂದುಕೊಂಡೆ. ಆದರೂ ಅದು ಇದ್ದ ಕಡೆಗೇ ಹೋದೆ. ಮಧ್ಯೆ ನೀರು ತುಂಬಿದ್ದ ಒಂದು ಹಳ್ಳಕ್ಕೆ ಬಿದ್ದುಬಿಟ್ಟೆ. ಆಮೇಲೆ ಈಜಿಕೊಂಡು ತಿರುಗಿ ಹೊರಟೆ. ಆ ಬೆಳಕು ನನ್ನನ್ನು ತಪ್ಪಿಸಿಕೊಂಡು ಹೋಗುವಹಾಗೆ ಕಂಡಿತು. ಆ ಪಂಜನ್ನು ಹಿಡಿದಿದ್ದ ಮನುಷ್ಯನನ್ನು ನಿಂತುಕೋ, ಎಂದು ಕೂಗುತ್ತಾ, ಅದರ ಕಡೆಗೆ ನಾನು ಓಡುವುದಕ್ಕೆ ಮೊದಲುಮಾಡಿದೆ. ಅದುವರೆಗೆ ಆ ಬೆಳಕು ಮೆಲ್ಲಗೆ ಹೋಗುತಿತ್ತು. ನಾನು ಓಡುವುದಕ್ಕೆ ಆರಂಭಿಸಲು, ಆ ಬೆಳಕು ನನ್ನೆದುರಿಗೆ ಕುಣಿಯುತಾ, ಒಂದಕ್ಕೆ ಹತ್ತರಷ್ಟು ವೇಗವಾಗಿ ಓಡಿತು. ನಾನೂ ಓಡಿದೆ; ದಾರಿಯಲ್ಲಿದ್ದ ಒಂದು ಜೋರೇ ತಡಿಯಲ್ಲಿ ನನ್ನ ಕಾಲು ಹೂತುಕೊಂಡಿತು. ಆ ಜೋರೆಯ ಮಧ್ಯೆ ಮನುಷ್ಯರು ಯಾರೂ ಬಂದಿರಲಾರರೆಂದು ಆಗ ನಿಶ್ಚೈಸಿಕೊಂಡೆ. ನಾನು ನನೆದು, ಒದ್ದೆಮುದ್ದೆಯಾಗಿದ್ದೆ. ಮೋಡ ಸ್ವಲ್ಪ ಹರೆಯಿತು. ರಾತ್ರೆ ಬಹಳಹೊತ್ತಿನ ಮೇಲೆ ಚಂದ್ರೋದಯವಾಯಿತು. ಚಂದ್ರನ ಬೆಳಕೂ, ನಕ್ಷತ್ರದ ಬೆಳಕೂ ಸ್ವಲ್ಪ ಕಾಣಿಸಿತು. ಯಾವಕಡೆ ನೋಡಿದರೂ ದಿಕ್ಕೇ ತೋರದೆ ಹೋಯಿತು. ಎಲ್ಲಿಯಾದರೂ ಒಂದು ನಾಯಿಯಾದರೂ ಬೊಗಳೀತೆ ಎಂದು ಆಲಿಸಿ ಕೇಳಿದೆ. ಭರ್ರನೆ,ಬೀಸುವ ಗಾಳಿಯ ಶಬ್ದವೊಂದು ಹೊರತು ಇನ್ನೇನೂ ಕೇಳಲಿಲ್ಲ. ಒಂದುಕಡೆ ನಿಂತುಕೊಂಡು ಏನುಮಾಡಲಿ ಎಂದು ಕತ್ತೆತ್ತಿ ನೋಡಿದೆ. ಆಗ ಸಪ್ತಋಷಿ ನಕ್ಷತ್ರದ ರಾಶಿ

ನನ್ನ ಕಣ್ಣಿಗೆ ಬಿತ್ತು. ಅದರಮೇಲೆ ಧ್ರುವನಕ್ಷತ್ರ ಕಾಣಿಸಿತು. ನಮ್ಮ ಚಿಕ್ಕಪ್ಪನ ಮನೆಗೆ ಹೋಗುವಾಗ್ಗೆ ನನಗೆ ಇದಿರಾಗಿ ಧ್ರುವನಕ್ಷತ್ರ ಯಾವಾಗಲೂ ಕಾಣಿಸುತಿತ್ತು. ಅದರಕಡೆ ಬೆನ್ನುಮಾಡಿಕೊಂಡು ನೆಟ್ಟಗೆ ಹೊರಟರೆ ನಮ್ಮ ಮನೆ ಸಿಕ್ಕಬಹುದೆಂದು ನಿರ್ಧರಿಸಿಕೊಂಡೆ. ಅದೇ ಪ್ರಕಾರ ನನ್ನ ಮೂಗಿನ ನೇರಕ್ಕೆ ನೆಟ್ಟಗೆ ಹೊರಟೆ. ಬೆಳದಿಂಗಳ ಪ್ರಕಾಶ ಹೆಚ್ಚಾಗುತಾ ಬಂದುದರಿಂದ, ಹಳ್ಳಕೊಳ್ಳಗಳಿಗೆ ಬೀಳದಂತೆ ಬಂದೆ. ದಾರಿಗೊತ್ತಾಯಿತೆಂದು ಮನಸ್ಸಿಗೆ ಖಂಡಿತವಾಗಿ ತೋರಿತಾಗಿ, ನನಗೆ ಆಯಾಸವೇ ತೋರಲಿಲ್ಲ. ಅಷ್ಟು ಹೊತ್ತಿಗೆ ನಾಯಿ ಬೊಗಳುವ ಸದ್ದು ಕೇಳಿತು. ನನಗೆ ಒಂದಕ್ಕೆ ಎರಡರಷ್ಟು ಬಲಬಂದಹಾಗೆ ತೋರಿತು. ಹಾಗೆಯೇ ಓಡಿಬರಲು, ನಮ್ಮ ಊರು ಸಿಕ್ಕಿತು. ಮನೆಗೆ ಹೋಗಿ ತಲಪಿದೆ.

ಮದನ—ಓಹೋ! ಧ್ರುವನಕ್ಷತ್ರವನ್ನು ತಿಳಿಯುವುದರಿಂದ ಪ್ರಯೋಜನವಿದೆ! ಈ ನಕ್ಷತ್ರಗಳ ವಿಷಯವನ್ನೆಲ್ಲಾ ತಿಳಿದುಕೊಳ್ಳಬೇಕು. ಸುಮತಿ, ನಿನ್ನ ಮುಂದೆ ಹಾಗೆ ಹರಿದುಹೋದ ಬೆಳಕು ಯಾವುದು ? ಕೊನೆಗೆ ಗೊತ್ತಾಯಿತೆ ?

ಸುಮತಿ—ನಮ್ಮ ಅಯ್ಯನ ಸಂಗಡ ಹೇಳಿದೆ. ಅದು ಕೊಳ್ಳಿ ಪಿಶಾಚಿ ಎಂದು ಹೇಳಿದರು. ಈಚೆಗೆ ಜೋಯಿಸರು ಅದನ್ನು ಚೆನ್ನಾಗಿ ವಿವರಿಸಿದರು. ಜೋರೆಗಳಿಂದ ಒಂದು ಬಗೆ ಗಾಳಿ ಹೊರಟು ಬೆಳಕಿನ ಹಾಗೆ ಕಾಣುವುದು, ಎಂದು ಹೇಳಿದರು.

ಹೀಗೆ ಮಾತನಾಡಿಕೊಂಡು, ಸುಮತಿ, ಮದನ, ಜೋಯಿಸ ಮೂರು ಜನವೂ ಜೋಯಿಸನ ಮನೆಗೆ ಬಂದು ಸೇರಿದರು. ಇಬ್ಬರು ಹುಡುಗರೂ ಬೆಚ್ಚಗೆ ಹೊದ್ದುಕೊಂಡು ಮಲಗಿಕೊಂಡರು. ರಾಮ ಜೋಯಿಸ ಮಾತ್ರ ಏನೊ ಪುಸ್ತಕವನ್ನು ನೋಡುತಾ ಇದ್ದನು. ಸ್ವಲ್ಪ ಹೊತ್ತಿನಮೇಲೆ ಮದನನು ಓಡಿಬಂದು, ಜೋಯಿಸರೆ, ಅದು ಒಂದು ಕಡೆಯಿಂದ ಇನ್ನೊಂದು ಕಡೆಗೆ ಚಲಿಸುವುದು, ಎಂದನು.

ಜೋಯಿಸ—ಯಾವುದು, ಎಂದು ಕೇಳಲಾಗಿ, ರಾಜಪುತ್ರನು—ಸಪ್ತಋಷಿ ನಕ್ಷತ್ರ. ಇದು ಚಲಿಸುವುದೇ ಇಲ್ಲವೇ, ನೋಡೋಣ

ನೆಂದು ಎಚ್ಚರವಾಗಿಯೇ ಮಲಗಿದ್ದೆ. ಈಗ ಎದ್ದು ಅಂಗಳದಲ್ಲಿ ಹೋಗಿ ನೋಡಿದೆ, ಆ ಏಳು ನಕ್ಷತ್ರಗಳೂ ಮೊದಲಿದ್ದ ಕಡೆ ಈಗ ಇಲ್ಲ, ಎಂದು ಬಹು ಆತುರದಿಂದ ಹೇಳಿದನು. ಜೋಯಿಸನು—ಹವುದು. ಅವು ಚಲಿಸುವವು. ಇವತ್ತಿಗೆ ಮಲಗಿಕೊಂಡು ನಿದ್ರೆಮಾಡು. ನಾಳೆ ಮಾತನಾಡೋಣ ಎಂದು ಹೇಳಿದನು.

---

## ೧೩ನೆ ಅಧ್ಯಾಯ

ಮಾರನೇ ದಿನ ಮದನನು ಜೋಯಿಸನನ್ನು ಕುರಿತು—ತಾವು ಒಂದು ಕಥೆಯನ್ನು ಹೇಳುತೇನೆಂದು ಹೇಳಿದ್ದಿರಿ. ಅದನ್ನು ಈಗ ಹೇಳಬೇಕೆಂದು ಕೇಳಿದನು. ಆಗ ಜೋಯಿಸನು ಹೇಳಿದ್ದು ಹೇಗೆಂದರೆ:

ಈ ಕಥೆ ನಡದದ್ದು ಪರ್ವತಪ್ರಾಂತದಲ್ಲಿ. ಅಲ್ಲಿ ಅತಿಯಾಗಿ ಹಿಮದಗಡ್ಡೆ ದೊಡ್ಡದೊಡ್ಡದಾಗಿ ಬೀಳುವುದು. ಅದೇ ಒಂದು ಪರ್ವತದ ಹಾಗೆ ಆಗುವುದು.

ಮದನ—ಹಿಮದಗಡ್ಡೆ ಎಂದರೇನು ?

ಈ ಸೀಮೆಯಲ್ಲಿ ಬೆಟ್ಟದಮೇಲೆ ಚಳಿಗಾಲದಲ್ಲಿ ಹೆಚ್ಚಾಗಿ ಮಂಜು ಬೀಳುವುದನ್ನು ನೋಡಿಬಲ್ಲೆಯಷ್ಟೆ. ಆ ಮಂಜೆಲ್ಲಾ ನೀರಿನ ಸಣ್ಣ ಹನಿಗಳು. ಈ ಹನಿಗಳು ಚಳಿಯಿಂದ ಒಂದಕ್ಕೊಂದು ಸೇರಿಕೊಂಡು ಗಟ್ಟಿಯಾಗಿ, ಹಲ್ಲೆ ಹಲ್ಲೆಯಾಗಿ ಬೀಳುವವು. ಇದು ಒಂದರಮೇಲೆ ಒಂದು ಬಿದ್ದು ಮತ್ತೂ ಗಟ್ಟಿಯಾಗುವುದು. ಇದೇ ಹಿಮದ ಗಡ್ಡೆ. ಬಿಸಿಲಿಗೆ ಇದು ಕರಗಿ ನೀರಾಗಿ ಹರಿಯುವುದು. ಚಳಿಗೆ ಗಟ್ಟಿಯಾಗಿ ದಪ್ಪ ಆಲಿಕಲ್ಲಿನ ಹಾಗೆ ಆಗುವುದು.

ಒಂದಾನೊಂದು ಪರ್ವತದ ತಪ್ಪಲಲ್ಲಿ ಕೆಲವು ಕಾಡುಜನರು ಗುಡಿಸಲನ್ನು ಕಟ್ಟಿಕೊಂಡು ವಾಸಮಾಡುತಿದ್ದರು. ಹಿಮದಗಡ್ಡೆಯು ಅಲ್ಲಿ ವಿಶೇಷವಾಗಿ ಬೀಳುತಿತ್ತು. ಅದು ಮನೆಯಮೇಲೆ ಹೆಚ್ಚಾಗಿ ಬಿದ್ದು

ಭಾರವಾದಕಾರಣ ಮನೆಯು ಬಿದ್ದುಹೋದೀತೆಂಬ ಭಯದಿಂದ ಒಬ್ಬ ಮನುಷ್ಯನೂ ಅವನ ಮಗನೂ ಚಾವಣಿಯ ಮೇಲೆ ಹತ್ತಿ, ಮಂಜಿನ ಗಡ್ಡೆಯನ್ನು ತೆಗೆದು ಕೆಳಕ್ಕೆ ಹಾಕುತಿದ್ದರು. ಮತ್ತೊಬ್ಬ ಮಾರ್ಗಸ್ಥನು ಇವರನ್ನು ಕುರಿತು—ಅಯ್ಯ, ಬೇಗ ಕೆಳಕ್ಕೆ ಇಳಿದು ಓಡಿಹೋಗಿರಿ, ಬೆಟ್ಟದ ಮೇಲಿನಿಂದ ಹಿಮದಗಡ್ಡೆ ಪರ್ವತದ ಹಾಗೆ ಉರುಳಿ ಬರುತಿದೆ. ನೀವು ಅದರಲ್ಲಿ ಸಿಕ್ಕಿಕೊಂಡು ಸತ್ತುಹೋದೀರಿ, ಎಂದನು. ಇದನ್ನು ಕೇಳಿದ ಕೂಡಲೆ ಹಾರಿನಮೇಲಿನಿಂದ ಅಪ್ಪ ಮಕ್ಕಳಿಬ್ಬರೂ ಕೆಳಕ್ಕೆ ಇಳಿದು ಓಡಿಹೋದರು. ಕಾಲುಗಳಿಗೆಯೊಳಗೆ ಮಂಜಿನ ಗಡ್ಡೆಯು ಉರುಳಿಬಂದು ಆ ಹಳ್ಳಿಯನ್ನೆಲ್ಲಾ ಮುಚ್ಚಿಕೊಂಡು ಬಿಟ್ಟಿತು. ಆ ಮನುಷ್ಯನು ತನ್ನ ಹೆಂಡತಿ, ಮಕ್ಕಳು, ತಂಗಿ, ಎಲ್ಲಾ ಹಿಮದಲ್ಲಿ ಸಿಕ್ಕಿ ಸತ್ತುಹೋದರೆಂದು ತಿಳಿದು, ಮೂರ್ಛೆಹೋಗಿ, ಎದ್ದು ಇನ್ನೊಂದು ಹಳ್ಳಿಗೆ ಹೋಗಿ ಸುದಾರಿಸಿಕೊಂಡು, ಐದುದಿವಸದ ಮೇಲೆ, ತನ್ನ ಜನರು ಏನಾದರೋ ನೋಡೋಣವೆಂದು, ಮಗನನ್ನೂ ಕರೆದುಕೊಂಡು ಹೊರಟನು. ಇವನಿಗೆ ಮನೆ ಇದ್ದ ಸ್ಥಳವೇ ಗುರುತು ಸಿಕ್ಕಲಿಲ್ಲ. ಆಗ ಬೇಸಗೆ ಸ್ವಲ್ಪ ಮೊದಲಾಗಿತ್ತು. ಹಿಮದ ಗಡ್ಡೆ ಸ್ವಲ್ಪ ಮೆತ್ತ ಗಾಯಿತು. ಇವರಿಬ್ಬರೂ ಗುದ್ದಲಿ, ಹಾರೆ, ಎಲ್ಲವನ್ನೂ ತೆಗೆದು ಕೊಂಡುಹೋಗಿ, ಒಂದೆರಡು ಕಡೆ ಅಗೆದು ನೋಡಿದರು. ಏನೂ ಸಿಕ್ಕ ಲಿಲ್ಲ. ಇವನ ಭಾವಮೈದಂದಿರು ಸಹಾಯಕ್ಕೆ ಬಂದರು. ಎಲ್ಲರೂ ಸೇರಿ ಅಗೆದು ನೋಡುವಲ್ಲಿ ಕಡೆಗೆ ಒಂದು ಸಣ್ಣ ತೂತು ಸಿಕ್ಕಿತು. "ಅಣ್ಣಾ, ನಮ್ಮನ್ನು ಆಚೆಗೆ ಕರೆದುಕೊ, ಕರೆದುಕೊ," ಎಂಬ ಧ್ವನಿ ಕೇಳಿಸಿತು. ಆಗ ಮನೇ ಯಜಮಾನನೂ, ಅವನ ಭಾವಮೈದನೂ ಒಳಕ್ಕೆ ಇಳಿದರು. ಅಲ್ಲಿ ಅವನ ಹೆಂಡತಿಯೂ, ಅವನ ತಂಗಿಯೂ, ಹದಿಮೂರು ವರುಷದ ಒಬ್ಬ ಹೆಣ್ಣುಮಗಳೂ ಮೂರುಜನ ಮಾತ್ರ ಬದು ಕಿದ್ದರು. ಅವರಿಗೂ ಚಳಿಯಿಂದ ಮೈಯೆಲ್ಲಾ ಬೆರತುಹೋಗಿತ್ತು. ಆ ಮೂರು ಜನರನ್ನೂ ಮೇಲಕ್ಕೆ ಎತ್ತಿಕೊಟ್ಟರು. ಮೇಲಿದ್ದವರು ಅವ ರನ್ನು ಕರೆದುಕೊಂಡರು. ಆ ಹೆಂಗಸರಿಗೆ ಸ್ವಲ್ಪ ಆಹಾರವನ್ನು ಕೊಟ್ಟು ಮೈಬೆಚ್ಚಗಾಗುವುದಕ್ಕೆ ತಕ್ಕ ಉಪಾಯವನ್ನು ಮಾಡಿ ಪ್ರಾಣವನ್ನು ಉಳಿಸಿದರು.

ಈ ಅದ್ಭುತವಾದ ಸಂಗತಿಯನ್ನು ಅಲ್ಲಿನ ಕೋಶಾಧಿಕಾರಿಯು ಕೇಳಿ ಅವರನ್ನು ಕರಸಿ, ವಿಚಾರಿಸಲಾಗಿ, ಆ ಯಜಮಾನನ ಹೆಂಡತಿ ಹೇಳಿದ್ದು ಹೇಗೆಂದರೆ :—

ನಾನು ಮನೆಯಲ್ಲಿ ಕೆಲಸ ಮಾಡುತಿದ್ದೆ. ನನ್ನ ಯಜಮಾನನೂ ಹಿರೀಮಗನೂ ಹಂಜರದಮೇಲೆ ಬಿದ್ದಿದ್ದ ಮಂಜಿನ ಗಡ್ಡೆಗಳನ್ನು ಕೆಳಗೆ ತೆಗೆದುಹಾಕುತಿದ್ದರು. ಬೆಟ್ಟದಹಾಗೆ ಬರುತಿದ್ದ ಹಿಮದಗಡ್ಡೆಯು ಕಾಣಿಸಿತು. ನಾನು ಜಾಗ್ರತೆಯಾಗಿ ಬೀದೀಬಾಗಿಲನ್ನು ಹಾಕಿಕೊಂಡೆ. ಒಂದು ಗಳಿಗೆಯಲ್ಲಿ ಮನೇ ಚಾವಣಿಯು ಮುರಿದು ಕೆಳಕ್ಕೆ ಬಿತ್ತು. ಕೊಟ್ಟಿಗೆಯಲ್ಲಿ ಒಂದು ಮೂಲೆಯಲ್ಲಿ ಮಾತ್ರ ಸ್ವಲ್ಪ ಸ್ಥಳವಿತ್ತು. ನಾನು, ನನ್ನ ನಾದಿನಿ, ನನ್ನ ಮಗಳು, ಒಂದು ಕೈಮಗು, ಇಷ್ಟು ಜನವೂ ಅಲ್ಲಿ ಹೋಗಿ ಸೇರಿಕೊಂಡೆವು. ಕೆಲವು ಕಾಲದವರೆಗೆ ಮನೆಯಲ್ಲಿದ್ದ ಸಾಮಾನುಗಳನ್ನೆಲ್ಲಾ ತಿಂದು ಮುಗಿಸಿದೆವು. ಕೊಟ್ಟಿಗೆಯಲ್ಲಿ ಎರಡು ಆಡುಗಳು ಮಾತ್ರ ಬದುಕಿದ್ದವು. ಒಂದು ಗರ್ಭವಾಗಿತ್ತು. ಇನ್ನೊಂದು ಕರೆಯುತಿತ್ತು. ಅದರ ಹಾಲನ್ನು ಕರೆದು, ನಾವೆಲ್ಲರೂ ಹೊಟ್ಟೆಗೆ ಆಧಾರಮಾಡಿಕೊಳ್ಳುತಿದ್ದೆವು. ಚಳಿಯನ್ನು ತಡೆಯಲಾರದೆ ನನ್ನ ಕೈ ಗಂಡುಮಗು ಸತ್ತುಹೋಯಿತು. ಇಪ್ಪತ್ತು ದಿವಸದವರೆಗೆ ಮಾತ್ರ ಕೋಳೀ ಕೂಗಿಲ್ಲದೆ ಹಗಲು ರಾತ್ರೆ ಯಾವುದೂ ತಿಳಿಯಲಿಲ್ಲ. ಮನೆಯಲ್ಲಿದ್ದ ಹುಲ್ಲನ್ನೇ ಮೆಲ್ಲಗೆ ಕಿತ್ತು ಆಡುಗಳಿಗೆ ಹಾಕುತ್ತಾ ಬಂದೆವು. ಕತ್ತಲೆಯಲ್ಲಿ ಏನೂ ಕಾಣಿಸುತಿರಲಿಲ್ಲ. ಗಬ್ಬವಾಗಿದ್ದ ಆಡು ಮರೀ ಹಾಕುವುದಕ್ಕೆ ಇನ್ನು ಇಪ್ಪತ್ತು ದಿವಸ ಬೇಕಾಗಿತ್ತು. ಇದರಿಂದ ನಾವು ಅಲ್ಲಿದ್ದ ದಿವಸ ಸುಮಾರಾಗಿ ಗೊತ್ತಾಯಿತು. ಹಾಲು ಕರೆಯುವ ಹೊತ್ತಾದರೆ, ಆಡು ತಾನಾಗಿ ಬಂದು ಕೈಯನ್ನು ನೆಕ್ಕುತಿತ್ತು. ಆಗ ನಾವು ಹಾಲ ಕರೆದುಕೊಳ್ಳುತಿದ್ದೆವು. ತರುವಾಯ ನಮ್ಮನ್ನು ಮೇಲಕ್ಕೆ ಎತ್ತಿತಂದರು.

ಈ ಪ್ರಕಾರ ಆ ಹೆಂಗಸು ಕೋಶಾಧಿಕಾರಿಯ ಮುಂದೆ ತಮ್ಮ ಕಥೆಯನ್ನೆಲ್ಲಾ ವಿಸ್ತಾರವಾಗಿ ಹೇಳಿದಳು, ಎಂಬುದಾಗಿ ರಾಮುಜೋಯಿಸನು ಕಥೆಯನ್ನು ಮುಗಿಸಿದನು.

ಮದನ—ಲೋಕದಲ್ಲಿ ಜನರು ಇನ್ನೂ ಯಾವ ಯಾವ ಕಷ್ಟವನ್ನು ಅನುಭವಿಸುತಾರೋ ?

ಜೋಯಿಸ—ಆದ್ದರಿಂದ ಅಂಥಾ ಕಷ್ಟಗಳು ಯಾವುದು ಬಂದರೂ ಅದೆಲ್ಲವನ್ನೂ ಸಹಿಸಿಕೊಳ್ಳುವಹಾಗೆ ನಾವು ಶಕ್ತಿಯನ್ನು ಉಂಟುಮಾಡಿಕೊಳ್ಳಬೇಕು.

ಮದನ—ಈ ಮಾತು ನಿಜವೆಂದು ನನಗೂ ಈಗ ತೋರುತಿದೆ. ಮೊದಲಿಗೆ ಸ್ವಲ್ಪ ಯಾತನೆಯಾದರೂ ನಾನು ಅಳುವುದು, ಕೋಪಮಾಡಿಕೊಳ್ಳುವುದು, ಹೀಗಿತ್ತು; ಈಗ ನನಗೆ ಯಾವ ಯಾತನೆಯಾದರೂ ಸರಿಯೆ, ನಾನು ಲಕ್ಷ್ಯಮಾಡುವುದೇ ಇಲ್ಲ.

ಜೋಯಿಸ—ನಿನಗೆ ಯಾವುದು ಉತ್ತಮವೆಂದು ತೋರುವುದು ? ಈಗಿನ ಸ್ಥಿತಿಯೆ ಪೂರ್ವದ ಸ್ಥಿತಿಯೆ ?

ಮದನ—ಈಗ ನಾನು ಇರುವಹಾಗೆಯೇ ಇರುವುದು ಉತ್ತಮ. ನನಗೆ ಮೊದಲು ಶರೀರದಲ್ಲಿ ಏನಾದರೂ ಆಲಸ್ಯ ಇರುತ್ತಲೇ ಇತ್ತು. ನಿತ್ಯವೂ ಔಷಧವನ್ನು ಕೊಡುತಲೇ ಇದ್ದರು. ಈಗ ಯಾವ ರೋಗವೂ ಇಲ್ಲ. ಸುಖವಾಗಿದೇನೆ. ಆದರೆ ಜೋಯಿಸರೆ, ಹಾಗೆ ವಿಪರೀತವಾಗಿ ಹಿಮದಗಡ್ಡೆ ಬೀಳುವ ದೇಶ ಉಂಟೆ ? ಅಂಥಾಕಡೆ ಜನ ಬದುಕುವುದಕ್ಕಾದೀತೆ ?

ಜೋಯಿಸ—ಅಂಥಾ ದೇಶದಲ್ಲಿರತಕ್ಕವರಿಗೆ ಅದೇ ಸರಿಯಾಗಿದೆ. ಅವರನ್ನು ಇನ್ನೆಲ್ಲಿಗೆ ಕರೆತಂದರೂ ತಮ್ಮದೇಶಕ್ಕೆ ಹೋಗಬೇಕೆಂದು ಅಪೇಕ್ಷಿಸುತಾರೆ.

ಮದನ—ಅವರವರ ದೇಶ ಅವರಿಗೆ ಹೆಚ್ಚು. ಆದರೆ ನಮ್ಮ ಅರಮನೆಗೆ ಬರತಕ್ಕ ಅನೇಕರು ತಮ್ಮ ಜನ್ಮಸ್ಥಳವು ಹಳ್ಳಿಗಾಡಾದಾಗ್ಯೂ ಪಟ್ಟಣವಾಸವೇ ಉತ್ತಮವೆಂದು ಹೇಳುತಾರೆ; ಹಳ್ಳಿಗಾಡಿನಲ್ಲಿರತಕ್ಕವರು ಕಾಡುಜನರೆಂದೆನ್ನುತಾರೆ.

ಜೋಯಿಸ—ಪಟ್ಟಣಗಳ ಮುಖವನ್ನು ನೋಡದೆ, ಅನೇಕ ಜನರು ಇದಾರೆ. ಏನು ಸುಮತಿ, ಈ ಹಳ್ಳಿಗಾಡನ್ನು ಬಿಟ್ಟು ಷಹರಿಗೆ ಹೋಗಿ ಇರುವುದಕ್ಕೆ ನಿನಗೆ ಇಷ್ಟವಿದೆಯೆ ?

ಸುಮತಿ—ನಾನು ಒಲ್ಲೆ. ನಮ್ಮ ತಂದೆತಾಯನ್ನೂ, ನನಗೆ ಎಷ್ಟೋ ಉಪಕಾರವನ್ನು ಮಾಡಿದ ನಿಮ್ಮನ್ನೂ, ಹೀಗೆ ನನಗೆ ಬೇಕಾದ ವರನ್ನೆಲ್ಲಾ ಬಿಟ್ಟು, ನಾನು ಯಾಕೆ ಅಲ್ಲಿ ಹೋಗಲಿ ?

ಮದನ—ಷಹರುಗಳಿಗೆ ನೀನು ಹೋಗಿಯೇ ಇಲ್ಲವೆ ?

ಸುಮತಿ—ಒಂದುಸಾರಿ ಹೋಗಿದ್ದೆ. ವಿಜಯನಗರಕ್ಕೆ ಕರೆದು ಕೊಂಡು ಹೋಗಿದ್ದರು. ಆ ಜನದ ಗುಂಪೋ, ಆ ಬಚ್ಚಲ ನಾತವೊ, ಆ ಸಂದುಗೊಂದೋ ಸಾಕು, ಸಾಕು! ಒಂದೊಂದು ಕಡೆ ಗಾಳಿ ಬೆಳಕಿಗೆ ಸಹಿತ ಮಾರ್ಗವಿಲ್ಲ. ಪೇಟೇ ನೋಡುವುದಕ್ಕೆ ಹೋದೆ. ಅಲ್ಲಿ ಬೊಂಬೆಗೆ ಕೈಕಾಲುಗಳನ್ನೂ, ಮುಖವನ್ನೂ ಮಾಡಿ ಇರಿಸಿದೆಯೋ ಎನ್ನುವ ಹಾಗೆ, ದೊಡ್ಡದೊಡ್ಡ ಹೊಟ್ಟೆಯುಳ್ಳ ಜನರು ಭೂತದಹಾಗೆ ಕೂತಿರುತಿದ್ದರು. ಅವರು ಅತ್ತಿತ್ತ ತಿರುಗುವುದೇ ಕಷ್ಟವಾಗಿತ್ತು. ಅವರನ್ನು ನೋಡಿ ನನಗೆ ಬಹಳ ನಗು ಬಂತು. ನಾನು ಇಳಿದಿದ್ದ ಮನೆಯಲ್ಲಿ ಹೆಂಗಸು ಗಂಡಸರೆಲ್ಲರೂ, ಬೆಳಗಿನಿಂದ ಸಾಯಂಕಾಲದ ವರೆಗೂ ಸಿಸ್ತುಮಾಡಿಕೊಳ್ಳುವುದರಲ್ಲಿಯೇ ಕಾಲವನ್ನು ಕಳೆಯುತಿದ್ದರು. ಹುವ್ವಿಗೂ ಗಂಧಕ್ಕೂ ಐದು ಆರು ವರಹದಮಟ್ಟಿಗೆ ವೆಚ್ಚಮಾಡು ತಿದ್ದರು. ಆದರೆ ಬಾಗಿಲಲ್ಲಿ ಬಂದು ನಿಂತುಕೊಂಡು—ಅಮ್ಮಾ, ಭಿಕ್ಷೆ ಎಂದು ಕೂಗುತಿದ್ದ ಕುಂಟರಿಗೆ ಕುರುಡರಿಗೆ ಒಂದು ಹಿಡಿಯನ್ನಾದರೂ ಹಾಕುತಿರಲಿಲ್ಲ.

ಮದನ—ಅದೇನೋ ನಿಜ. ಆದರೆ ನನ್ನಂಥವನು ಅಲ್ಲಿದ್ದರೆ, ಆ ಬಡಜನರಿಗೆ ಏನೂ ಕಡಮೆಮಾಡುತಿರಲಿಲ್ಲ. ನಾನು ಒಳ್ಳೆಯವನು, ಉದಾರಿ, ಎಂಬುವುದನ್ನು ನೀನು ಬಲ್ಲೆಯಷ್ಟೆ? ದೊಡ್ಡಪದವಿಯಲ್ಲಿರ ತಕ್ಕವರು ಒಳ್ಳೇ ಒಡವೆಯನ್ನಿಟ್ಟು ಒಳ್ಳೇ ಬಟ್ಟೆಯನ್ನುಟ್ಟು ಸಿಸ್ತು ಮಾಡಿಕೊಳ್ಳಬೇಕಾದ್ದು ಅಗತ್ಯ.

ಸುಮತಿ—ಹಾಗೆ ಸಿಸ್ತು ಮಾಡಿಕೊಂಡದ್ದರಿಂದ ಪ್ರಯೋಜನ ವೇನು? ಆ ಪೇಟೆಯಲ್ಲಿ ನಾನು ಹೋಗುತಿರುವಾಗ ನನಗೆ ಇಬ್ಬರು ಹುಡುಗರು ಸಿಕ್ಕಿದರು. ಅವರ ಆಭರಣವನ್ನೂ ಉಡುಪನ್ನೂ ನೋಡಿದರೆ, ನೀನು ಮೊದಲು ಇಲ್ಲಿಗೆ ಬಂದಾಗ ಹೇಗೆ ಇದ್ದೆಯೋ ಹಾಗೆ

ಕಾಣಿಸುತಿದ್ದರು. ಅವರು ದೊಡ್ಡವರ ಮಕ್ಕಳಾಗಿರಬಹುದೆಂದು ತಿಳಿದು ನಾನು ಸ್ವಲ್ಪ ಅರುಗಾಗಿ ನಿಂತುಕೊಂಡೆ. ದೊಡ್ಡ ಪದವಿಯುಳ್ಳ ಜನರಿಗೆ ಮರ್ಯಾದೆ ತೋರಿಸಬೇಕೆಂದು ನಮ್ಮಯ್ಯ ಹೇಳಿಕೊಟ್ಟಿದಾರೆ. ಅದಕ್ಕಾಗಿಯೇ ಅವರಿಗೆ ದಾರಿಯನ್ನು ಬಿಟ್ಟು ನಾನು ಓರೆಯಾದೆ. ಇಷ್ಟರ ಮಾನ ಅವರಿಗೆ ಸಾಲದೇ ಹೋಯಿತು. ನನ್ನ ಮಗ್ಗುಲಲ್ಲಿ ಹೋಗುತ್ತಾ ನನ್ನನ್ನು ತಳ್ಳಿಬಿಟ್ಟು ಹೊರಟುಹೋದರು ; ನಾನು ಬಚ್ಚಲಿಗೆ ಬಿದ್ದೆ. ಮೈಮೋರೆಯೆಲ್ಲಾ ಕೊಚ್ಚೆಯಾಯಿತು. ಅವರು ಚಪ್ಪಾಳೆ ಹಾಕಿಕೊಂಡು ನಕ್ಕರು. ಯಾಕೆ ತಳ್ಳಿದಿರಿ, ಎಂದು ನಾನು ಕೇಳಿದೆ. ಇಬ್ಬರೂ ಓಡಿಬಂದು ನನ್ನ ಕೆನ್ನೆಗೆ ಹೊಡೆದರು. ನಾನು ಎದ್ದು ಅವರಿಬ್ಬರನ್ನೂ ಹೊಡೆಯುವುದಕ್ಕೆ ಮೊದಲುಮಾಡಿದೆ. ನನ್ನ ಏಟಿಗೆ ಇಬ್ಬರೂ ಅಳುತಾ ಓಡಿಹೋದರು. ಮೊದಲಿದ್ದ ಡಂಭ ಹಾರಿಹೋಯಿತು. ನಾನು ನಮ್ಮೂರಿಗೆ ಹೊರಟುಬಂದೆ. ನನ್ನ ಜೊತೇ ಹುಡುಗರು—ಸುಮತಿ ಯಾವಾಗ ಬಂದೆ ? ಸ್ವಸ್ಥವಾಗಿದೀಯಾ ? ಎಂದು ಒಬ್ಬೊಬ್ಬರಾಗಿ ವಿಚಾರಿಸಿದರು. ಷಹರಿನವರ ಗುಣವೂ, ಹಳ್ಳಿಯವರ ಗುಣವೂ ಹೀಗಿದೆ.

ಜೋಯಿಸ—ಹಳ್ಳಿಗಾಡವಾಸವನ್ನು ಅಪೇಕ್ಷಿಸುವುದಕ್ಕೆ ಕಾರಣ ಈಗ ಗೊತ್ತಾಯಿತೆ ? ಷಹರಿನಲ್ಲಿರತಕ್ಕ ಜನರು ಯಾವ ಕೆಲಸವನ್ನೂ ಮಾಡದೆ, ಸಿಸ್ತುಮಾಡಿಕೊಂಡು ಮೆರೆಯುವರು. ಅವರು ಯಾವ ಉಪಯೋಗಕ್ಕೂ ಬರುವುದಿಲ್ಲ. ಕೂತುಕೂತು ಮೈಬೆಳೆಸಿಕೊಳ್ಳುವರು. ಕಷ್ಟಕ್ಕೆ ತಡೆಯಲಾರರು. ಹಳ್ಳಿಗಳಲ್ಲಿ ಕಷ್ಟಪಡದಿದ್ದರೆ, ಸಾಗುವುದಿಲ್ಲ. ಆದ್ದರಿಂದಲೇ ಹಳ್ಳಿಗಾಡವಾಸ ಬೇಡವೆಂದು ಅವರು ಹೇಳುವರು. ಪಟ್ಟಣವಾಸಿಗಳಿಗೆ ಕಾಡಹರಟೆಯನ್ನು ಹರಟಿ ಕಾಲಾ ಕಳೆಯುವುದಕ್ಕೆ ಜೊತೆಗಾರರು ಬೇಕಾದಷ್ಟು ಸಿಕ್ಕುವರು. ನಾಲ್ಕು ಜನ ಸೇರಿದರೆ, ಇವನ ರುಮ್ಮಾಲು ಓರೆ, ಅವರ ಮನೇಸಾರು ಸಪ್ಪೆ, ಇವಳ ಮೂಗು ಉದ್ದ, ಅವನ ಬೆಟ್ಟು ಸಣ್ಣದು, ಎಂದು ಮತ್ತೊಬ್ಬರನ್ನು ಆಕ್ಷೇಪಿಸಿ ಮಾತನಾಡುತಲೇ ಇರುವರೇ ಹೊರತು ಉಪಯೋಗವಾದ ಕೆಲಸವನ್ನು ಏನೂ ಮಾಡುವುದಿಲ್ಲ. ಡಂಭವಾಗಿ ತಿರುಗುವುದೇ

ಮುಖ್ಯವಾದ ಕಾರ್ಯ. ಒಳ್ಳೇ ಉಡುಪನ್ನು ಹಾಕಿಕೊಂಡು ಡಂಭ ವಾಗಿದ್ದವರನ್ನು ಮಾತನಾಡಿಸುವರು. ಇಲ್ಲದೇ ಇದ್ದವರು ಸ್ನೇಹಿತ ರಾದಾಗ್ಯೂ ಸರಿಯೆ, ಮಾತನಾಡಿಸುವುದಿಲ್ಲ.

ಸುಮತಿ—ಒಳ್ಳೇ ಬಟ್ಟೆಗೂ ಸ್ನೆಹಕ್ಕೂ ಸಂಬಂಧವೇನು, ಜೋಯಿಸರೆ? ಒಳ್ಳೇ ಬಟ್ಟೆಯನ್ನು ಹಾಕಿಕೊಂಡವರಿಗೆ ಹೆಚ್ಚು ಮರ್ಯಾದೆ ಯಾಕೆ? ಈ ಮಾತನ್ನು ಕೇಳಿದ ಕೂಡಲೆ ನನಗೆ ಒಂದು ಕಥೆ ಜ್ಞಾಪಕಬರುವುದು, ಜೋಯಿಸರೆ.

ಮದನ—ಆ ಕಥೆಯನ್ನು ಹೇಳು.

ಜೋಯಿಸ—ಆ ಕಥೆ ನಾಳೆ ಆಗಲಿ.

ತರುವಾಯ ಮದನ, ಸುಮತಿ, ಇಬ್ಬರೂ ಆಡುವುದಕ್ಕೆ ಹೋದರು. ಜೋಯಿಸರ ಹೊಲದ ಮಧ್ಯೆ ಚಿಕ್ಕದಾದ ಒಂದು ಮರದ ದಿಮ್ಮಿ ಬಿದ್ದಿತ್ತು. ಅದನ್ನು ಗುಡಿಸಲಿನ ಹತ್ತಿರಕ್ಕೆ ಉರುಳಿಸಿಕೊಂಡು ಬರ ಬೇಕೆಂದು ಯತ್ನಿಸಿದರು. ಇವರಿಬ್ಬರೂ ಸೇರಿ ಅದನ್ನು ಕೈಯಿಂದ ತಳ್ಳಿದರು. ಅದು ಉರುಳಲಿಲ್ಲ. ಆಗ ಸುಮತಿಯು ಎರಡು ಕಟ್ಟಿಗೆ ಯನ್ನು ತೆಗೆದುಕೊಂಡು ಬಂದು, ಒಂದನ್ನು ಮದನನಿಗೆ ಕೊಟ್ಟು ಅದರ ತುದಿಯಲ್ಲಿ ಮರವನ್ನು ಮೀಟು ಎಂದು ಹೇಳಿದನು. ಇನ್ನೊಂದು ಕಟ್ಟಿಗೆಯಿಂದ ತಾನೂ ಅದನ್ನು ಮೀಟುತ್ತ ಬಂದನು. ಮರವು ಸುಲಭ ವಾಗಿ ಉರುಳಿಕೊಂಡು ಹೋಯಿತು. ಆದರೆ ಆಗ ಉರುಳದೇ ಇದ್ದ ಮರ ಈಗ ಉರುಳುವುದಕ್ಕೆ ಕಾರಣವೇನು? ಎಂದು ಕೇಳಲು, ಸುಮ ತಿಯು—ಅದು ಈ ಕೋಲಿನ ತ್ರಾಣವೆಂದು ಹೇಳಿದನು. ಆ ಮಾತಿಗೆ ದೊರೆಮಗನು—ಈ ಕಟ್ಟಿಗೆಗೆ ಇಷ್ಟು ತ್ರಾಣವಿದೆಯೆ? ಎಂದು ಕೊಳ್ಳುತಾ, ಸುಮತಿಯ ಜೊತೆಯಲ್ಲಿ ಮರವನ್ನು ತಳ್ಳುತಾ ಹೋದನು. ಥಟ್ಟನೆ ಕಟ್ಟಿಗೆ ಎರಡೂ ಮುರಿಯಿತು. ಅದನ್ನು ನೋಡಿ ಮದನನು ಚಿಂತೆಯಿಲ್ಲ. ಕಟ್ಟಿಗೆ ತುದಿ ಸ್ವಲ್ಪ ಇದೆ, ಎಂದುಕೊಳ್ಳುತಾ, ಮುರಿದು ಹೋದ ಮೊಳದುದ್ದ ಕಟ್ಟಿಗೆಯಲ್ಲಿ ದಿಮ್ಮಿಯನ್ನು ಮೀಟಿದ. ಅದು ಉರುಳಲಿಲ್ಲ. ಯಾಕೆ ಉರುಳುವುದಿಲ್ಲವೆಂದು ಅವನು ಕೇಳಲು, ಸುಮತಿಯು—ಅದು ಈ ಸಣ್ಣ ಕೋಲಿಗೆ ಉರುಳುವುದಿಲ್ಲವೆಂದು

ನಾನು ಆಗಲೇ ಹೇಳಿಬಿಡುತಿದ್ದೆ. ಆದರೆ ನೀನೇ ತಿಳಿದುಕೊಳ್ಳಲಿ ಎಂದು ಸುಮ್ಮನಾದೆ. ಕಟ್ಟಿಗೆಯು ಉದ್ದವಾಗಿದ್ದಷ್ಟೂ ಭಾರವನ್ನು ಹೆಚ್ಚಾಗಿ ಎತ್ತುವುದು. ಆದರೆ ನಮ್ಮ ಕೈಗೆ ಅಡಗುವ ಹಾಗೆ ಇರಬೇಕು, ಎಂದು ಹೇಳಿ ಬೇರೆ ಕಟ್ಟಿಗೆ ತರುವುದಕ್ಕೆ ಒಂದುಕಡೆಗೆ ಹೋದನು.

ಅಲ್ಲಿ ಒಂದು ಮರವನ್ನು ಇಬ್ಬರು ಆಳುಗಳು ನಿಂತು ಕಡಿಯು ತಿದ್ದರು. ಮದನನಿಗೆ ಅದೂ ಒಂದು ಆಶ್ಚರ್ಯಕರವಾಗಿ ಕಂಡು ಬಂತು. ಅವನು—ಇಂಥಾ ದೊಡ್ಡ ಮರವನ್ನು ಇವರು ಕಡಿದಾರೆ! ಇವರಿಗೆ ಬುದ್ಧಿ ಇಲ್ಲ, ಎಂದನು. ಸುಮತಿಯು—ನಿನಗೆ ಹಾಗೆ ತೋರ ಬಹುದು. ನನ್ನ ಜೊತೆಗೆ ಒಬ್ಬ ಆಳನ್ನು ಕೊಡು. ನಾನು ಅದನ್ನು ಕಡಿದುಬಿಡುತೇನೆ, ನೋಡು, ಎಂದನು; ತರುವಾಯ ಒಂದು ಚಮ್ಮಟಿಗೆ ಯನ್ನು ತೆಗೆದುಕೊಂಡು ಸುಮ್ಮನೆ ಆ ಮರದಮೇಲೆ ಇಪ್ಪತ್ತು ಮುವ್ವತ್ತು ಏಟುಗಳನ್ನು ಹೊಡೆದನು. ಅದು ಸ್ವಲ್ಪ ಜಜ್ಜಾಯಿತು. ಒಂದು ದಪ್ಪ ಉಳಿಯನ್ನು ಅದರಮೇಲಿಟ್ಟು ಸ್ವಲ್ಪ ಹೊಡೆದನು. ಉಳಿಯ ಬಾಯಿ ಸ್ವಲ್ಪ ಒಳಕ್ಕೆ ಹೋಯಿತು. ಸುಮತಿಯೂ, ಆಳೂ, ಇಬ್ಬರೂ ಚಮ್ಮಟಿಗೆ ಯಿಂದ ಉಳಿಯಮೇಲೆ ಹೊಡೆಯುತಾ ಬಂದರು. ಉಳಿ ಮರದ ಒಳಕ್ಕೆ ಇಳಿದುಹೋಯಿತು. ಮತ್ತೊಂದು ಉಳಿಯನ್ನು ಅದರ ಮಗ್ಗುಲಲ್ಲಿ ಇಟ್ಟು ಪುನಃ ಚಮ್ಮಟಿಗೆಯಿಂದ ಹೊಡೆದರು. ಮರ ಸೀಳಿಹೋಯಿತು. ಈ ಪ್ರಕಾರ ಸುಮತಿಯು ಅದನ್ನು ಸೀಳಿದನು. ದಪ್ಪನಾಗಿರುವ ಒಂದು ಸೀಳನ್ನು ಮನೆಗೆ ತೆಗೆದುಕೊಂಡು ಹೋಗೋಣವೆಂದು ಸುಮತಿಯು ಹೇಳಿದನು. ಮದನ ಅದಕ್ಕೆ ಒಪ್ಪಲು, ಒಂದು ಕೋಲಿನ ಮಧ್ಯೆ ಹಗ್ಗ ವನ್ನು ಕಟ್ಟಿ, ಆ ಹಗ್ಗಕ್ಕೆ ಈ ಸೀಳನ್ನು ಕಟ್ಟಿದರು. ಸುಮತಿ ಮದನ ಇಬ್ಬರೂ ಆ ಕೋಲನ್ನು ಹೆಗಲಮೇಲೆ ಹೊತ್ತುಕೊಂಡರು. ಮದನನು ಆ ಹಗ್ಗಕ್ಕೆ ಹತ್ತಿರವಾಗಿ ಕೋಲನ್ನು ಹೆಗಲಮೇಲೆ ಹೇರಿಕೊಂಡನು. ಸುಮತಿಯು ಇನ್ನೊಂದು ಕೊನೆಯಲ್ಲಿ ಹೊತ್ತುಕೊಂಡನು. ಮದನನಿಗೆ ಭಾರ ಹೆಚ್ಚಾಯಿತು. ಆದರೆ ಸುಮತಿಯು ಲಕ್ಷ್ಯವಿಲ್ಲದೆ ಹೊತ್ತು ಕೊಂಡು ಹೋಗುತಿರುವುದನ್ನು ಕಂಡು, ನಾಚಿಕೆಯಿಂದ ತಾನೂ ಮಾತನಾಡದೆ ಸುಮ್ಮನೇ ಹೋದನು. ಜೋಯಿಸನು ಇವರಿಬ್ಬರನ್ನೂ

ನೋಡಿ,—ಮದನ, ಯಾರು ನಿನಗೆ ಇಷ್ಟೊಂದು ಭಾರವನ್ನು ಹೊರಿಸಿದರು? ಎಂದನು. ಸುಮತಿ ಹೊರಿಸಿದನೆಂದು ಮದನ ಹೇಳಿದ ಮಾತನ್ನು ಕೇಳಿ, ಜೋಯಿಸನು—ನಿನಗೆ ತಿಳಿಯದಂತೆ ಸುಮತಿಯು ನಿನಗೆ ಮೋಸಮಾಡುವುದಕ್ಕೆ ಯತ್ನಿಸಿದ್ದು ಇದೇ ಮೊದಲು, ಎಂದು ನುಡಿದನು. ಆ ಮಾತಿಗೆ ಸುಮತಿಯು—ಗುರುಗಳೆ, ಮದನನಿಗೆ ಆಗಲೇ ಭಾರವನ್ನು ಕಡಮೆಮಾಡುತಿದ್ದೆ. ಆದರೆ ಸನ್ನೆಮರವನ್ನು ನೋಡಿ, ಇವನಿಗೆ ಬಹು ಆಶ್ಚರ್ಯವಾಯಿತು. ಆದಕಾರಣ ಅದಕ್ಕೆ ಸಂಬಂಧಪಟ್ಟ ಮತ್ತೊಂದು ಸಂಗತಿಯನ್ನು ತಿಳಿಸೋಣವೆಂದು ಹೀಗೆ ಹೊರಸಿಕೊಂಡು ಬಂದೆ, ಎಂದು ಹೇಳಿ, ತಾನು ಹೊತ್ತಿದ್ದಕಡೆ ಮದನನಿಗೆ ಕೊಟ್ಟು, ಅವನಕಡೆ ತಾನು ಹೊತ್ತುಕೊಂಡು—ಮದನ, ಈಗ ಭಾರ ಹೇಗಿದೆ? ಎಂದನು. ಮದನಕುಮಾರನು ಬೆರಗಾಗಿ—ನನಗೆ ಭಾರ ಕಡಮೆಯಾಗಿದೆ, ಇದು ಹೇಗೆ ಆಯಿತು? ಎಂದನು. ಆಗ ಜೋಯಿಸನು—ನೋಡು, ಮರದತುಂಡು ಮೊದಲಿಗಿಂತ ಈಗ ನಿನಗೆ ದೂರವಾಗಿದೆ, ಸುಮತಿಗೆ ಹತ್ತಿರವಾಗಿದೆ. ಆದ್ದರಿಂದ ಭಾರವಾದಕಡೆ ಅವನಿಗೆ ಹೋಯಿತು; ಹಗುರವಾದಕಡೆ ನಿನಗೆ ಬಂತು, ಎಂದನು. ಇದನ್ನು ಕೇಳಿ, ಮದನನು ಆಹ! ಇದು ಚಮತ್ಕಾರವೇಸರಿ. ನಮಗೆ ತಿಳಿಯದ ಸಂಗತಿ ಎಷ್ಟೋ ಇದೆ, ಎಂದುಕೊಂಡನು.

ತರುವಾಯ ಜೋಯಿಸನು ಮದನನನ್ನು ಅಂಗಡಿಗೆ ಕರೆದುಕೊಂಡು ಹೋಗಿ, ಒಂದು ತಕ್ಕಡಿಯನ್ನು ತೆಗೆದುಕೊಂಡು ಬಂದು ಕಡ್ಡಿಯ ಮಧ್ಯಭಾಗಕ್ಕೆ ದಾರವನ್ನು ಕಟ್ಟಿ ಹಿಡಿದುಕೊಂಡನು. ಆಗ ಎರಡುಕಡೆಗೂ ಸಮನಾದ ತೂಕವನ್ನು ಹಾಕಿದರೆ ಕಡ್ಡಿ ಹೀಗೆಯೇ ನಿಂತುಕೊಳ್ಳುವುದು; ಆದರೆ ಆ ಕಡ್ಡಿಯ ಮಧ್ಯೆ ಕಟ್ಟಿರುವ ದಾರವನ್ನು ಒಂದುಕಡೆಗೆ ಹೆಚ್ಚಾಗಿ ತಳ್ಳಿದರೆ ಏನಾಗುತ್ತೆ ನೋಡೋಣ, ಎಂದು ಸ್ವಲ್ಪ ತಳ್ಳಲು ತಕ್ಕಡೀ ಕಡ್ಡಿಯು ಉದ್ದ ಹೆಚ್ಚಾಗಿದ್ದ ಕಡೆ ಕೆಳಕ್ಕೆ ಬಂತು. ಪುನಃ ಜೋಯಿಸನು—ಈಗ ನೋಡು, ತಕ್ಕಡಿ ಚಿಕ್ಕದಾದ ಕಡೆ ಭಾರವನ್ನು ಹೆಚ್ಚಾಗಿ ಹಾಕಿದರೆ, ತೂಕ ಸರಿಯಾಗಿ ನಿಂತುಕೊಳ್ಳುವುದು ಎಂದು, ಆ ತಕ್ಕಡಿಯ ಸಣ್ಣ ತೋಳ ಕಡೆ ಭಾರವನ್ನು ಹೆಚ್ಚಿಸಿ

ದನು. ಉದ್ದವಾದ ಕಡೆ ಉದ್ದ ಎಷ್ಟು ಹೆಚ್ಚಾಗಿತ್ತೊ, ಗುತ್ತನಾದ ಕಡೆ ಭಾರವನ್ನು ಅದಕ್ಕೆ ತಕ್ಕಂತೆ ಹೆಚ್ಚಿಸಲು, ತಕ್ಕಡಿಯು ನಿಂತು ಕೊಂಡಿತು. ಇದನ್ನು ಕಂಡು ಮದನನು ಬೆರಗಾದನು.

ಆಮೇಲೆ ಜೋಯಿಸನು ತನ್ನ ಕಣಜದ ಹತ್ತಿರಕ್ಕೆ ಹೋಗಿ, ಒಂದು ಚೀಲ ತುಂಬ ಬತ್ತವನ್ನ ತುಂಬಿ ಅದನ್ನು ಎತ್ತು ಎಂದು ಮದನನಿಗೆ ಹೇಳಿದನು. ಮದನನು ಆ ಮಾತಿಗೆ ನಗುತ್ತಾ, ತನ್ನ ಕೈಲಾಗುವುದಿಲ್ಲವೆಂದು ಹೇಳಿದನು. ಆಗ ಉಪಾಧ್ಯಾಯನು ತೊಲೆಯ ನಾಗವಾಸಕ್ಕೆ ಒಂದು ರಾಟೆಯನ್ನು ಕಟ್ಟಿ, ಬತ್ತದ ಚೀಲಕ್ಕೆ ಒಂದು ಹಗ್ಗದ ಕೊನೆಯನ್ನು ಬಿಗಿದು, ಆ ಹಗ್ಗವನ್ನು ರಾಟೆಯಮೇಲಿನಿಂದ ತೆಗೆದುಕೊಂಡು, ಅದನ್ನು ಎಳೆಯುವಂತೆ ಮದನನಿಗೆ ಹೇಳಿದನು. ಬತ್ತದ ಚೀಲ ಮೇಲಕ್ಕೆ ಎದ್ದಿತು. ಆಗ ಮದನನು—ಇದೇನು ಸೋಜಿಗ! ಆಗ ಎತ್ತುವುದಕ್ಕಾಗಲಿಲ್ಲ, ಈಗ ಎತ್ತುವುದಕ್ಕಾಯಿತು? ಎಂದು ಹೇಳಲು, ಜೋಯಿಸನು—ದೊಡ್ಡವರು ಮಾಡತಕ್ಕ ಕೆಲಸವನ್ನು ಚಿಕ್ಕವರು ಸಹಿತ ಮಾಡುವುದಕ್ಕೆ ಇದೂ ಒಂದು ಉಪಾಯ, ಎಂದನು.

ಮದನ—ವಿದ್ಯವನ್ನು ಕಲಿತುಕೊಳ್ಳುವುದು ಉತ್ತಮ. ಅದರಿಂದ ನಮಗೆ ಬುದ್ಧಿಯು ಹೆಚ್ಚುವುದು. ದೇಹದ ಶಕ್ತಿಯೂ ಹೆಚ್ಚುವುದು. ಇಂಥಾ ಯುಕ್ತಿಗಳು ಇನ್ನೂ ಇವೆಯೆ?

ಜೋಯಿಸ—ಬೇಕಾದಷ್ಟು ಇವೆ. ಮುಂದಕ್ಕೆ ಕಲಿತುಕೊಳ್ಳುವಂತೆ. ಮೊದಲು ಗಣಿತವನ್ನು ಕಲಿತುಕೊಂಡು ಬರವಣಿಗೆಯನ್ನು ತಿಳಿದುಕೊ.

ಮದನ—ಗಣಿತ ಎಂದರೇನು?

ಜೋಯಿಸ—ಅದು ಇಂಥಾದ್ದೆಂದು ಈಗ ಹೇಳುವುದಕ್ಕಾಗುವುದಿಲ್ಲ, ಈಗ ಅದರ ಸಂಗತಿಯನ್ನು ಸ್ವಲ್ಪ ತಿಳಿಸುತೇನೆ. ಆ ಗೋಡೆಯ ಹತ್ತಿರ ಎಷ್ಟು ಬತ್ತದ ಕಾಳು ಬಿದ್ದಿದೆ, ಎಣಿಸು.

ಮದನ—ಇಪ್ಪತ್ತೈದು.

ಜೋಯಿಸ—ಆ ಚೀಲದ ಹತ್ತಿರ ಎಷ್ಟು ಕಾಳು ಬಿದ್ದಿದೆ?

ಮದನ—ಹದಿನಾಲ್ಕು.

ಜೋಯಿಸ—ಒಂದು ಗುಡ್ಡೆಯಲ್ಲಿ ಹದಿನಾಲ್ಕು, ಇನ್ನೊಂದು ಗುಡ್ಡೆಯಲ್ಲಿ ಇಪ್ಪತ್ತೈದು, ಎರಡೂ ಸೇರಿ ಎಷ್ಟಾಯಿತು?

ಅದಕ್ಕೆ ಮದನ ಉತ್ತರವನ್ನ ಹೇಳಲಾರದೇ ಹೋದ. ಜೋಯಿಸನು ಸುಮತಿಯ ಕಡೆಗೆ ತಿರುಗಲು, ಮುವ್ವತ್ತೊಂಭತ್ತಾಯಿತೆಂದು ಅವ ಹೇಳಿದ.

ಜೋಯಿಸ—ಎರಡು ಗುಡ್ಡೆಯನ್ನು ಬೆರಸಿ ಬಿಡುತೇನೆ. ಈಗ ಕಾಳು ಎಷ್ಟಾಯಿತು, ಎಣಿಸು.

ಮದನ—ಮುವ್ವತ್ತೊಂಭತ್ತು.

ಜೋಯಿಸ—ಅದರಲ್ಲಿ ಹತ್ತೊಂಭತ್ತನ್ನು ನಾನು ತೆಗೆದು ಕೊಂಡರೆ ಎಷ್ಟು ಉಳಿಯಿತು.

ಮದನ—ಎಣಿಸಬೇಕು.

ಜೋಯಿಸ—ಎಣಿಸದೇ ಹೇಳಲಾರೆಯು? ಸುಮತಿ, ನೀನು ಹೇಳು.

ಸುಮತಿ—ಇಪ್ಪತ್ತು.

ಜೋಯಿಸ—ಈ ವಿಧವಾದ ಲೆಕ್ಕಾಚಾರವೇ ಗಣಿತ. ಆದರೆ ಸುಲಭವಾಗಿ ಲೆಕ್ಕಾಮಾಡುವ ಮಾರ್ಗವಿದೆ. ಮಸಲ, ಈ ಚೀಲದಲ್ಲಿ ಎಷ್ಟು ಬತ್ತದ ಕಾಳು ಇದೆ ಎಂದು ಕೇಳಿದರೆ, ಎಂಟು ಹತ್ತು ದಿವಸ ಕೂತು ಲೆಕ್ಕಾಮಾಡಿದರೂ ಆಗುವುದಿಲ್ಲ. ಆದರೆ ಗಣಿತ ಬಂದಿದ್ದರೆ ಕಾಲುಗಳಿಗೆಯಲ್ಲಿ ಹೇಳಬಹುದು.

ಮದನ—ಇದೇನೋ ಅದ್ಭುತವಾಗಿದೆ. ನಂಬುವುದು ಕಷ್ಟ.

ಜೋಯಿಸ—ಹಾಗಾದರೆ ಹೇಳುತೇನೆ, ಕೇಳು. ಈ ಚೀಲದಲ್ಲಿ ಐವತ್ತು ಸೇರು ಬತ್ತವಿದೆ. ಸೇರಿಗೆ ಹದಿನಾರು ಚಟಾಕು. ಆದ್ದರಿಂದ ಇದರಲ್ಲಿ ಎಂಟುನೂರು ಚಟಾಕು ಇದೆ. ಸೇರಿಗೆ ಎಂಭತ್ತು ರೂಪಾಯಿ ತೂಕದ ಪ್ರಕಾರ, ಚಟಾಕಿಗೆ ಐದು ರೂಪಾಯಿ ತೂಕವಾಯಿತು. ರೂಪಾಯಿ ತೂಕಕ್ಕೆ ಮೂವತ್ತು ಹಣತೂಕ ಅಥವಾ ನಾನೂರ ಎಂಭತ್ತು ವೀಸತೂಕ. ಒಂದು ಕಾಳು ಒಂದು ವೀಸ ತೂಕವಿದೆ. ಒಂದು ರೂಪಾಯಿ ತೂಕಕ್ಕೆ ನಾನೂರೆಂಭತ್ತು ಕಾಳಾಯಿತು. ಐದು

ರೂಪಾಯಿ ತೂಕಕ್ಕೆ ಎರಡು ಸಾವಿರದ ನಾನೂರು ಕಾಳಾಯಿತು. ಅದೇ ಒಂದು ಚಟಾಕು. ಎರಡು ಸಾವಿರದ ನಾನೂರನ್ನು ಎಂಟುನೂರು ಸಾರಿ ಗುಣಿಸಿದರೆ, ಬರುವ ಲೆಕ್ಕ ಈ ಚೀಲದಲ್ಲಿರುವ ಕಾಳಿನ ಲೆಕ್ಕ.

ಮದನ—ಜೋಯಿಸರೆ, ಈ ಚಮತ್ಕಾರವನ್ನು ನನಗೆ ಹೇಳಿ ಕೊಡಬೇಕು.

ಜೋಯಿಸ—ನಿನಗೆ ಬೇಕಾದ್ದನ್ನು ಹೇಳಿಕೊಡುತ್ತೇನೆ. ಇದು ಹಾಗಿರಲಿ. ಒಂದು ಕಥೆಯನ್ನು ಹೇಳುತೇನೆ.

ಒಂದು ಊರಿನಲ್ಲಿ ಒಬ್ಬ ಅರಸು ಇದ್ದನು. ಇವನಿಗೆ ಕುದುರೆ ಗಳಲ್ಲಿ ಬಹು ಪ್ರೀತಿ ಇತ್ತು. ಅವುಗಳಿಗೆ ಎಷ್ಟು ಕ್ರಯವನ್ನಾದರೂ ಕೊಟ್ಟು ಕೊಂಡುಕೊಂಡು ಬಹು ಅಕ್ಕರೆಯಿಂದ ಸಾಕುತಿದ್ದನು. ಒಂದು ದಿನ ಒಬ್ಬ ಅರಬ್ಬೀವರ್ತಕನು ಒಂದು ಅಶ್ವವನ್ನು ತಂದು ಅರಸನಿಗೆ ತೋರಿಸಿದನು. ಈ ಕುದುರೆಯು ಸಲಕ್ಷಣವಾಗಿತ್ತು. ಸುಳಿ ಮೊದಲಾದ್ದೆಲ್ಲಾ ಸರಿಯಾಗಿತ್ತು. ಹೀಗೆ ನೋಟಕ್ಕೆ ಸುಂದರವಾಗಿರಲು ದೊರೆಯು ಅದರ ಮೇಲೆ ಏರಿಕೊಂಡು ಸ್ವಲ್ಪ ದೂರ ಓಡಾಡಿಸಿದನು. ಅದು ನಡಗೆಯಲ್ಲಿಯೂ ಬಹು ಸೌಮ್ಯವಾಗಿತ್ತು. ಮತ್ತು ಸವಾರನು ಮಾಡಿದ ಹಾಗೆಲ್ಲಾ ಸಂಜ್ಞೆಯನ್ನು ತಿಳಿದುಕೊಂಡು ಹೋಗುತಿತ್ತು. ಅರಸನಿಗೆ ಇದನ್ನು ಕಂಡು ಬಹು ಸಂತೋಷವಾಯಿತು. ಅದರ ಕ್ರಯವೆಷ್ಟೆಂದು ಅರಬ್ಬೀ ವರ್ತಕನನ್ನು ಕೇಳಲು, ಅವನು-ಇದಕ್ಕೆ ಒಂದು ಸಾವಿರ ವರಹವನ್ನು ಕೊಡಬೇಕೆಂದು ಹೇಳಿದನು. ಈ ಕ್ರಯ ಹೆಚ್ಚೆಂದು ದೊರೆ ಹೇಳಲು, ಅರಬ್ಬರವನು ಕುದುರೆಯನ್ನು ತೆಗೆದುಕೊಂಡು ಹೊರಟುಹೋಗುತಿದ್ದನು. ಅದರಮೇಲೆ ವಿಶೇಷ ಮನಸ್ಸಿದ್ದ ದೊರೆಯು ಅವನನ್ನು ಹಿಂತಿರುಗಿ ಕರೆಯಿಸಿ, ಅದರ ಕ್ರಯವನ್ನು ಸಲುವಳಿಯಾಗಿ ಮಾಡಿಕೊಳ್ಳುವುದಕ್ಕೆ ಮತ್ತೇನೂ ಮಾರ್ಗವಿಲ್ಲವೆ? ಎಂದು ಕೇಳಲಾಗಿ, ಆ ಕುದುರೇ ಸಾಹುಕಾರನು—ಮಹಾಸ್ವಾಮಿ, ನಾನು ಹೇಳಿದ ಸಾವಿರ ವರಹಕ್ಕೆ ಒಂದು ಕಾಸು ಕಡಮೆಯಾದರೂ, ನಾನು ತೆಗೆದುಕೊಳ್ಳುವುದಿಲ್ಲ. ಅದು ಹಾಗಿರಲಿ. ನಾನು ಇನ್ನೊಂದು ಮಾತನ್ನು ಹೇಳುತೇನೆ, ಲಾಲಿಸಬೇಕು. ಆ ಕುದುರೇ ಕಾಲಿನ ಲಾಳಕ್ಕೆ ಎಷ್ಟು

ಮೊಳೆ ಹಾಕಿದೆಯೋ ಅಷ್ಟರಲ್ಲಿ ಒಂದನೇ ಮೊಳೆಗೆ ಒಂದು ಕಾಸನ್ನೂ, ಎರಡನೇ ಮೊಳೆಗೆ ಎರಡು ಕಾಸನ್ನೂ, ಮೂರನೇ ಮೊಳೆಗೆ ನಾಲ್ಕು ಕಾಸನ್ನೂ, ನಾಲ್ಕನೇ ಮೊಳೆಗೆ ಎಂಟು ಕಾಸನ್ನೂ, ಐದನೇ ಮೊಳೆಗೆ ಹದಿನಾರು ಕಾಸನ್ನೂ ಈ ಪ್ರಕಾರ ದ್ವಿಗುಣೋತ್ತರ ವೃದ್ಧಿಯಾಗಿ ನನಗೆ ಅಪ್ಪಣೆಯಾಗಲಿ, ನಾನು ಕುದುರೆಯನ್ನು ತಮಗೆ ಒಪ್ಪಿಸುತೇನೆ, ಎಂದು ಹೇಳಿದನು.

ಇದಕ್ಕೆ ದೊರೆಯು—ಈ ವರ್ತಕ ಏನೂ ತಿಳಿದವನಲ್ಲ. ಮೊಳೆಗೆ ಒಂದು ಕಾಸಿನ ಪ್ರಕಾರ ಕೇಳುತಾನೆ. ಮೊಳೆಯ ಲೆಕ್ಕ ಎಷ್ಟುತಾನೆ ಆದೀತು ? ಇದರಿಂದ ನಮಗೆ ಆದಾಯವಾಗುವುದೂ ಕುದುರೆಯವನಿಗೆ ನಷ್ಟವಾಗುವುದೂ ಖಂಡಿತ, ಎಂದು ಯೋಚಿಸಿ, ಕುದುರೇ ಸಾಹುಕಾರನ ಮೊಳೆ ಲೆಕ್ಕದ ಬೆಲೆಗೆ ಒಪ್ಪಿಕೊಂಡನು. ಆ ಹಣವನ್ನು ಲೆಕ್ಕಾ ಮಾಡಿ ಕೊಡಬೇಕಾಯಿತು. ಈ ಮಧ್ಯೆ ಅರಬ್ಬರವನು—ಮಹಾಸ್ವಾಮಿ, ಈ ಲೆಕ್ಕದಪ್ರಕಾರ ತಾವು ನನಗೆ ಕೊಡಲೇಬೇಕೆಂದು ಹೇಳುವುದಿಲ್ಲ. ನಾನು ಮೊದಲು ಕೇಳಿದ ಸಾವಿರ ವರಹ ಅಪ್ಪಣೆಯಾದರೆ ಸಾಕಾಗಿದೆ, ಎಂದನು. ಆಗ ಅರಸು—ಏನಯ್ಯ, ಮಾತು ಒಂದೊ, ಎರಡೊ? ಕಡಮೆ ಕ್ರಯಕ್ಕೆ ಕೊಡುತೇನೆಂದು ಒಪ್ಪಿ, ಈಗ ಮೊದಲು ಕೇಳಿದ ಸಾವಿರ ವರಹವನ್ನೇ ಕೊಡೆಂದು ಹೇಳುತೀಯೆ. ಇದು ನ್ಯಾಯವಲ್ಲ, ಎಂದನು. ತಾವು ನನಗೆ ಈ ಎರಡರಲ್ಲಿ ಯಾವ ಕ್ರಯವನ್ನು ಕೊಡಿಸಿದಾಗ್ಯೂ ಸರಿಯೆ, ಎಂದು ಕುದುರೆಸಾಹುಕಾರ ಹೇಳಲಾಗಿ, ರಾಜನು ರಾಯಸದವರನ್ನು ಕರೆಯಿಸಿ, ಮೊಳೇಲೆಕ್ಕದ ಪ್ರಕಾರ ಕೊಡಬೇಕಾದ ಹಣವನ್ನು ಲೆಕ್ಕಾಮಾಡುವಂತೆ ಹೇಳಿದನು. ರಾಯಸದವರು ಲೆಕ್ಕಾಚಾರ ಮಾಡಿ—ಕುದುರೇ ನಾಲ್ಕು ಕಾಲಿನಲ್ಲಿಯೂ ಇರುವ ಒಟ್ಟು ೨೪ ಮೊಳೆಗೆ ೩,೦೦೦ ವರಹದ ವರೆಗೆ ಆಗುತ್ತೆ ; ಒಂದು ಕುದುರೆಗೆ ಇಷ್ಟೊಂದು ಹಣವನ್ನು ಕೊಟ್ಟವರುಂಟೆ ? ಎಂದು ಹೇಳಿದರು. ಆಗ ದೊರೆಯು ಗಾಬರಿಯಾಗಿ, ಲೆಕ್ಕಾಚಾರ ತನಗೆ ತಿಳಿಯದೇ ಇದ್ದದಕ್ಕಾಗಿ ನಾಚಿಕೊಂಡು, ಅರಬ್ಬರವನಿಗೆ ಅವ ಮೊದಲು ಕೇಳಿದಂತೆ ೧,೦೦೦ ವರಹವನ್ನು ಕೊಟ್ಟು ಕುದುರೆಯನ್ನು ಕೊಂಡುಕೊಂಡನು.

---

# ಕಥೆ, ಕಾದಂಬರಿ, ಚಿತ್ರಗಳು

**ಕುವೆಂಪು—**

| | | | | |
|---|---|---|---|---|
| ಸಂನ್ಯಾಸಿ ಮತ್ತು ಇತರ ಕಥೆಗಳು.... | .... | ೧ | ೪ | ೦ |
| ನನ್ನ ದೇವರು ಮತ್ತು ಇತರ ಕಥೆಗಳು | .... | | .... | |
| ಮಲೆನಾಡಿನ ಚಿತ್ರಗಳು .... | .... | ೧ | ೧೨ | ೦ |
| ಕಾನೂರು ಸುಬ್ಬಮ್ಮ ಹೆಗ್ಗಡಿತಿ .... | .... | ೮ | ೮ | ೦ |

**ಪು. ತಿ. ನರಸಿಂಹಾಚಾರ್—**

| | | | | |
|---|---|---|---|---|
| ರಾಮಾಚಾರಿಯ ನೆನಪು .... | .... | ೧ | ೪ | ೦ |
| ಧ್ವಜರಕ್ಷಣೆ .... | .... | ೧ | ೪ | ೦ |
| ರಥಸಪ್ತಮಿ ಮತ್ತು ಇತರ ಚಿತ್ರಗಳು | .... | ೧ | ೦ | ೦ |

**ಆನಂದ—**

| | | | | |
|---|---|---|---|---|
| ಸ್ವಪ್ನಜೀವಿ ಮತ್ತು ಇತರ ಕಥೆಗಳು | .... | ೧ | ೦ | ೦ |
| ಮಾಟಗಾತಿ .... | .... | ೧ | ೪ | ೦ |

**ಗೊರೂರು ರಾಮಸ್ವಾಮಿ ಐಯಂಗಾರ್—**

| | | | | |
|---|---|---|---|---|
| ಹಳ್ಳಿಯ ಬಾಳು .... | .... | ೨ | ೪ | ೦ |
| ಬೆಸ್ತರ ಕರಿಯ .... | .... | ೨ | ೪ | ೦ |
| ಶಿವರಾತ್ರಿ .... | .... | ೨ | ೪ | ೦ |

**ಎ. ಎನ್. ಮೂರ್ತಿರಾವ್—**

| | | | | |
|---|---|---|---|---|
| ಹಗಲುಗನಸುಗಳು .... | .... | ೧ | ೪ | ೦ |
| ಹವಳದ ದ್ವೀಪ (ಅನುವಾದ) .... | .... | ೧ | ೮ | ೦ |

**ಸಿ. ಕೃಷ್ಣ—**

| | | | | |
|---|---|---|---|---|
| ಮುಗುದೆಯರ ಪತ್ರಗಳು .... | .... | ೧ | ೮ | ೦ |
| ಗೌರಿಯ ಮದುವೆ .... | .... | ೧ | ೪ | ೦ |

**ಎಸ್. ಜಿ. ಶಾಸ್ತ್ರಿ—**

| | | | | | |
|---|---|---|---|---|---|
| ಇದ್ದರೂ ಇರಬಹುದು | .... | .... | ೨ | ೪ | ೦ |

**ಶ್ರೀಪತಿ—**

| | | | | | |
|---|---|---|---|---|---|
| ಶ್ರೀಪತಿಯ ಕಥೆಗಳು | .... | .... | ೨ | ೪ | ೦ |

**ಭಾರತೀಪ್ರಿಯ—**

| | | | | | |
|---|---|---|---|---|---|
| ರುದ್ರವೀಣೆ | .... | .... | ೧ | ೮ | ೦ |

**ಹೊಯಿಸಳ—**

| | | | | | |
|---|---|---|---|---|---|
| ಹೂವಿನ ಹಾಸಿಗೆ | .... | .... | ೧ | ೪ | ೦ |
| ಪುಟ್ಟರಸು | .... | .... | ೧ | ೦ | ೦ |
| ಪೋರಿ | .... | .... | ೦ | ೮ | ೦ |
| ಪತಾಕ್ಷಿ | .... | .... | ೧ | ೮ | ೦ |

**ಎಂ. ಎಸ್. ಪುಟ್ಟಣ್ಣ—**

| | | | | | |
|---|---|---|---|---|---|
| ಸುಮತಿ ಮದನಕುಮಾರರ ಚರಿತ್ರೆ | .... | .... | ೨ | ೪ | ೦ |
| ಮಾಡಿದ್ದುಣ್ಣೋ ಮಹಾರಾಯ | .... | .... | | .... | |
| ನೀತಿಚಿಂತಾಮಣಿ (೩ ಭಾಗಗಳು) | | .... | ಅಚ್ಚಿನಲ್ಲಿ | | |

**ಗ್ರಿಮ್ ಸೋದರರು—**

| | | | | | |
|---|---|---|---|---|---|
| ಚಂದ್ರನನ್ನು ತಂದರು | .... | .... | ೦ | ೮ | ೦ |
| ಆರು ಹಂಸಗಳು | .... | .... | ೦ | ೬ | ೦ |

# ಕಾವ್ಯಾಲಯದ ಪ್ರಕಟನೆಗಳು

**ಕನ್ನಡ ಕಾವ್ಯಮಾಲೆ**—ಈ ಮಾಲೆಯಲ್ಲಿ ಕಾವ್ಯ, ನಾಟಕ, ಕಥೆ, ಕಾದಂಬರಿ, ಚಿತ್ರಗಳು ವಿಮರ್ಶೆ ಇವೇ ಮೊದಲಾದ ಸಾಹಿತ್ಯ ರೀತಿಯ ಕೃತಿಗಳು ಪ್ರಕಟವಾಗಿವೆ. ಇದುವರೆಗೆ ೮೦ಕ್ಕೆ ಮೇಲ್ಪಟ್ಟು ಪುಸ್ತಕಗಳು ಪ್ರಸಿದ್ಧ ವಾಗಿವೆ.

**ಮಕ್ಕಳ ಮುತ್ತಿನಮಾಲೆ**—ಆರೇಳು ವರ್ಷದ ಮಕ್ಕಳಿಂದ ಮೊದಲು ಮಾಡಿ ೧೪–೧೪ ವರ್ಷಗಳ ಬಾಲಕರಿಗೆ ಉಪಯುಕ್ತವಾದ ಪುಸ್ತಕಗಳನ್ನು ಒದಗಿಸುವ ಉದ್ದೇಶದಿಂದ ಈ ಮಾಲೆ ಆರಂಭವಾಗಿ ಈವರೆಗೆ ಸುಮಾರು ೨೦ ಕೃತಿಗಳು ಪ್ರಕಟವಾಗಿವೆ.

**ಕಥಾ ಪ್ರಪಂಚ**—ವಾಚನಾಭಿರುಚಿ ಹೆಚ್ಚಿರುವ ಈ ಕಾಲದ ಆವಶ್ಯಕತೆಗಳಿಗನುಗುಣವಾಗಿ ಜನರು ಅಗತ್ಯವಾಗಿ ಅಪೇಕ್ಷಿಸುವ ಕಥೆ ಕಾದಂಬರಿಗಳನ್ನು ಹೆಚ್ಚು ಹೆಚ್ಚಾಗಿ ಒದಗಿಸುವ ದೃಷ್ಟಿಯಿಂದ ಈ ಹೊಸ ಮಾಲೆ ಆರಂಭವಾಗಿದೆ. ಈ ಮಾಲೆಯಲ್ಲಿ ವರ್ಷ ವರ್ಷವೂ ಸುಮಾರು ೯೦೦ ಪುಟಗಳಷ್ಟು ಕಥಾಸಾಹಿತ್ಯ ಪ್ರಕಟವಾಗುತ್ತದೆ. ಈವರೆಗೆ ಪ್ರಸಿದ್ಧವಾಗಿರುವ ಪುಸ್ತಕಗಳು :—

೧. **ನಿರಾಶ್ರಿತೆ** (ಕಥೆಗಳು)—ಎಚ್. ವಿ. ಸಾವಿತ್ರಮ್ಮ ಬಿ.ಎ.
ಕ್ರೌ೯ ಅ. iv+೧೧೬. ಬೆಲೆ: ೧ ೧೨ ೦

೨. **ಮಾಡಿದ್ದುಣ್ಣೋಮಹಾರಾಯ**–ಎಂ. ಎಸ್. ಪುಟ್ಟಣ್ಣ. (ಅಚ್ಚಿನಲ್ಲಿದೆ)

## ೧೪ ನೆ ಅಧ್ಯಾಯ

ಆಗ ಸುಮತಿಯು ಕಥೆಯನ್ನು ಹೇಳಲು ಮೊದಲು ಮಾಡಿದ್ದು ಹೇಗೆಂದರೆ :—

ಈಗ್ಗೆ ಅನೇಕ ವರುಷಗಳಿಗೆ ಮುಂಚೆ, ಸುರಪುರ ಪ್ರಾಂತ್ಯದಲ್ಲಿ ಬೇಡರು ವಿಶೇಷವಾಗಿದ್ದರು. ಅವರಲ್ಲಿ ಧೀರನಾಯಕನೆಂಬುವನು ಮುಖಂಡ. ಕೋಟೆ ಕೊತ್ತಳಗಳನ್ನು ಕಟ್ಟಿಕೊಂಡು, ಯಾವ ಶತ್ರು ಬಂದರೂ ಹೊಡೆದು ಅಟ್ಟುತಾ, ಇವನು ಬಹು ಪರಾಕ್ರಮಿಯಾಗಿದ್ದನು. ಈ ಬೇಡರು ಅಂಗಪುಷ್ಟಿಯಾಗುವಂತೆ ಸಾಧಕಗಳನ್ನು ಮಾಡುವುದೂ, ಕಷ್ಟಕ್ಕೆ ನುರುಗುವುದೂ, ಎಂಥಾ ಬಾಧೆ ಬಂದಾಗ್ಯೂ ಸಹಿಸಿಕೊಳ್ಳುವುದೂ, ಇಂಥಾ ಕೆಲಸಗಳಲ್ಲಿ ವಿಶೇಷ ಆಸಕ್ತಿಯುಳ್ಳವರಾಗಿದ್ದರು. ಇವರಲ್ಲಿ ಇದೇ ಹುಡುಗರಿಗೆ ವಿದ್ಯಾಭ್ಯಾಸ. ದೊರೆ ಮಕ್ಕಳಾದರೂ ಸರಿಯೆ, ಬಡವರ ಮಕ್ಕಳಾದರೂ ಸರಿಯೆ, ಪಕ್ಷಪಾತವೇನೂ ಇರಲಿಲ್ಲ. ಎಲ್ಲರೂ ಏಕರೀತಿಯಾಗಿ ಕಷ್ಟಪಟ್ಟು ಸಮಯದಲ್ಲಿ ಯಾವ ಕೆಲಸಕ್ಕಾದರೂ ಸಿದ್ಧವಾಗಿರುತಿದ್ದರು.

ಹೀಗಿರುವಲ್ಲಿ ತುರುಕರು ಈ ದಕ್ಷಿಣ ದೇಶಕ್ಕೆ ಆಗಾಗ್ಯೆ ಬಂದು, ಕೊಳ್ಳೇ ಹೊಡೆದು, ಜನರನ್ನು ಕೊಂದು, ರಾಜ್ಯವನ್ನು ಹಾಳುಮಾಡಿ ಹೋಗುತಿದ್ದರು. ಇವರ ಹಾವಳಿಯಲ್ಲಿ ಅನೇಕ ಸಂಸ್ಥಾನಗಳು ಹೋದವು. ದೊಡ್ಡ ದೊಡ್ಡ ಪಟ್ಟಣಗಳೆಲ್ಲಾ ಹಾಳೂರುಗಳಾದವು. ಇಂಥಾ ತುಂಟ ತುರುಕರನ್ನು ಎದುರಿಸುವುದಕ್ಕೆ ಈ ಬೇಡರು ಹೊರತು ಮತ್ತೆಯಾರೂ ಇರಲಿಲ್ಲ. ಧೀರನಾಯಕನು ತನ್ನ ಜನರನ್ನು ಕರೆದುಕೊಂಡು ಹೋಗಿ, ಸಿಕ್ಕಿದ ಕಡೆ ತುರುಕರನ್ನು ಹೊಡೆದು ಓಡಿಸುತಾ ಇದ್ದನು. ಈ ಬೇಡರು ಹಗಲು ಅನ್ನವಿಲ್ಲದೆ ಒಣಕಲು ರೊಟ್ಟಿಯನ್ನು ಕಡಿಯುತಾ, ರಾತ್ರೆ ಮಲಗುವುದಕ್ಕೆ ಸ್ಥಳವಿಲ್ಲದೆ ಕಾಡಿನಲ್ಲಿ ಗಿಡದ ಕೆಳಗೂ, ಬೇಲಿಯ ಕೆಳಗೂ, ಬಿದ್ದುಕೊಂಡಿರುತಾ, ಅತ್ಯಂತ ಶ್ರಮಪಟ್ಟು ತುರುಕರನ್ನು ಅಡಗಮೆಟ್ಟಿದರು. ಕೊನೆಗೆ ಒಂದು ಸಮಯ

ದಲ್ಲಿ ಈ ಎರಡು ಸೇನೆಗೂ ಕೈಗೂಡುವ ಸಂದರ್ಭ ಸಿಕ್ಕಿತು. ಕೊಂಬಿನ ಕೂಗಿನ ದೂರದಲ್ಲಿ ಎರಡು ದಂಡೂ ಪಾಳಯವನ್ನು ಹಾಕಿ ಇಳಿದು ಕೊಂಡಿತು. ತುರುಕರ ಕಡೆ ದಂಡು ಮುವ್ವತ್ತು ಸಾವಿರದ ಮ್ಯೇಲಿತ್ತು. ಧೀರನಾಯಕನ ಕಡೆಯವರೆಲ್ಲರನ್ನೂ ಸೇರಿಸಿ ಎಣಿಸಿದರೂ ಇನ್ನೂರು ಕುದುರೆ, ಸಾವಿರ ಕಾಲಾಳು, ಇದರ ಮೇಲೆ ಆಗುತಿರಲಿಲ್ಲ. ಆದಾಗ್ಯೂ ಬೇಡರ ಮುಂದೆ ಮುಸಲ್ಮಾನರು ಹಾಯುವುದು ಕಷ್ಟವಾಗಿತ್ತು.

ಆಗ ಮುಸಲ್ಮಾನರ ಸೇನಾಪತಿಯಾದ ಜಲಾಲುದೀನನು ತನ್ನ ಮನಸ್ಸಿನಲ್ಲಿ ಯುದ್ಧ ಮೊದಲಾಗುವುದಕ್ಕೆ ಮುಂಚೆ ಯೋಚಿಸಿಕೊಂಡು, ಯುದ್ಧವಾಗುವುದಕ್ಕೆ ಮುನ್ನಾದಿನ ಸಾಯಂಕಾಲ ಉತ್ತಮವಾದ ಅಡಿಗೆಯನ್ನು ಬೇಕಾದಷ್ಟು ಮಾಡಿಸಿ, ಆ ರುಚಿರುಚಿಯಾದ ಪದಾರ್ಥ ಗಳನ್ನೂ ಮೆತ್ತಗಿರುವ ಸಾವಿರಾರು ಹಾಸಿಗೆಗಳನ್ನೂ ಹೊದಿಕೆಗಳನ್ನೂ ಶತ್ರುಸೇನೆಗೆ ಕಳುಹಿಸಿ, ಆ ಬೇಡರ ಒಬ್ಬೊಬ್ಬ ಭಟನಿಗೂ ಪದಾರ್ಥ ಗಳನ್ನು ಬಡಿಸಿ, ತಲೆಗೆ ಒಂದು ಹಾಸಿಗೇ ಪ್ರಕಾರ ಕೊಡುವಂತೆ ಏರ್ಪಾಡು ಮಾಡಿಸಿದನು. ಒಂದೆರಡು ದಿವಸ ಹೀಗೆ ಚೊಕ್ಕ ಭೋಜನ ವಾಯಿತು. ಮೆತ್ತಗಿರುವ ಹಾಸಿಗೆ ಸಿಕ್ಕಿದ್ದರಿಂದ ನಿದ್ರೆಯು ಚೆನ್ನಾಗಿ ಬಂತು. ತರುವಾಯ ಬೇಡರ ಸೇನೆಯಲ್ಲಿ ಕೆಲವರು ತಪ್ಪಿಸಿಕೊಂಡು ಓಡಿಹೋದರು. ಇನ್ನು ಕೆಲವರಿಗೆ ಆಲಸ್ಯ ಉಂಟಾಯಿತು. ಈ ಒಡ ಕನ್ನು ತಿಳಿದು ಜಲಾಲುದೀನನು ತಾನು ಮಾಡಿದ ತಂತ್ರ ಸಾಗಿತಲ್ಲಾ, ಎಂದು ಸಂತೋಷದಿಂದ ಶತ್ರುಗಳಿಗೆ ಯುದ್ಧ ಕೊಡುವುದಕ್ಕೆ ಅನು ವಾದನು. ಧೀರನಾಯಕನು ಸೇನೆಯನ್ನು ಸಜ್ಜುಮಾಡಿಕೊಳ್ಳಬೇಕೆಂದು ಹೊರಡುವಾಗ್ಗೆ, ಅನೇಕರು ಬರದೇ ಹೋದರು. ಆಶ್ಚರ್ಯದಿಂದ ಇದಕ್ಕೆ ಕಾರಣವೇನೆಂದು ಯೋಚಿಸಲು, ಉತ್ತಮವಾದ ತಿಂಡಿಯನ್ನೂ, ಹಾಸಿಗೆಯನ್ನೂ, ಜಲಾಲುದೀನನು ತನ್ನ ಸೇನೆಯವರಿಗೆಲ್ಲಾ ಮೂರು ದಿನದಿಂದ ಹವಣಿಸಿಕೊಡುತಿದ್ದ ಸಂಗತಿ ತಿಳಿಯಬಂತು. ಆಗ ಬೇಡರ ಸೇನಾಪತಿಯು—ಓಹೊ! ಮೋಸವಾಯಿತು. ವಿಶೇಷವಾಗಿ ಕಷ್ಟಪಟ್ಟು ನುರುಗಿದ್ದ ಕಾರಣ ನಮ್ಮ ಜನರು ಶ್ರಮಕ್ಕೆ ಹೆದರದೆ ಪರಾಕ್ರಮ ದಿಂದ ಹಗೆಗಳ ಮೇಲೆ ಬಿದ್ದು ಅವರನ್ನು ಸೋಲಿಸುತಿದ್ದರು. ಆದ್ದ

ರಿಂದಲೇ ನಾವು ನೂರಾರು ಜನವಿದ್ದರೂ ಹತ್ತಿಪ್ಪತ್ತು ಸಾವಿರ ತುರುಕ ರನ್ನು ಹೊಡೆದು ಓಡಿಸುತಿದ್ದೆವು. ತುರುಕರ ಸೇನೆಯು ಸೌಖ್ಯಾಪೇಕ್ಷೆ ಯನ್ನು ಪಟ್ಟು, ಆನಂದವಾಗುತಿದ್ದ ಕಾರಣ, ಅವರಲ್ಲಿ ಹೇಡಿತನ ಹೆಚ್ಚಾಗಿ, ಅವರು ಸೋತುಹೋಗುತಿದ್ದರು. ಜಲಾಲುದೀನನು ಈ ಗುಟ್ಟನ್ನು ಅರಿತು ನಮ್ಮವರು ದೇಹ ಸೌಖ್ಯದ ರುಚಿಯನ್ನು ನೋಡು ವಂತೆ ಮಾಡಿದಕಾರಣ ನಮ್ಮ ಸೇನೆಗೆ ಹೇಡಿತನ ಬಂತು ಎಂದು ವ್ಯಸನಪಟ್ಟು, ಒಂದು ದಿನ ರಾತ್ರೆ ತನ್ನವರನ್ನು ಕುರಿತು—ನಮ್ಮ ದೇಶಕ್ಕೋಸ್ಕರ ಪ್ರಾಣವನ್ನು ಒಪ್ಪಿಸತಕ್ಕಂಥಾ ಶೂರರು ಎಷ್ಟು ಜನ ವಿದ್ದೀರಿ, ಅವರೆಲ್ಲಾ ನನ್ನ ಸಂಗಡ ಹೊರಡಿ, ಎಂವನು. ಆಗ ಮುನ್ನೂರು ಜನದಮಟ್ಟಿಗೆ ಆಯುಧಪಾಣಿಗಳಾಗಿ ಹೊರಟರು. ಅವ ರನ್ನು ಕರೆದುಕೊಂಡು, ಸದ್ದು ಇಲ್ಲದಹಾಗೆ, ಧೀರನಾಯಕನು ಶತ್ರು ಸೇನೆಗೆ ನುಗ್ಗಿದನು. ತುರುಕರೆಲ್ಲರೂ ಬೇಕಾದ ತಿಂಡಿಯನ್ನು ತಿಂದು ಆನಂದವಾಗಿದ್ದರು. ಈ ಮುನ್ನೂರು ಜನ ಬೇಡರೂ ತುರುಕರೆಲ್ಲರನ್ನೂ ಛಿದ್ರಗಡಿತ ಕಡಿದರು. ಅನೇಕ ಜನ ತುರುಕರು ನಾಶವಾದರು. ಉಳಿ ದವರು ಬೇಡರಮುಂದೆ ನಿಲ್ಲಲಾರದೆ ಓಡಿಹೋದರು. ಧೀರನಾಯಕ ನಿಗೆ ಜಯವಾಯಿತು. ಆದರೆ ಜಲಾಲುದೀನನು ಮಾಡಿದ ಉಪಾಯ ದಿಂದ ಇವನಿಗೆ ಕಷ್ಟ ಹೆಚ್ಚಾಯಿತು. ಹೀಗೆ ಸುಖವಾಗಿರತಕ್ಕ ಜನ ಗಳು ಹೇಡಿಗಳಾಗುತಾರೆ. ಕಷ್ಟಪಡತಕ್ಕವರು ವೀರರಾಗಿ ಸಮಯ ದಲ್ಲಿ ಗೆಲ್ಲುತಾರೆ.

ಈ ರೀತಿಯಲ್ಲಿ ಕಥೆ ಮುಗಿಯಿತು.

ಆಗ ರಾಮಜೋಯಿಸನು—ಮದನ, ತಳಕುಪಳಕಾಗಿ ಡಂಭ ವಾಗಿರುವ ಉಡುಪನ್ನು ಹಾಕಿಕೊಂಡು ತಿರುಗುವ ಸಿಪಾಯಿಗಳ ಹಣೇಬರವನ್ನು ನೋಡಿದೆಯ ? ಈ ಮೇಲಿನ ಡಂಭದಿಂದ ಉಪ ಯೋಗವಿಲ್ಲ. ಮುಖ್ಯವಾಗಿ ಬೇಕಾದ್ದು, ಧೈರ್ಯ, ಕಷ್ಟಬಂದರೆ ಸಹಿಸುವ ಶಕ್ತಿ. ಇವೆರಡೂ ಇಲ್ಲದಿದ್ದರೆ ವೀರಭಟರ ಬಾಳು ಬಾಳೇ ಅಲ್ಲ. ಅದು ಹಾಗಿರಲಿ. ಸಿಪಾಯಿಗಳಾಗಿ ಒಳ್ಳೇ ಉಡುಗೆಯನ್ನು ಹಾಕಿಕೊಂಡು ತಿರುಗುವುದು ಉತ್ತಮವಾದ್ದೆಂದು ನೀನು ತಿಳಿದುಕೊಂಡಿದ್ದೀಯೆ.

ಅವರು ಪಡುವ ಕಷ್ಟವನ್ನು ನೀನು ಅರಿಯೆ. ಈ ದಂಡಿನ ಜನರು ಹೊಟ್ಟೆಗೆ ಅನ್ನವಿಲ್ಲದೆ, ಕಣ್ಣಿಗೆ ನಿದ್ರೆ ಇಲ್ಲದೆ, ಮಳೆಯಲ್ಲಿ ನನೆದು, ಬಿಸಿಲಿನಲ್ಲಿ ಸೀದು, ಗಾಳೀಬಡಿತವನ್ನು ತಿಂದು, ಬೆಟ್ಟದಮೇಲಕ್ಕೆ ಹತ್ತುತಾ, ಹಳ್ಳಕ್ಕೆ ಇಳಿಯುತಾ, ನದಿಗಳನ್ನೂ ಕೆರೆಗಳನ್ನೂ ಹಾದು ಹೋಗುತಾ ಸಿಕ್ಕಿದಕಡೆ ಕೆಟ್ಟನೀರನ್ನು ಕುಡಿದು ಕೆಟ್ಟ ಆಹಾರವನ್ನೂ ಸೊಪ್ಪುಸೆದೆಗಳನ್ನೂ ತಿನ್ನುತಾ, ಅದರಿಂದ ಉಂಟಾಗುವ ರೋಗ ಗಳನ್ನು ಅನುಭವಿಸಿ ನರಳುತಾ, ಕೆಲವರು ಅದರಲ್ಲಿ ಸಾಯುತಾ, ಮತ್ತೆ ಕೆಲವರು ಇದ್ದರೂ ಸತ್ತಹಾಗೆ ಶಕ್ತಿಹೀನರಾಗುತಾ, ಸಂಕಟ ಪಡುವರು. ಮತ್ತು ಯುದ್ಧಕ್ಕೆ ಹೋದರೆ ಕೈಹೋದರೂ ಹೋಯಿತು, ಕಾಲುಹೋದರೂ ಹೋಯಿತು, ಪ್ರಾಣಹೋದರೂ ಹೋಯಿತು. ಯುದ್ಧರಂಗದಲ್ಲಿ ಕುಟುಕುಜೀವಹತ್ತಿ ನರಳುತಾ ಬಿದ್ದಿದ್ದಾಗ್ಯೂ ಹೆಣ ವೆಂದು ಆಚೆಗೆ ಎಳೆದುಹಾಕುವರು. ಒಂದು ಸಮಯದಲ್ಲಿ ಶತ್ರುಗಳ ಕತ್ತಿಗೆ ನಮ್ಮ ಕುತ್ತಿಗೆ ಗುರಿಯಾಗುವದು; ಮತ್ತೊಂದು ಕಾಲದಲ್ಲಿ ನಮ್ಮ ಕಡೆಯುವರೇ ನಮ್ಮನ್ನು ಕಡಿದುಹಾಕುವರು. ನಾವು ಸತ್ತಮೇಲೆ ನಮ್ಮ ಹೆಂಡಿರು ಮಕ್ಕಳಿಗೆ ಯಾರೂ ಗತಿ ಇಲ್ಲದೆ, ಅವರು ತಿರುಪೆಗೆ ಅಧಿಕಾರಿಗಳಾಗುವರು. ಶತ್ರುಗಳು ನಮ್ಮನ್ನು ಕೈಸೆರೆಹಿಡಿದರೆ, ಅನೇಕ ವರುಷಗಳು ಸೆರೆಮನೆಯಲ್ಲಿ ಬಿದ್ದು ಸಾಯಬೇಕಾಗುವುದು. ದಂಡಿನ ಜನರಿಗೆ ಇರುವ ಸುಖ ಈಗ ತಿಳಿಯಿತೆ? ಹೀಗೆಂದು ರಾಮುಜೋಯಿಸ ಹೇಳಿದನು.

ಸುಮತಿ—ಅನ್ಯದೇಶದ ಶತ್ರುಗಳ ಬಾಧೆಯನ್ನು ತಪ್ಪಿಸುವುದ ಕ್ಕಾಗಿ ಕಾದುಕೊಂಡಿರುವ ದಂಡಿನವರು ಎಷ್ಟು ಕಷ್ಟಕ್ಕೆ ಗುರಿಯಾ ಗಿದಾರೆ! ಇಂಥಾ ಕಷ್ಟಜೀವಿಗಳನ್ನು ಸರ್ಕಾರದವರು ಕಾಪಾಡಬೇಕು.

ಜೋಯಿಸ—ನೀನು ಹೇಳುವುದು ಸರಿಯೆ. ಆದರೆ ಆ ಪ್ರಾಣಿ ಗಳಿಗೆ ಅಂಥಾ ಕಷ್ಟವನ್ನು ಯಾಕೆ ಕೊಡಬೇಕು. ಅವಿವೇಕದಿಂದ ದುಡುಕಿ, ಮನಸ್ಸು ಬಂದಹಾಗೆ ರೇಗಿಕೊಂಡು, ನಿಷ್ಕಾರಣವಾಗಿ ಯುದ್ಧವನ್ನು ಮಾಡಿ, ಸೋತರೆ ಈ ಸಿಪಾಯಿಗಳು ಕೆಟ್ಟವರು ಹೇಡಿ ಗಳು ಸೋತುಹೋದರೆಂತಲೂ ಗೆದ್ದರೆ ತಮ್ಮ ಚಮತ್ಕಾರದಿಂದ ಗೆದ್ದೆ

ವೆಂತಲೂ; ಕೊಚ್ಚಿಕೊಂಡು, ಈ ಬಡಜೀವಿಗಳನ್ನು ಶತ್ರುಗಳ ಬಾಯಿಗೆ ಬಲಿ ಒಪ್ಪಿಸುತಾರಲ್ಲಾ! ಅಂಥಾ ನೀಚರಿಗೆ ಏನ ಹೇಳೋಣ!

ಸುಮತಿ—ಯುದ್ಧ ಎನ್ನುವುದೇ ಕೆಟ್ಟದು. ಮತ್ತೊಬ್ಬ ನಿರಪ ರಾಧಿಯಾದ ಪ್ರಾಣಿಯನ್ನು ಕೊಲ್ಲುವುದೇ ಅದರ ಮುಖ್ಯ ಉದ್ದೇಶ ವಾದುದರಿಂದ, ಯುದ್ಧ ಎನ್ನುವುದರಲ್ಲಿ ಅನ್ಯಾಯವೇ ಹೊರತು ನ್ಯಾಯವಿಲ್ಲವೇ ಇಲ್ಲ. ಇಂಥಾ ದುಷ್ಕಾರ್ಯದಲ್ಲಿ ಉದ್ಯುಕ್ತರಾಗಿರುವ ಸಿಪಾಯಿಗಳಿಗೆ ಮರಣಸಂಭವಿಸಿದರೆ, ಅದು ಅವರ ತಪ್ಪೇ ಅಲ್ಲದೆ ಬೇರೆ ಉಂಟೆ?

ಜೋಯಿಸ—ಈ ಭಟರು ತಾವಾಗಿ ಕೇಡನ್ನು ತಂದುಕೊಂಡರೆ ತಪ್ಪು ಅವರದೇ ಹವುದು. ಆದರೆ ಯಾವ ಸರ್ಕಾರದವರಿಗೋಸ್ಕರ ಇವರು ತಮ್ಮ ತಲೆಯನ್ನು ಒಪ್ಪಿಸುತಾರೆಯೋ ಅಂಥಾವರು ಆ ಬಡ ಜನರ ಕ್ಷೇಮವನ್ನು ನೋಡಿಕೊಳ್ಳದೇಹೋದರೆ, ಸಿಪಾಯಿಗಳು ಪೇಚಾಡಬೇಕಾದ್ದು ಸರಿಯಲ್ಲವೇ?

ಸುಮತಿ—ಯಾರಿಗೋಸ್ಕರ ಯುದ್ಧ ಜರುಗುವುದೋ ಅಂಥಾ ವರೇ ಹೋಗಿ ಶತ್ರುಗಳ ಸಂಗಡ ಜಗಳವಾಡತಕ್ಕದ್ದು ಯುಕ್ತವಾಗಿದೆ.

ಜೋಯಿಸ—ಪೂರ್ವದಲ್ಲಿ ಪಾಂಡವಾದಿಗಳೆಲ್ಲಾ ಹಾಗೆಯೇ ಮಾಡಿದರು. ಚಿಕ್ಕ ಹುಡುಗರು ಸಹಿತವಾಗಿ ಪರಾಕ್ರಮಿಗಳಾಗಿದ್ದರು. ಅಭಿಮನ್ಯುವಿನ ಕಥೆಯನ್ನು ಕೇಳಿಲ್ಲವೆ?

ಸುಮತಿ—ಜೋಯಿಸರೆ, ಆ ಕಥೆ ಬಹು ಚೆನ್ನಾಗಿದೆ. ಮದನ ಕೇಳಲಿ ಅದನ್ನು ಅಪ್ಪಣೆ ಕೊಡಿಸಬೇಕು.

---

## ೧೫ ನೆ ಅಧ್ಯಾಯ

ಆಗ ಜೋಯಿಸನು ಅಭಿಮನ್ಯುವಿನ ಕಥೆಯನ್ನು ಹೇಳಿದ್ದು ಹೇಗೆಂದರೆ:—

ದ್ವಾಪರಯುಗದಲ್ಲಿದ್ದ ಪಾಂಡುರಾಯನಿಗೆ ಪಾಂಡವರೆಂಬ ಐದು ಜನ ಗಂಡುಮಕ್ಕಳಿದ್ದರು. ಪಾಂಡುರಾಯನ ಅಣ್ಣನಾದ ಧೃತರಾಷ

ರಾಯನಿಗೆ ಕೌರವರೆಂಬ ನೂರೊಂದುಜನ ಮಕ್ಕಳಿದ್ದರು. ಈ ಪಾಂಡವ ಕೌರವರಿಗೆ ರಾಜ್ಯದ ಹಂಚಿಕೆಗೋಸ್ಕರ ಜಗಳಹುಟ್ಟಿತು. ಪಾಂಡವರ ಕಡೆ ಅನೇಕ ಜನ ದೊರೆಗಳು ಸೇರಿದರು. ಕೌರವರ ಕಡೆಗೂ ಹೀಗೆಯೇ ಅನೇಕರು ಸೇರಿದರು. ಈ ಎರಡು ಸೇನೆಗೂ ದೊಡ್ಡ ಯುದ್ಧ ನಡೆಯಿತು. ಇದರಲ್ಲಿ ಐದುಜನ ಪಾಂಡವರೂ ನೂರೊಂದುಜನ ಕೌರವರೂ ಸ್ವತಃ ನಿಂತು ಕದನವಾಡಿದರು. ಸ್ವಲ್ಪ ದಿವಸ ಯುದ್ಧ ನಡೆದ ಮೇಲೆ ಕೌರವರ ಕಡೆಯಲ್ಲಿ ದ್ರೋಣಾಚಾರ್ಯನೆಂಬ ಬ್ರಾಹ್ಮಣ ನಿಗೆ ಸರ್ವಸೇನಾಪತಿಯು ಅಧಿಕಾರವಾಗಲು, ಆತನು ಸೇನೆಯಲ್ಲಿಯೇ ವ್ಯೂಹಗಳೆಂಬ ಕೋಟೆಯನ್ನು ಕಟ್ಟಿ ಯುದ್ಧಕ್ಕೆ ಮೊದಲುಮಾಡಿದನು. ಒಂದು ಪದ್ಮವ್ಯೂಹವನ್ನು ಕಟ್ಟಿ ಬಹು ಘೋರವಾದ ಯುದ್ಧವನ್ನು ಕೌರವರು ನಡೆಯಿಸುತಿರಲು, ಪಾಂಡವರ ಕಡೆಯಲ್ಲಿ ಮಹಾರಥಿಕರಾದ ಭೀಮ ಅರ್ಜುನ ಇವರಿಬ್ಬರೂ ಯುದ್ಧರಂಗದ ಒಂದು ಕಡೆಯಲ್ಲಿ ಕಾಳಗವಾಡುತಾ ಇದ್ದರು. ಪದ್ಮವ್ಯೂಹವನ್ನು ಭೇದಿಸಿಕೊಂಡು ಹೋಗಿ ಶತ್ರುಗಳನ್ನು ಗೆಲ್ಲತಕ್ಕವರು ಯಾರೂ ಪಾಂಡವರ ಕಡೆಯಲ್ಲಿ ಇರಲಿಲ್ಲ. ಇದನ್ನು ಕಂಡು ಅರ್ಜುನನ ಮಗನಾದ ಅಭಿಮನ್ಯು ಎಂಬ ಹದಿನೆಂಟು ವರುಷದ ಹುಡುಗನು ತನ್ನ ದೊಡ್ಡಪ್ಪನಾದ ಧರ್ಮ ರಾಯನಲ್ಲಿ ಅಪ್ಪಣೆಯನ್ನು ಪಡೆದು, ರಥವನ್ನೇರಿ ಶತ್ರುಸೇನೆಯನ್ನು ನಾಶಮಾಡುತಾ ವ್ಯೂಹದೊಳಕ್ಕೆ ನುಗ್ಗಿ ಮಧ್ಯೆನಿಂತು, ಮಹಾಪರಾಕ್ರ ಮದಿಂದ ಅತಿರಥ ಮಹಾರಥರುಗಳನ್ನೆಲ್ಲಾ ತರಿದು ಯಾರೂ ಇವನ ಎದುರಿಗೆ ನಿಲ್ಲುವುದಕ್ಕಿಲ್ಲದಂತೆ ಮಾಡಿದನು. ಪ್ರಳಯಕಾಲದ ರುದ್ರನೇ ಬಂದನೋ ಎನ್ನುವಹಾಗೆ ಆಯಿತು. ಶತ್ರುಗಳೆಲ್ಲರೂ ಓಡಿಹೋಗುವು ದಕ್ಕೆ ಮೊದಲಾಯಿತು. ಹೇಡಿಗಳಾದ ಹಗೆಗಳು ಇವನ ಮುಂದೆ ನಿಂತು ಯುದ್ಧವನ್ನು ಮಾಡಲಾರದೆ, ದ್ರೋಹದಿಂದ ಆರು ಜನ ಸೇರಿ ಹಿಂದುಗಡೆ ಬಂದು ಈ ಮಹಾ ಪರಾಕ್ರಮಿಯನ್ನು ಕೊಂದರು. ದ್ರೋಹದಸಂಗಡ ಯುದ್ಧಮಾಡುವುದಕ್ಕೆ ಯಾರಿಂದಲೂ ಆಗುವುದಿಲ್ಲ; ಯಾಕೆಂದರೆ ಅದು ಎದುರಿಗೆ ಬಂದು ನಿಲ್ಲುವುದಿಲ್ಲ. ಹೀಗೆ ಹುಡುಗರು ಸಹಿತ ಇತರರ ಸಹಾಯವನ್ನು ಕೋರದೆ ತಾವೇ ಯುದ್ಧಮಾಡು ತಿದ್ದರು.

ಕಥೆಯು ಇಲ್ಲಿಗೆ ನಿಂತಿತು. ಆಗ

ಮದನ—ಜೋಯಿಸರೆ ಅಭಿಮನ್ಯುವೇನೋ ಮಹಾಪರಾಕ್ರಮ ಶಾಲಿಯೇ ಹವುದು. ಅನ್ಯಾಯವಾಗಿ ಅವನನ್ನು ಕೊಂದುಹಾಕಿದರು. ಅದು ಹಾಗಿರಲಿ. ಯುದ್ಧದಲ್ಲಿ ಕೊನೆಗೆ ಯಾರಿಗೆ ಜಯವಾಯಿತು?

ಜೋಯಿಸ—ನೀನು ಓದಬಲ್ಲೆಯಷ್ಟೆ. ಅದನ್ನು ಪುಸ್ತಕದಲ್ಲಿ ಓದಿಕೊಂಡು ನೀನೇ ತಿಳಿದುಕೊ.

ಹೀಗೆಂದು ಜೋಯಿಸ ಹೇಳಿದನು. ಆಗ ಸಾಯಂಕಾಲ ವಾಯಿತು. ಮದನನು ಪ್ರತಿನಿತ್ಯವೂ ಆಕಾಶವನ್ನು ನೋಡಿ ಅಲ್ಲಿರುವ ನಕ್ಷತ್ರಗಳ ಸ್ಥಾನಗಳನ್ನು ತನ್ನ ಬಳಿಯಲ್ಲಿರುವ ಕಾಗದದ ಗೋಳದ ಮೇಲೆ ಗುರುತುಮಾಡಿಕೊಳ್ಳುತ್ತಲೇ ಇದ್ದನು. ಕೃತ್ತಿಕ, ಮೃಗಶಿರ, ಅಶ್ವಿನಿ, ಇವೇ ಮೊದಲಾದ ರಾಶಿಗಳನ್ನು ಗುರುತುಮಾಡಿಕೊಂಡಿದ್ದನು. ಆ ದಿನ ಗುರುವನ್ನು ನೋಡಿ

ಮದನ—ನಿತ್ಯವೂ ಈ ನಕ್ಷತ್ರಗಳೆಲ್ಲಾ ಎಷ್ಟು ಚೆನ್ನಾಗಿ ಭೂಮಿಯ ಸುತ್ತಲೂ ಸುತ್ತುವವು?

ಜೋಯಿಸ—ಅವುಗಳು ಸುತ್ತುವವು ಎಂದು ನೀನು ಹೇಗೆ ಬಲ್ಲೆ?

ಮದನ—ಅವುಗಳು ಚಲಿಸತಕ್ಕದ್ದು ರಾತ್ರೆಹೊತ್ತು ನಮ್ಮ ಕಣ್ಣಿಗೆ ಕಾಣುವುದು.

ಜೋಯಿಸ—ಚಲಿಸತಕ್ಕದ್ದು ನಕ್ಷತ್ರಗಳು, ಭೂಮಿಯಲ್ಲ ಎಂದು ನೀನು ಹೇಗೆ ಬಲ್ಲೆ ?

ಮದನ—ಭೂಮಿ ಇದ್ದ ಕಡೆಯಲ್ಲಿಯೇ ಇರುವುದು. ನಕ್ಷತ್ರಗಳು ಚಲಿಸತಕ್ಕದ್ದು ನಮ್ಮ ಕಣ್ಣಿಗೆ ಕಾಣುವುದು.

ಜೋಯಿಸ—ದೋಣಿಯಮೇಲೆ ಯಾವಾಗಲೂ ನೀನು ಕೂತು ಕೊಂಡು ಹೋಗಿದ್ದೀಯ? ಆಗ ಏನು ಕಾಣಿಸಿತು?

ಮದನ—ನಮ್ಮ ಅಪ್ಪಾಜಿಯವರ ಸೀಮೆ ಪಶ್ಚಿಮ ಸಮುದ್ರದ ವರೆಗೂ ಇದೆ. ದೋಣಿಯಲ್ಲಿ ನಾನು ಕೂತು ಸಮುದ್ರದ ಮೇಲೆ ಸ್ವಲ್ಪ ದೂರ ಹೋಗಿದೇನೆ. ಆಗ ದೋಣಿಯು ಇದ್ದ ಸ್ಥಳದಲ್ಲಿಯೇ ಇದ್ದ ಹಾಗೂ, ತಡಿಯಲ್ಲಿದ್ದ ಗಿಡ ಮರ ಬೆಟ್ಟ ಮೊದಲಾದ್ದೆಲ್ಲಾ ಓಡಿಹೋ

ಗುತಿದ್ದ ಹಾಗೂ ಕಾಣಿಸಿತು.

ಜೋಯಿಸ--ಅದೇ ರೀತಿಯಲ್ಲಿ ಓಡಿಹೋಗುತಿರುವ ಭೂಮಿ ಇದ್ದ ಕಡೆಯಲ್ಲಿಯೇ ಇದ್ದಹಾಗೂ, ಚಲಿಸದೇ ಇರುವ ನಕ್ಷತ್ರಗಳು ಓಡಿಹೋಗುತಿರುವ ಹಾಗೂ ಯಾಕೆ ಕಾಣಿಸಬಾರದು ?

ಮದನ—ಚಿಕ್ಕ ಚಿಕ್ಕದಾಗಿರುವ ಸೂರ್ಯ ಚಂದ್ರ ನಕ್ಷತ್ರಗಳು ಓಡಿಹೋದರೂ ಹೋಗಬಹುದು. ಇಷ್ಟು ಗಾತ್ರ ಇರುವ ಭೂಮಿ ಚಲಿಸೀತೆ ?

ಜೋಯಿಸ—ಚಂದ್ರ ಸೂರ್ಯ ನಕ್ಷತ್ರಗಳು ಚಿಕ್ಕಚಿಕ್ಕದು ಎಂದು ನಿನಗೆ ಹೇಗೆ ತಿಳಿಯಿತು ?

ಮದನ—ನಮ್ಮ ಕಣ್ಣಿಗೆ ಚಿಕ್ಕದಾಗಿ ಕಾಣಿಸುವುದಿಲ್ಲವೆ ? ಇನ್ನೇನಾಗಬೇಕು ?

ಈ ಮಾತನ್ನು ಕೇಳಿ ಜೋಯಿಸನು ಆಗ ಸುಮ್ಮನೇ ಆದನು. ಮಾರನೇ ದಿನ ಜೋಯಿಸನು ಮದನನನ್ನು ಕರೆದುಕೊಂಡು ಮೈದಾನವಾದ ಪ್ರದೇಶಕ್ಕೆ ಹೋದನು. ಆಗ ಪಟಾ ಆಡಿಸುವ ಕಾಲವಾಗಿತ್ತು. ದೂರದಲ್ಲಿ ಒಬ್ಬ ಪಟಾ ಆಡಿಸುತಿದ್ದನು. ಅದನ್ನು ಕಂಡು,

ಜೋಯಿಸ—ಮದನ, ಅಗೋ ಅಲ್ಲಿ ಆಕಾಶದಲ್ಲಿ ಕಾಣಿಸುವುದೇನು ?

ಮದನ—ಏನೋ ಸಣ್ಣ ಹಕ್ಕಿಯ ಹಾಗೆ ಕಾಣುತಿದೆ.

ಆಗ ಗಾಳಿ ಕಡಮೆಯಾಯಿತು. ಪಠದ ದಾರವನ್ನು ಎಳೆಯುತ್ತ ಬಂದರು.

ಜೋಯಿಸ—ಈಗ ಏನು ಕಾಣುತಿದೆ ನೋಡು.

ಮದನ--ಏನೋ ಗುಂಡಗೆ ಕಾಣುತಿದೆ. (ಪಟವನ್ನು ಇನ್ನೂ ಹತ್ತಿರಕ್ಕೆ ಎಳೆದರು.)

ಮದನ—ಜೋಯಿಸರೆ, ಅದು ಹತ್ತಿರ ಹತ್ತಿರಕ್ಕೆ ಬರುತಿದೆ. ಈಗ ನೋಡಿದರೆ ಅದು ಎಂಟುಮೂಲೇ ಚಟ್ಟೆಯಂತೆ ಕಾಣುತ್ತೆ.

ಆಗ ಗಾಳಿ ಜೋರಾಯಿತು. ಪಠ ಆಡಿಸುತಿದ್ದವರು ದಾರವನ್ನು ಹೆಚ್ಚಾಗಿ ಬಿಡುವುದಕ್ಕೆ ಮೊದಲು ಮಾಡಿದರು. ಪಟವು ಮೇಲು

ಮೇಲಕ್ಕೆ ಹೋಗಿ ದೂರವಾಗಿ ಹಾರಿತು.

ಜೋಯಿಸ—ಈಗ ಹೇಗೆ ಕಾಣುತಿದೆ?

ಮದನ ಆಕಾಶವನ್ನು ನೋಡುತಾ—ಪುನಃ ಚಿಕ್ಕದಾಗಿ ಕಾಣಿಸುವುದು. ಅಗೋ! ಇನ್ನೂ ಸಣ್ಣದಾಯಿತು. ಓಹೋ! ಒಂದು ಹಕ್ಕಿಯ ಹಾಗೆ ಕಾಣುತಿದೆ. ಎಷ್ಟು ದೂರವಾಗಿ ಹೋದರೆ ಅಷ್ಟು ಸಣ್ಣದಾಗಿ ಕಾಣುವುದು.

ಜೋಯಿಸ—ಈಗ ನಮಗೆ ಕಾಣುವ ಸೂರ್ಯನು ದೂರವಾಗಿ ಇನ್ನೂ ಹಿಂದು ಹಿಂದಕ್ಕೆ ಹೋದರೆ ಹೇಗೆ ಕಾಣಿಸುವುದು?

ಮದನ—(ಸ್ವಲ್ಪ ಯೋಚಿಸಿ) ಪಟವು ಹಿಂದು ಹಿಂದಕ್ಕೆ ಹೋದ ಹಾಗೆಲ್ಲಾ ಸಣ್ಣ ಸಣ್ಣವಾಗಿ ಕಂಡರೆ, ಸೂರ್ಯನೂ ಹಾಗೆಯೇ ಕಾಣಬೇಕು.

ಜೋಯಿಸ—ಸೂರ್ಯನು ಹಾಗೆ ಬಹು ದೂರಕ್ಕೆ ಹೋದರೆ ಅದು ಸಣ್ಣಗೆ ನಕ್ಷತ್ರದ ಹಾಗೆ ಕಾಣಿಸುವುದು. ಇದು ಹಾಗಿರಲಿ. ನಮಗೆ ಆಕಾಶದಲ್ಲಿ ಕಾಣುವ ನಕ್ಷತ್ರಗಳು ನಮ್ಮ ಸಮಾಪ ಸಮಾಪಕ್ಕೆ ಬಂದರೆ ಹೇಗೆ ಕಾಣುವುದು? ಸಣ್ಣಗೆ ಕಾಣಿಸೀತೆ?

ಮದನ—ಪಟವು ನಮ್ಮ ಹತ್ತರ ಹತ್ತರಕ್ಕೆ ಬಂದ ಹಾಗೆಲ್ಲಾ ದೊಡ್ಡದಾಗಿ ಕಾಣಿಸಿದರೆ, ನಕ್ಷತ್ರವೂ ಹಾಗೆಯೇ ಕಾಣಿಸಬೇಕು.

ಜೋಯಿಸ—ಆ ನಕ್ಷತ್ರವು ಸಮಾಪ ಸಮಾಪಕ್ಕೆ ಬಂದರೆ ಸೂರ್ಯನ ಅಗಲ ಕಾಣಿಸಬಹುದೆ?

ಮದನ—ಹವುದು.

ಜೋಯಿಸ—ಸೂರ್ಯನೇ ನಮಗೆ ಸಮೀಪವಾಗಿ ಬಂದರೆ ಹೇಗೆ ತೋರುವುದು? ಅದರ ಗಾತ್ರ ಇದ್ದಷ್ಟೇ ಇರುವುದೊ?

ಮದನ—ಹತ್ತರಕ್ಕೆ ಬಂದ ಹಾಗೆಲ್ಲಾ ದೊಡ್ಡದಾಗಿ ಕಾಣಿಸಬೇಕು.

ಜೋಯಿಸ—ಹಾಗಾದರೆ, ನಾವು ಇರುವ ಭೂಮಿಯು ಸೂರ್ಯನಿಗಿಂತಲೂ ನಕ್ಷತ್ರಕ್ಕಿಂತಲೂ ದೊಡ್ಡದಾಗಿ ಕಾಣಿಸುವುದು ನಿಶ್ಚಯವಲ್ಲ. ಅವುಗಳು ಇಲ್ಲಿಂದ ಬಹುದೂರದಲ್ಲಿವೆ. ಇಲ್ಲಿಂದ ಯಾರಾದರೂ

ಸೂರ್ಯನ ಸಮೀಪಕ್ಕೆ ಹೋದರೆ, ಭೂಮಿಯು ಅವರ ಕಣ್ಣಿಗೆ ಹೇಗೆ ಕಾಣಿಸುವುದು ?

ಮದನ—ನನಗೆ ತಿಳಿಯದು.

ಜೋಯಿಸ—ತಿಳಿಯದೆ! ಒಂದು ಪದಾರ್ಥವೇ ಇದ್ದಸ್ಥಳವನ್ನು ಬಿಟ್ಟು ದೂರವಾಗಿ ಹೋಗಿ ನಾವು ಇದ್ದಕಡೆಯಲ್ಲಿಯೇ ಇದ್ದರೂ ಒಂದೇ, ಅಥವಾ ಆ ಪದಾರ್ಥವು ಇದ್ದಕಡೆಯಲ್ಲಿಯೇ ಇದ್ದು ನಾವು ದೂರವಾಗಿ ಹೋದರೂ ಒಂದೇ. ನಮ್ಮನ್ನು ಬಿಟ್ಟು ಪಟ ದೂರವಾಗಿ ಹೋದರೂ ಸರಿಯೆ, ಪಟವನ್ನು ಬಿಟ್ಟು ನಾವು ದೂರವಾಗಿ ಹೋದರೂ ಸರಿಯೆ, ಫಲವೆಲ್ಲಾ ಒಂದೇ ಅಲ್ಲವೆ? ನಮಗೂ ಅದಕ್ಕೂ ಸ್ವಲ್ಪದೂರ ಬಿಟ್ಟರೆ ಸರಿ.

ಮದನ—ಹವುದು.

ಜೋಯಿಸ—ಹಾಗಾದರೆ, ಭೂಮಿಯಿಂದ ಆಕಾಶಕ್ಕೆ ಯಾರಾದರೂ ಹಾರಿಹೋದರೆ ನಮ್ಮ ಭೂಮಿ ಹೇಗೆ ಕಾಣಿಸುವುದು ?

ಮದನ—ನಾವು ಮೇಲಕ್ಕೆ ದೂರವಾಗಿ ಹೋಗುತಾ ಹೋಗುತಾ ಭೂಮಿ ಸಣ್ಣವಾಗುತ ಬರುವುದು.

ಜೋಯಿಸ—ಆದ್ದರಿಂದ, ಸೂರ್ಯ ಚಿಕ್ಕದೆಂತಲೂ, ಭೂಮಿ ದೊಡ್ಡದೆಂತಲೂ ಹೇಳಬಾರದು.

ಸೂರ್ಯನೂ ಚಂದ್ರನೂ ನಕ್ಷತ್ರಗಳೂ ನಮ್ಮ ಕಣ್ಣಿಗೆ ಎಷ್ಟು ದೊಡ್ಡದಾಗಿ ಕಾಣಿಸುವವೊ ಅದಕ್ಕಿಂತಲೂ ಎಷ್ಟೋ ದೊಡ್ಡದಾಗಿವೆ ಎಂದು ಈಗಲಾದರೂ ಊಹಿಸಿಕೊ.

ಈಪ್ರಕಾರ ಮಾತನಾಡಿಕೊಂಡು ಬರುತಿರುವಾಗ ದಾರಿಯಲ್ಲಿ ಒಂದು ಹಳ್ಳಿ ಸಿಕ್ಕಿತು. ಆ ಊರಮುಂದೆ ಮಾರೀ ಗುಡಿಯ ಬಳಿ ರಂಗಸ್ಥಳದಲ್ಲಿ ಒಬ್ಬ ಹಾವಾಡಿಗನು ಡೋಲನ್ನು ಬಡಿಯುತಾ ಇದ್ದನು. ಅಲ್ಲಿಗೆ ಜನಗಳು ಓಡಿಹೋಗುತಿದ್ದರು. ಅದನ್ನು ತಿಳಿದು ಮದನನು ತಾನೂ ಅಲ್ಲಿಗೆ ಹೋಗಬೇಕೆಂದು ಅಪೇಕ್ಷಿಸಿದನು. ಜೋಯಿಸನು ಸುಮತಿಮದನ ಇಬ್ಬರನ್ನೂ ಕರೆದುಕೊಂಡು ಅಲ್ಲಿಗೆ ಹೋದನು. ಆ ಗುಂಪಿನ ಸಂಗಡ ಇವರೂ ನಿಂತುಕೊಂಡರು. ಆ ಗಾರುಡಿಗನು ತನ್ನ

ಹಸ್ತಲಾಘವ ವಿದ್ಯೆಗಳನ್ನೂ ವಿಶೇಷವಾಗಿ ತೋರಿಸಿ, ಒಂದು ತಂತ್ರವನ್ನು ಕೊನೆಗೆ ಇರಿಸಿಕೊಂಡು, ಸುತ್ತಲೂ ನಿಂತಿದ್ದ ಜನರನ್ನು ನೋಡಿ ಹೇಳಿದ್ದೇನೆಂದರೆ: ಇಗೋ ನೋಡಿ ಸಾಧಾರಣವಾದ ವಿದ್ಯೆಗಳೆಲ್ಲಾ ಆಯಿತು. ವಿಚಿತ್ರವಾದ ಇನ್ನೊಂದು ಅದ್ಭುತವನ್ನು ಕೊನೆಯಲ್ಲಿ ತೋರಿಸಬೇಕೆಂದು ನಿಲ್ಲಿಸಿದ್ದೆ. ಇಗೊ ನೋಡಿ, (ಒಂದು ಮೀನನ್ನು ಹಿಡಿದು) ನನ್ನ ಕೈಯಲ್ಲಿ ಒಂದು ಮೀನಿದೆ. ಇದಕ್ಕೆ ಜೀವವಿಲ್ಲ. ಆದಾಗ್ಯೂ ಅದನ್ನು ಸಾಕಿದವನು ಇಂಥವನೆಂದು ಬಲ್ಲದು, ನಾನು ಯಾವ ಕಡೆಗೆ ಕರೆದರೂ ಆ ಕಡೆಗೆ ಬರುವುದು. ಹೀಗೆ ಹೇಳಿ ಆ ಗಾರುಡಿಗನು ಒಂದು ತಟ್ಟೆಯಲ್ಲಿ ನೀರನ್ನು ಹಾಕಿ ಆ ಮೀನನ್ನು ಅದರಲ್ಲಿ ಬಿಟ್ಟು ತನ್ನ ಬಳಿಯಲ್ಲಿದ್ದ ರಾಗೀರೊಟ್ಟಿಯ ಮುರುಕನ್ನು ಅದಕ್ಕೆ ತೋರಿಸಿದನು. ಅದು ನಿರ್ಜೀವ ಪದಾರ್ಥವಾಗಿದ್ದಾಗ್ಗೂ ಇವನು ರೊಟ್ಟಿಯನ್ನು ಯಾವ ಕಡೆಗೆ ಹಿಡಿದರೆ ಆ ಕಡೆಗೆಲ್ಲಾ ಅದು ತಿರುಗುತಿತ್ತು. ಇದನ್ನು ನೋಡಿ ಎಲ್ಲರೂ ಆಶ್ಚರ್ಯಪಟ್ಟರು. ಮದನನಿಗಂತೂ ಏನೂ ತೋರಲಿಲ್ಲ, ಬೆಕ್ಕಸ ಬೆರಗಾದನು.

ಜೋಯಿಸ, ಸುಮತಿ, ಮದನ ಇವರು ಮೂರುಜನರೂ ಮನೆಗೆ ಬಂದರು. ಮದನನಿಗೆ ಮೀನಿನ ತಂತ್ರ ಗೊತ್ತೇ ಆಗಲಿಲ್ಲ. ಅವನು ಇದನ್ನು ಕುರಿತು ಸುಮತಿಯೊಡನೆ ಪ್ರಸ್ತಾಪಮಾಡಲು, ಸುಮತಿಯು —ನಾನೂ ಹಾಗೆಯೇ ಮಾಡಿ ನಿನಗೆ ತೋರಿಸುತೇನೆಂದು ಹೇಳಿ, ಮೇಣದಲ್ಲಿ ಒಂದು ಮೀನಿನ ಆಕಾರವನ್ನು ಮಾಡಿ ತಟ್ಟೆಯಲ್ಲಿ ನೀರನ್ನು ಹಾಕಿ ಮೀನನ್ನು ಅದರಮೇಲೆ ತೇಲಬಿಟ್ಟನು. ಒಂದು ರೊಟ್ಟೀಚೂರನ್ನು ಹಿಡಿದು ಆ ಮೀನಿನಕಡೆಗೆ ತೋರಿಸಲು, ಅದು ರೊಟ್ಟೀಕಡೆಗೆ ಓಡಿಬಂತು. ಮದನನು ಆಶ್ಚರ್ಯಪಟ್ಟು ಅದರ ಗುಟ್ಟನ್ನು ತನಗೆ ತೋರಿಸಿಕೊಡು ಎಂದು ಕೇಳಿದನು.

ಆಗ ಸುಮತಿಯು—ಇಗೋ ನೋಡು, ಈ ಮೀನಿನ ಬಾಯಿಂದ ಬಾಲದವರೆಗೂ ಒಂದು ಕಬ್ಬಿಣದ ತಂತಿ ಇವೆ, ಈ ರೊಟ್ಟಿಯೊಳಗೆ ಒಂದು ಕಬ್ಬಿಣದ ಮುರುಕು ಇದೆ, ಎಂದನು. ಮದನನಿಗೆ ಇದು ಚೆನ್ನಾಗಿ ತಿಳಿಯಲಿಲ್ಲ. ಕೂಡಲೆ ಅಲ್ಲಿದ್ದ ಜೋಯಿಸನು ಅದನ್ನು ವಿವರಿಸಿದ್ದು ಹೇಗೆಂದರೆ:—

ತನ್ನ ಎಡದ ಅಂಗೈಯಲ್ಲಿ ೩-೪ ಸೂಜಿಗಳನ್ನು ಹಾಕಿಕೊಂಡು ಬಲದ ಕೈಯಲ್ಲಿ ರೊಟ್ಟಿಯೊಳಗಿದ್ದ ಕಬ್ಬಿಣದ ಮುರುಕನ್ನು ಅದರ ಮೇಲೆ ಹಿಡಿಯಲು, ಆ ಸೂಜಿಗಳೆಲ್ಲಾ ಮೇಲಕ್ಕೆ ನೆಗೆದು ಆ ಕಬ್ಬಿಣದ ತುದಿಗೆ ಅಂಟಿಕೊಂಡವು. ಜೋಯಿಸನು ತನ್ನ ಕೈಲಿದ್ದ ಕಬ್ಬಿಣದ ಬೀಗದಕೈಯನ್ನು ಕೆಳಗೆ ಇಟ್ಟು ಸ್ವಲ್ಪ ದೂರದಲ್ಲಿ ಈ ಕಬ್ಬಿಣದ ಮುರುಕನ್ನು ಇರಿಸಿದನು. ಆಕ್ಷಣವೇ ಆ ಬೀಗದ ಕೈ ಬೇಗ ಹೋಗಿ ಕಬ್ಬಿಣದ ಮುರುಕಿಗೆ ಅಂಟಿಕೊಂಡಿತು. ಇದಕ್ಕೆಲ್ಲಾ ಕಾರಣ ವೇನೆಂದು ಮದನ ಪ್ರಶ್ನೆಮಾಡಲು, ಜೋಯಿಸನು - ಕಬ್ಬಿಣದ ಗಣಿಯಲ್ಲಿ ಒಂದುವಿಧವಾದ ಕಲ್ಲು ಸಿಕ್ಕುವುದು. ಇದಕ್ಕೆ ಸೂಜಿಕಲ್ಲು ಅಥವಾ ಅಯಃಕಾಂತಶಿಲೆ ಎಂದು ಹೆಸರು. ಈ ಕಲ್ಲಿನಲ್ಲಿ ಕಬ್ಬಿಣವನ್ನೆಲ್ಲಾ ತನ್ನ ಕಡೆಗೆ ಎಳೆದುಕೊಳ್ಳುವ ವಿಚಿತ್ರವಾದ ಒಂದು ತ್ರಾಣವಿದೆ. ಆ ಕಲ್ಲಿನಮೇಲೆ ಒಂದು ಕಬ್ಬಿಣದ ಮುರುಕನ್ನು ತಿಕ್ಕಿದರೆ ಆ ಕಬ್ಬಿಣಕ್ಕೂ ಆ ಶಿಲೆಯ ತ್ರಾಣ ಬರುವುದು. ಮೀನಿನ ಬಾಯಿಯಕೊನೆಯಲ್ಲಿ ಸೂಜಿಕಲ್ಲಿನಮೇಲೆ ತಿಕ್ಕಿದಂಥಾ ಕಬ್ಬಿಣದ ತಂತಿ ಇದೆ. ರೊಟ್ಟಿಯ ಚೂರಿನ ಒಳಗೆ ಸಾಧಾರಣವಾದ ಕಬ್ಬಿಣದ ಮುರುಕು ಇದೆ. ಆದ್ದರಿಂದ ರೊಟ್ಟಿಗೆ ಮೀನುಬಂದು ಅಂಟಿಕೊಳ್ಳುವುದು, ಹೀಗೆಂದು ಹೇಳಿದನು.

ಈ ಮಾತನ್ನು ಕೇಳಿದ ಮದನನು—ಈ ಮೀನನ್ನು ಹೇಗೆ ಹೇಗೆ ತಿರುಗಿಸಿದರೂ ಒಂದೇಕಡೆಗೆ ತಿರುಗುತಿತ್ತು. ಅದು ಹೇಗೆ?

ಜೋಯಿಸ—ಅದನ್ನು ಹೇಗೆ ತಿರುಗಿಸಿದಾಗ್ಗೂ ಅದು ಉತ್ತರ ದಕ್ಷಿಣವಾಗಿ ನಿಂತುಕೊಳ್ಳುವುದು, ಉತ್ತರದಿಕ್ಕಿಗೆ ತಿರುಗಿಕೊಳ್ಳುವ ಗುಣ ಇದರಲ್ಲಿದೆ. ಈ ಗುಣವನ್ನು ಕಂಡುಹಿಡಿದು ಉತ್ತರಮುಖಿಯನ್ನು ಮಾಡಿದಾರೆ. ಈ ಉತ್ತರಮುಖಿಯಲ್ಲಿ ದಿಕ್ಕುಗಳನ್ನೂ ಉಪದಿಕ್ಕುಗಳನ್ನೂ ಗುರುತುಮಾಡಿ, ಮಧ್ಯೆ ಒಂದು ಗುಬಟನ್ನು ಇರಿಸಿ ಅದರಮೇಲೆ ಸೂಜಿಕಲ್ಲಿಗೆ ತಿಕ್ಕಿದ ಒಂದು ಸೂಜಿಯನ್ನು ಮಧ್ಯಕ್ಕೆ ಸರಿಯಾಗಿ ತೂಕಾನೋಡಿ ನಿಲ್ಲಿಸಿ ಇರುತಾರೆ. ಆ ಸೂಜಿಗೆ ಯಾವ ಕಡೆಯೂ ಇಲ್ಲದಿರುವಕಾರಣ ಉತ್ತರದಿಕ್ಕಿಗೇ ತಿರುಗಿಕೊಳ್ಳುವುದು.

ಮದನ—ಈ ಉತ್ತರಮುಖಿಯಿಂದ ಉಪಯೋಗವೇನು ?

ಜೋಯಿಸ—ಈ ಹೊಸ ಉಪಾಯವನ್ನು ಏರ್ಪಡಿಸುವುದಕ್ಕೆ ಮುಂಚೆ, ಸಮುದ್ರದಮೇಲೆ ಪ್ರಯಾಣಮಾಡುವ ನಾವಿಕರಿಗೆ ಬಹು ಕಷ್ಟವಾಗಿತ್ತು. ಮಸಲ ಪೂರ್ವದಿಕ್ಕಿಗೆ ಹಡಗನ್ನು ತಿರುಗಿಸಿಕೊಂಡು ಹೊರಟರೆ ಆ ದಿಕ್ಕಿಗೇ ಹೋಗುತಿದ್ದರು. ಗಾಳಿ ಬಂದು ಬೇರೇ ಕಡೆಗೆ ಹಡಗನ್ನು ತಳ್ಳಿಕೊಂಡು ಹೋದರೆ ಅಲ್ಲಿಗೆಲ್ಲಾ ಹೋಗುತಿದ್ದರು. ಮೋಡ ಕವಿದುಕೊಂಡರೆ ದಿಕ್ಕುತೋರುತಿರಲಿಲ್ಲ. ರಾತ್ರೆ ಹೊತ್ತು ಮತ್ತೂ ಕಷ್ಟವಾಗಿತ್ತು. ನಕ್ಷತ್ರಗಳು ಕಾಣಿಸಿದರೆ ಅದನ್ನು ನೋಡಿ ದಿಕ್ಕುಗಳನ್ನು ತಿಳಿದುಕೊಳ್ಳುತಿದ್ದರು. ಅದೂ ಕಾಣಿಸದೇ ಇದ್ದರೆ ಅವರ ಕಷ್ಟವನ್ನು ಹೇಳಲು ಶಕ್ಯವಲ್ಲ. ಎತ್ತನೋಡಿದರೂ ನೀರು, ಎಲ್ಲಿ ನೋಡಿದರೂ ಕತ್ತಲೆ, ಹೀಗೆ ಆಗುತಿತ್ತು. ಆದರೆ ಉತ್ತರಮುಖಿಯನ್ನು ಕಂಡುಹಿಡಿದ ಈಚೆಗೆ ಈ ಕಷ್ಟವೆಲ್ಲಾ ತಪ್ಪಿತು. ಇದರಿಂದ ದಿಕ್ಕುಗಳೆಲ್ಲಾ ಗೊತ್ತಾಗುತಿದ್ದಕಾರಣ, ಸಮುದ್ರದ ಮೇಲೆ ಸಿಕ್ಕಿದಕಡೆ ಸುತ್ತದೆ, ಯಾವ ಕಡೆಗೆ ಹೋಗಬೇಕೋ ಅಲ್ಲಿಗೆ ನೆಟ್ಟಗೆ ಹೋಗುತಾರೆ.

ಮದನ—ಇದು ತಿಳಿಯುವುದಕ್ಕೆ ಮುಂಚೆ ಏನ ಮಾಡುತಿದ್ದರು?

ಜೋಯಿಸ—ಸಮುದ್ರದಮೇಲೆ ಬಹಳ ದೂರ ಹೋಗುತಿರಲಿಲ್ಲ. ತಡಿಯ ಹತ್ತರಲೇ ಹಡಗನ್ನು ನಡೆಯಿಸಿಕೊಂಡು ಒಂದು ರೇವಿನಿಂದ ಇನ್ನೊಂದು ರೇವಿಗೆ ಹೋಗುತಿದ್ದರು. ಈ ದೇಶದ ಸರಕುಗಳು ಇನ್ನೊಂದುದೇಶಕ್ಕೂ, ಅಲ್ಲಿನ ಸರಕುಗಳು ಇಲ್ಲಿಗೂ ಸಾಗುವುದಕ್ಕೆ ಆಗುತಿರಲಿಲ್ಲ. ಸೌಖ್ಯವಾಗಿ ನಾವು ಜೀವಿಸಿಕೊಂಡು ಇರಬೇಕಾದರೆ ನಮಗೆ ಅಲ್ಲಿನ ಸರಕುಗಳೂ ಬೇಕು, ಇಲ್ಲಿನ ಸರಕುಗಳೂ ಬೇಕು.

ಸುಮತಿ—ಇಲ್ಲಿ ಆಗುವ ಸರಕಿನಿಂದಲೇ ನಾವು ಜೀವಿಸಿಕೊಂಡಿರುವುದಕ್ಕೆ ಆಗುವುದಿಲ್ಲವೆ ? ಎಷ್ಟು ಇದ್ದರೆ ಅಷ್ಟೇ ಸಾಕು.

ಜೋಯಿಸ—ಈ ಮಾತು ನಿಜ. ನಮ್ಮ ಸೀಮೆಯಲ್ಲಿ ಆಗುವ ಸರಕು ಜೀವನಕ್ಕೆ ಸಾಕು. ದೇಶಾಂತರದಿಂದ ಬರುವ ಸರಕಿನಿಂದ ನಮಗೆ ಕೆಟ್ಟದ್ದೇ ಹೊರತು ಒಳ್ಳೇದಲ್ಲ. ಆದಾಗ್ಯೂ ಒಂದೊಂದು ದೇಶದಲ್ಲಿ ಒಂದೊಂದು ವಿಶೇಷವಾದ ಪದಾರ್ಥವಾಗುವುದು. ಹೆಚ್ಚಾ

ದ್ದನ್ನು ಬೇರೇಕಡೆಗೆ ಕಳುಹಿಸಿ, ಬೇಕಾದ್ದನ್ನು ತಂದುಕೊಂಡರೆ, ಜನರು ವಿಶೇಷ ಸುಖವಾಗಿರಬಹುದು.

ಸುಮತಿ—ಏನೂ ಆಗದೇ ಇರತಕ್ಕ ಉತ್ತರಪ್ರಾಂತ್ಯದ ಕೊನೆಯಲ್ಲಿ ಇದ್ದದನ್ನೇ ತಿಂದುಕೊಂಡು ಜನರು ತೃಪ್ತರಾಗಿದಾರೆಂದು ಹೇಳಿದೀರಷ್ಟೆ.

ಜೋಯಿಸ—ಹವುದು. ಆ ಉತ್ತರಪ್ರಾಂತ್ಯದಲ್ಲಿ ಚಳಿ ಬಹು ಹೆಚ್ಚು. ಹಿಮ ಯಾವಾಗಲೂ ಬೀಳುವುದು. ಅದು ಗಟ್ಟಿಯಾಗಿ ಗೆಡ್ಡೆಯಾಗುವುದು. ಕರಗುವುದೇ ಇಲ್ಲ. ಅಲ್ಲಿ ಯಾವ ಗಿಡವೂ ಬೆಳೆಯುವುದಿಲ್ಲ. ಆದ್ದರಿಂದ ಮನೇಕಟ್ಟುವುದಕ್ಕೆ ಮರ ಸಿಕ್ಕುವುದಿಲ್ಲ. ಆದರೆ ಇತರ ದೇಶದಿಂದ ಕೊಚ್ಚಿಕೊಂಡು ಬಂದು, ಸಮುದ್ರತೀರದಲ್ಲಿ ಬಿದ್ದಿರುವ ಮರವನ್ನು ತಂದು ಅದನ್ನು ನಿಲ್ಲಿಸಿ, ಮೇಲೆ ಮಣ್ಣು ಬಳಿಯುವರು. ಕಲ್ಲಿನಲ್ಲಿಯೂ ಮಣ್ಣಿನಲ್ಲಿಯೂ ಗೋಡೆಯನ್ನು ಕಟ್ಟುವರು. ಇಂಥಾ ಗುಡಿಸಿಲಿನಲ್ಲಿ ಜನರು ವಾಸಮಾಡುವರು. ಮನೆಯೊಳಗೆ ಒಂದು ದೀಪ ಯಾವಾಗಲೂ ಉರಿಯುತ್ತಲೇ ಇರುವುದು. ಅದರಿಂದ ಜನರಿಗೆ ಬೆಳಕು ಉಂಟಾಗುವುದು. ಅವರ ಅಡಿಗೆಯೆಲ್ಲಾ ಅದರಲ್ಲಿ ಆಗುವುದು. ಮತ್ತು ಮನೆಯೆಲ್ಲಾ ಬೆಚ್ಚಗೆ ಆಗುವುದು. ಚಳಿಯಿಂದ ನೀರೆಲ್ಲಾ ಗಟ್ಟಿಯಾಗುವುದು. ಸಮುದ್ರದಮೇಲೆ ಹಿಮದಗೆಡ್ಡೆಯು ಪರ್ವತದಹಾಗೆ ತೇಲುತ್ತಾ ಇರುವುದು. ಅವುಗಳು ಗಾಳಿಯ ದೆಸೆಯಿಂದ ಒಂದರಮೇಲೆ ಒಂದು ಬೀಳುವುದು. ಇದರ ಮಧ್ಯೆ ಹಡಗು ಮೊದಲಾದ್ದು ಸಿಕ್ಕಿದರೆ ಚೂರುಚೂರಾಗುವುದು. ಈ ಮಂಜಿನ ಬೆಟ್ಟಗಳಮೇಲೆ ಬಿಳೀಕರಡಿ ಮಲಗಿಕೊಂಡು ನಿದ್ರೆಮಾಡುತಿರುವುದು.

ಮದನ—ಇಂಥಾ ದೇಶದಲ್ಲಿ ಜನರು ಏನನ್ನು ತಾನೆ ತಿಂದು ಬದುಕಿಯಾರು ?

ಜೋಯಿಸ—ಆ ಉತ್ತರಸಮುದ್ರದಲ್ಲಿ ಇನ್ನೇನೂ ಸಿಕ್ಕುವುದಿಲ್ಲ. ಒಂದು ವಿಧವಾದ ಮೀನು ಮಾತ್ರ ಸಿಕ್ಕುವುದು. ಇದರಿಂದ ಅವರಿಗೆ ಬೇಕಾದ್ದೆಲ್ಲಾ ದೊರೆಯುವುದು. ಅದರ ಮಾಂಸದಿಂದ ಹೊಟ್ಟೇತುಂಬಿಕೊಳ್ಳುವರು. ಅದರ ಕೊಬ್ಬು ದೀಪಕ್ಕೆ ಎಣ್ಣೆಯಾಗುವುದು. ಅದರ

ಚಕ್ಕಳವನ್ನೇ ಮನೆಯ ಒಳಗಡೇಗೋಡೆಗೆ ಅಂಟಿಸುವರು. ಇದರ ಮೇಲೆ ನೀರು ಕೆಂದುವುದಿಲ್ಲ. ಇಂಥಾ ಉಪಯೋಗವಾದ ಜಂತುವನ್ನು ಹಿಡಿಯುವುದೇ ಜನರ ಮುಖ್ಯವಾದ ಕೆಲಸ. ಆ ಸಮುದ್ರದಲ್ಲಿ ತಿಮಿಂಗಿಲವೆಂಬ ಒಂದು ವಿಧವಾದ ಜಲಜಂತು ಸಿಕ್ಕುವುದು. ಇದು ಈವರೆಗೆ ನಾವು ಕಂಡದ್ದರಲ್ಲಿ ಅತ್ಯಂತ ದೊಡ್ಡಮೃಗವಾಗಿದೆ. ಉದ್ದದಲ್ಲಿ ಅರುವತ್ತು ಎಪ್ಪತ್ತು ಮೊಳ ಇರುವುದು; ಸಮುದ್ರದಮೇಲೆ ಕಾಣಿಸುವ ಒಂದು ಚಿಕ್ಕ ಬೆಟ್ಟವೋ ಎನ್ನುವ ಹಾಗೆ ನೀರಿನಮೇಲೆ ತೇಲುತಿರುವುದು. ಅದರ ತಲೆಯಲ್ಲಿ ಎರಡು ತೂತು ಇದೆ. ಆ ತೂತಿನಿಂದ ಕಾರಂಜಿಹಾರಿದಂತೆ ನೀರನ್ನು ಹಾರಿಸುತ್ತಲೇ ಇರುವುದು. ಅದರ ಬಾಲದಿಂದ ಒಂದುಸಾರಿ ನೀರನ್ನು ಬಡಿದರೆ, ಒಂದು ದೊಡ್ಡಬಿರುಗಾಳಿ ಎದ್ದಹಾಗೆ ಗಾಳಿ ಹೊರಟು ಸಮುದ್ರ ಉಕ್ಕುವದು. ಯಾವಾಗಲಾದರೂ ಅಕಸ್ಮಾತ್ತಾಗಿ ಇದಕ್ಕೆ ಹಡಗು ಸಿಕ್ಕಿದರೆ, ಅದನ್ನು ತಲೆಕೆಳಗೆ ಮಾಡುವುದು ವಿನಾ ಇನ್ನು ಯಾವ ಕೆಟ್ಟತನಕ್ಕೂ ಇದು ಬರುವುದಿಲ್ಲ. ಇದು ಮೀನನ್ನು ತಿಂದೇ ಜೀವಿಸುವುದು. ಇಂಥಾ ಮೃಗವನ್ನು ಹಿಡಿದು ಕೊಲ್ಲುತಾರೆ. ಆ ದೇಶದವರು ಹೊಟ್ಟೆಗಿಲ್ಲದೆ, ಅದನ್ನು ಹಿಡಿಯುತಾರಾದ್ದರಿಂದ, ಅವರು ಅಷ್ಟು ಆಕ್ಷೇಪಣೆಗೆ ಗುರಿಯಾಗುವುದಿಲ್ಲ. ಇತರ ಜನರು ಯಾಕೆ ಆ ಕೆಲಸಕ್ಕೆ ಹೋಗಬೇಕು? ಯಾಕೆಂದರೆ ಅದರಿಂದ ಒಂದು ವಿಧವಾದ ಎಣ್ಣೆ ಹೊರಡುವುದು. ಅದು ಅನೇಕ ಕೆಲಸಕ್ಕೆ ಉಪಯೋಗವಾಗುವುದು. ಮೇಲೂ, ತಿಮಿಂಗಿಲದ ಮೂಳೆಯು ಬಹು ಗಟ್ಟಿಯಾಗಿಯೂ ವಿಶೇಷವಾಗಿ ಬಗ್ಗತಕ್ಕದ್ದಾಗಿಯೂ ಇರುವಕಾರಣ, ಅದರಿಂದಲೂ ಬಹಳ ಉಪಯೋಗ ಉಂಟು.

ಇಂಥಾ ಮೃಗವನ್ನು ಕೊಲ್ಲುವುದು ಬಹು ಕಷ್ಟವಾದ ಕೆಲಸವೇಸರಿ. ಜನರು ಹಡಗಿನಮೇಲೆ ಕೂತು ಹೊರಡುವರು. ತಿಮಿಂಗಿಲವನ್ನು ದೂರದಲ್ಲಿಯೇ ಕಂಡಕೂಡಲೆ, ೮-೧೦ ಜನ ದೋಣಿಯಲ್ಲಿ ಕೂತು ಅದರ ಸಮೀಪಕ್ಕೆ ಹೋಗುವರು. ಅವರಲ್ಲಿ ಒಬ್ಬನು ಒಂದು ಹಗ್ಗದ ಕೊನೆಗೆ ಕೊಕ್ಕೆಯಹಾಗಿರುವ ಒಂದು ಹರಿತವಾದ ಆಯುಧವನ್ನು ಕಟ್ಟಿ ಅದನ್ನು ತಿಮಿಂಗಿಲದಕಡೆ ಎಸೆಯುವನು. ಕೂಡಲೆ ಅದು

ಹಗ್ಗವನ್ನು ತನ್ನ ಮೈಗೆಲ್ಲಾ ಸುತ್ತಿಕೊಳ್ಳುವದಕ್ಕೆ ಮೊದಲುಮಾಡಿ, ನೀರಿನೊಳಕ್ಕೆ ಹೊರಟು ಹೋಗುವುದು. ಅದು ಎಷ್ಟು ಎಳೆದರೂ ಬರುವ ಹಾಗೆ ಹಗ್ಗವನ್ನೂ ಉದ್ದವಾಗಿ ಬಿಡುವರು. ಹೀಗೆ ತಾನು ಹಾಕಿಕೊಂಡ ಕಟ್ಟನ್ನು ತಾನು ಸಹಿಸಲಾರದೆ ಮೇಲಕ್ಕೆ ಏಳುವುದು. ಮತ್ತೆ ಜನರು ಹೋಗಿ ಹೀಗೆಯೇ ಹೊಸಕಟ್ಟು ಅದಕ್ಕೆ ಬೀಳುವಹಾಗೆ ಮಾಡುವರು. ಈ ಬಂಧದಿಂದ ತಾನಾಗಿಯೇ ಆ ಮಹಾಜಂತುವು ಸಾಯುವುದು.

ಸುಮತಿ—ಅದರ ಹತ್ತಿರಕ್ಕೆ ಹಡಗು ಹೋದರೆ ಅದನ್ನು ಮುಳುಗಿಸುವುದು ಹೊರತು ತಿಮಿಂಗಿಲವು ಇನ್ನು ಏನೂಮಾಡುವುದಿಲ್ಲವೆಂದು ಹೇಳಿದಿರಿ. ಹಾಗಾದರೆ ಆ ನಿರಪರಾಧಿಯಾದ ಬಡಜಂತುವನ್ನು ಯಾಕೆ ಕೊಲ್ಲಬೇಕು ?

ಜೋಯಿಸ—ಅಯ್ಯ, ವಿಧವಿಧವಾದ ಪ್ರಯೋಜನದಮೇಲಿನ ದೃಷ್ಟಿಯಿಂದ ಜನರು ಎಲ್ಲಾ ಕಾರ್ಯಗಳಿಗೂ ಪ್ರವೇಶಮಾಡುವರು. ಇದನ್ನು ನೀನು ಅರಿಯಬೇಕಾದರೆ ಪ್ರಪಂಚ ಧರ್ಮವನ್ನು ನೀನು ಇನ್ನೂ ಚೆನ್ನಾಗಿ ತಿಳಿಯಬೇಕು. ಅದು ಹಾಗಿರಲಿ. ಈ ತಿಮಿಂಗಿಲವು ಅನೇಕ ಮೀನುಗಳನ್ನು ಕೊಲ್ಲುವುದು. ಇದು ಸಾಯುವುದರಿಂದ ಆ ನಿರಪರಾಧಿಗಳಾದ ಮೀನುಗಳಿಗೆ ಸಂತೋಷವಾಗುವುದಿಲ್ಲವೆ ? ಮತ್ತು ಆ ಮಹಾ ಶೀತಪ್ರದೇಶದಲ್ಲಿ ಮತ್ತೆ ಏನೂ ಸಿಕ್ಕುವುದಿಲ್ಲವಾಗಿ ಜನರು ಇದರ ಮಾಂಸವನ್ನು ತಿಂದು ಹೊಟ್ಟೇ ತುಂಬಿಕೊಳ್ಳುವರು.

ಮದನ—ಅಷ್ಟು ಕಷ್ಟವನ್ನಾದರೂ ಪಟ್ಟುಕೊಂಡು ಅಂಥಾ ಕೆಟ್ಟ ಪ್ರಾಂತ್ಯದಲ್ಲಿ ಜನರು ಯಾಕೆ ವಾಸಮಾಡಬೇಕು ? ಸುಭಿಕ್ಷವಾಗಿರುವ ಬೇರೇದೇಶಕ್ಕೆ ಯಾಕೆ ಹೋಗಿ ಸುಖವಾಗಿರಬಾರದು ?

ಜೋಯಿಸ—ಅವರ ದೇಶವೇ ಅವರಿಗೆ ಸುಖವಾಗಿದೆ. ಇತರ ದೇಶವನ್ನು ಅವರು ಒಲ್ಲರು. ಇತರ ದೇಶೀಯರನ್ನು ಕಂಡರೆ ಅವರಿಗೆ ಸೇರುವುದಿಲ್ಲ.

ಮದನ—ಈ ಕಾಡು ಜನರಿಗೆ ತಮಗಿಂತಲೂ ಉತ್ತಮರಾದವರನ್ನು ಕಂಡರೆ ಸೇರುವುದಿಲ್ಲವೆಂದರೇನು ? ಇವರು ಎಷ್ಟುಮಾತ್ರದವರು ?

ಜೋಯಿಸ—ನೀನು ಹಾಗೆ ತಿಳಿದಿದೀಯೆ. ಅವರು ಇತರರಿಗಿಂತಲೂ ತಾವು ಬುದ್ಧಿವಂತರೆಂದು ತಿಳಿದುಕೊಂಡಿದಾರೆ. ಮುಸಲ, ಈ ತಿಮಿಂಗಿಲವನ್ನು ಹಿಡಿಯುವುದರಲ್ಲಿ ಅವರ ಸಾಮರ್ಥ್ಯಕ್ಕೆ ಸಮಾನವಾದ್ದು ಯಾರದೂ ಅಲ್ಲ. ಅವರೂ ಹಾಗೆಯೇ ಎಲ್ಲರಿಗಿಂತಲೂ ತಾವೇ ಬುದ್ಧಿವಂತರೆಂದು ತಿಳಿದಿದಾರೆ.

ಮದನ—ಅವರ ಅವಿವೇಕವನ್ನು ಅವರಿಗೆ ತೋರಿಸಿಕೊಟ್ಟು, ಅವರಿಗೆ ಬುದ್ಧೀ ಕಲಿಸಬೇಕೆಂದು ನನಗೆ ಇಷ್ಟವಿದೆ.

ಜೋಯಿಸ—ನಿನ್ನ ಊಳಿಗದವರಿಗಿಂತಲೂ ನೀನು ಎಷ್ಟೋ ಬುದ್ಧಿವಂತನೆಂದು ನೀನು ತಿಳಿದುಕೊಂಡಿಲ್ಲವೊ? ಅವರನ್ನು ಅತಿ ನಿಕೃಷ್ಟವಾಗಿ ನೀನು ಕಾಣುವುದಿಲ್ಲವೊ?

ಮದನ—ಅವರನ್ನು ಕಂಡರೆ ಪೂರ್ವದಲ್ಲಿ ನನಗಿದ್ದ ಅಸಹ್ಯ ಈಗ ಇಲ್ಲ. ಆದಾಗ್ಯೂ, ನಾನು ದೊರೆಮಗನಾದ್ದರಿಂದ ಅವರಿಗಿಂತಲೂ ನಾನು ಉತ್ತಮ.

ಜೋಯಿಸ—ದೊರೆಮಗ, ದೊರೆಮಗ, ಎಂದು ನೀನು ಹೇಳುತ್ತಲೇ ಇರುತೀಯೆ. ಅದಕ್ಕೆ ನನಗೆ ಇನ್ನೂ ಚೆನ್ನಾಗಿ ಅರ್ಥವಾಗಲಿಲ್ಲ.

ಮದನ—ಯಾವ ಕೆಲಸವನ್ನೂ ಮಾಡದೆ ಇರುವಂಥಾ ಮತ್ತು ನಮ್ಮ ಅಪ್ಪಾಜಿಯ ಸಮೀಪದಲ್ಲಿಯೂ ನಮ್ಮ ಅಮ್ಮಯ್ಯನ ಸಮೀಪದಲ್ಲಿಯೂ ಊಳಿಗದವರು ಕಾದುಕೊಂಡು ನಿಂತಿರುವ ಹಾಗೆ ಯಾರ ಸಮೀಪದಲ್ಲಿ ನಿಂತಿರುತಾರೆಯೋ ಅಂಥಾ ಮನುಷ್ಯನು ದೊರೆಮಗ.

ಜೋಯಿಸ—ಇಂಥಾ ಮನುಷ್ಯನು ಇತರರನ್ನು ತಿರಸ್ಕಾರಭಾವದಲ್ಲಿ ಕಾಣಬಹುದೊ?

ಮದನ—ಆ ಮಾತನ್ನು ನಾನು ಆಡಲಿಲ್ಲ. ಆದರೆ ದೊರೆಮಗನು ಇತರರಿಗಿಂತಲೂ ಶ್ರೇಷ್ಠ.

ಜೋಯಿಸ—ಯಾತರಲ್ಲಿ ಶ್ರೇಷ್ಠ? ಆರಂಬವನ್ನು ಮಾಡಿ ದವಸಾ ಬೆಳೆಯುವುದರಲ್ಲಿಯೆ? ಬಟ್ಟೆ ನೆಯ್ಯುವುದರಲ್ಲಿಯೆ? ಮನೆಕಟ್ಟುವುದರಲ್ಲಿಯೆ? ಯಾತರಲ್ಲಿ?

ಮದನ—ದೊರೆ ಮಕ್ಕಳು ಮನೇ ಕಟ್ಟುವುದೂ ಇಲ್ಲ, ಆರಂಬ ಮಾಡುವುದೂ ಇಲ್ಲ, ಬಟ್ಟೇ ನೆಯ್ಯುವುದೂ ಇಲ್ಲ.

ಜೋಇಸ—ತಿಳುವಳಿಕೆಯಲ್ಲಿ ಶ್ರೇಷ್ಠವೊ? ನೀನು ಇಲ್ಲಿಗೆ ಬಂದಾಗ ನಿನಗೆ ತಿಳುವಳಿಕೆ ಎಲ್ಲರಿಗಿಂತಲೂ ಹೆಚ್ಚಾಗಿತ್ತೆ?

ಮದನ--ನಾನು ಇಲ್ಲಿಗೆ ಬಂದಾಗ ನನಗೆ ಇಷ್ಟು ತಿಳುವಳಿಕೆ ಇರಲಿಲ್ಲ.

ಜೋಇಸ--ಏನೂ ಅರಿಯದೇ ಇದ್ದಾಗ್ಯೂ, ಏನೂಮಾಡುವುದಕ್ಕೆ ಬರದೇ ಇದ್ದಾಗ್ಯೂ, ನೀನುಮಾತ್ರ ಶ್ರೇಷ್ಠನಾಗಬಹುದು; ಇತರರಿಗಿಂತಲೂ ಒಂದುವಿಷಯವನ್ನಾದರೂ ಚೆನ್ನಾಗಿ ತಿಳಿದುಕೊಂಡಿದ್ದ ಜನರುಮಾತ್ರ ಅನ್ಯದೇಶದವರಾಗಿ ತಿಮಿಂಗಿಲಗಳನ್ನು ಹಿಡಿಯುವುದರಲ್ಲಿ ಅಷ್ಟು ಚತುರರಲ್ಲದೇ ಇರತಕ್ಕ ಇತರರಿಗಿಂತಲೂ ತಾವು ಶ್ರೇಷ್ಠರು ಎಂದು ಹೇಳಿಕೊಳ್ಳಕೂಡದೊ? ನೀನು ಯಾವ ಕೆಲಸವನ್ನೂ ಮಾಡಲಾರೆ; ನೀನು ಈಜ ಬಲ್ಲೆಯು? ದೋಣಿಯನ್ನು ಕಟ್ಟಬಲ್ಲೆಯು? ತಿಮಿಂಗಿಲವನ್ನು ಹಿಡಿಯುಬಲ್ಲೆಯ? ಹಸಿವನ್ನು ತಡೆಯುಬಲ್ಲೆಯ? ನೀನು ಏನಮಾಡಬಲ್ಲೆ? ಯಾವ ಕೆಲಸವನ್ನೂ ಮಾಡದೇ ಇರತಕ್ಕವನು ಹೇಗೆ ಶ್ರೇಷ್ಠನಾದಾನು?

ಮದನ—ಜೋಇಸರೆ, ಇದನ್ನೆಲ್ಲಾ ಕೇಳಿದರೆ ನನಿಗೆ ಏನೂ ತಿಳಿಯದೆಂದು ತೋರುತ್ತೆ.

ಜೋಇಸ—ಇನ್ನುಮೇಲೆ ಹಾಗೆಯೇ ತಿಳಿದುಕೊಂಡಿರು.

---

## ೧೬ನೆ ಅಧ್ಯಾಯ.

ಹೀಗೆ ಕೆಲವುದಿನ ಕಳೆಯಿತು. ರಾಮುಜೋಇಸನು ವರುಷಕ್ಕೆ ಒಂದುಸಾರಿ ಆವೂರ ಜನರಿಗೆಲ್ಲಾ ಧಾತ್ರೀಹವನದ ಸಮಾರಾಧನೆಯನ್ನು ಮಾಡಿಸುತಿದ್ದನು. ಆವೂರಲ್ಲಿದ್ದ ಬ್ರಾಹ್ಮಣರಿಗೇ ಅಲ್ಲದೆ, ಇತರ ವರ್ಣದವರಿಗೂ ತೃಪ್ತಿಯಾಗಿ ಅನ್ನವನ್ನು ಹಾಕಿಸುತಿದ್ದನು. ಅದಕ್ಕಾಗಿ ಒಂದುದಿನ ಜೋಇಸನ ಮನೆಯಿಂದ ಊರಿನವರಿಗೆಲ್ಲಾ ಔತಣ ಬಂತು. ಬ್ರಾಹ್ಮಣರ ಹೆಂಗಸರು ಗಂಡಸರು ಎಲ್ಲರೂ ವಿಶಾಲವಾದ ತೊಟ್ಟೀಮನೆಯಲ್ಲಿ ಕೂತುಕೊಂಡಿದ್ದರು. ಮತ್ತು ಇತರ ವರ್ಣಸ್ಥ

ರೆಲ್ಲರೂ ತಮ್ಮ ಹೆಂಗಸರು ಮಕ್ಕಳುಗಳನ್ನು ಕರೆದುಕೊಂಡು ಬಂದು ಬ್ರಾಹ್ಮಣರ ಊಟವಾಗಲೆಂದು ಕಾದುಕೊಂಡು ಹೊರಗಡೇ ಜಗಲಿಗಳ ಮೇಲೆ ಕೂತಿದ್ದರು. ಜೋಯಿಸನು ಬಂದ ಅತಿಥಿಗಳನ್ನು ಬಡವರು ಭಾಗ್ಯವಂತರು ಎಂದು ನೋಡದೆ, ಒಬ್ಬೊಬ್ಬರನ್ನಾಗಿ ಎದುರುಗೊಂಡು ಕರೆತಂದು ಅಲ್ಲಲ್ಲಿ ಎಡೆಮಾಡಿ ಕೂರಿಸಿ, ಅವರ ಕ್ಷೇಮಲಾಭವನ್ನು ವಿಚಾರಿಸಿ ಅವರ' ಗೃಹಕೃತ್ಯವನ್ನೆಲ್ಲಾ ಕೇಳಿ ಅವರನ್ನು ಆದರಿಸುತಿದ್ದನು.

ಹೀಗೆ ಜೋಯಿಸನು ಬೇರೇ ಕೆಲಸದಲ್ಲಿ ಇದ್ದನಾದಕಾರಣ, ಮದನನಿಗೆ ಸ್ವಲ್ಪ ಬಿಡುವಾಯಿತು. ಆಗ ಇವನು ಸುಮ್ಮನಿರದೆ ಜೋಯಿಸನ ಮನೆಯಲ್ಲಿದ್ದ ಒಂದು ಹೆಂಗರುವನ್ನು ಬಿಚ್ಚಿಕೊಂಡು ಬಂದು ಒಂದು ಮರದ ತುಂಡಿಗೆ ಕಟ್ಟಿ ಹೊಡೆಯುವುದಕ್ಕೆ ಮೊದಲು ಮಾಡಿದನು. ಅಲ್ಲಿದ್ದ ಹುಡುಗರೆಲ್ಲಾ ಮದನನು ಏನ ಮಾಡುತಾನೋ ನೋಡಬೇಕೆಂದು ಇವನ ಸುತ್ತಲೂ ನಿಂತುಕೊಂಡಿದ್ದರು. ಇವನು ಕರುವನ್ನು ಕಟ್ಟಿಗೆಯಿಂದ ಗಟ್ಟಿಯಾಗಿ ಹೊಡೆಯಲು, ಎಂದಿಗೂ ಭಾರವನ್ನು ಎಳೆದ ಅಭ್ಯಾಸವನ್ನೇ ಕಾಣದಂಥಾ ಆ ಹೆಂಗರು ಮನಸ್ಸು ಬಂದಕಡೆಗೆ ಇವನನ್ನು ಅಡ್ಡಾದಿಡ್ಡಿಯಾಗಿ ಎಳೆದುಕೊಂಡು ಹೋಯಿತು. ಆ ವೇಗದಲ್ಲಿ ಮದನನ ಕೈಕಾಲುಗಳೆಲ್ಲಾ ತರೆಮಹೋದವು. ಕೊನೆಗೆ ಕರುವು ಇವನನ್ನು ಎಳೆದುಕೊಂಡುಹೋಗಿ ದೊಡ್ಡ ಹಳ್ಳಕ್ಕೆ ಕೆಡವಿತು. ಮೈಯೆಲ್ಲಾ ಕೊಚ್ಚೆಯಾಯಿತು. ಇವನ ಹಿಂದೆ "ಹೋ" ಎಂದು ಕೂಗಿಕೊಂಡು ಓಡಿಬರುತಿದ್ದ ಹುಡುಗರೆಲ್ಲಾ ಹಾಸ್ಯ ಮಾಡಿ ಗೊಳ್ ಎಂದು ಗಟ್ಟಿಯಾಗಿ ನಕ್ಕರು. ಮದನನಿಗೆ ಈ ಹಾಸ್ಯದಿಂದ ನಾಚಿಕೆ ಉಂಟಾಗಿ ಕೊನೆಗೆ ಅದು ಕೋಪವನ್ನು ಎಬ್ಬಿಸಿತು. ದೊರೆಮಗನು ಹಳ್ಳದಿಂದ ಮೇಲಕ್ಕೆ ಎದ್ದು ಆ ಹುಡುಗರು ನಿಂತಿದ್ದ ಕಡೆಗೆ ಬಂದು ಒಬ್ಬೊಬ್ಬರನ್ನಾಗಿ ಹಿಡಿದು ಹೊಡೆಯುವುದಕ್ಕೆ ಮೊದಲು ಮಾಡಿದನು. ಕೆಲವರಿಗೆ ಒಳ್ಳೇ ಪೆಟ್ಟು ಬಿತ್ತು. ಇನ್ನು ಕೆಲವರು ಮದನನ ಕೈಗೆ ಸಿಕ್ಕದೆ ಕೂಗುತಾ ಓಡಿಹೋದರು. ಈ ಮದನನು ಭಾಗ್ಯವಂತರ ಮಗನಲ್ಲಾ, ಇವನನ್ನು ತಾವು ಹಿಂತಿರುಗಿ ಹೊಡೆದರೆ

ತಮ್ಮನ್ನು ಆಮೇಲೆ ಏನಮಾಡಿಯಾರೋ ಎಂಬ ಭಯದಿಂದ ಇವನ ಕೈಲಿ ಏಟತಿಂದು ಸುಮ್ಮನೇ ಹೊರಟುಹೋದರು. ಈ ಗದ್ದಲ ಹೆಚ್ಚಾಗಿ, ಮಡಿ ಉಟ್ಟುಕೊಂಡು ಎಲ್ಲರಿಗೂ ಬಡಿಸುತಿದ್ದ ಜೋಯಿಸನ ಕಿವಿಗೆ ಮುಟ್ಟಿತು. ಜೋಯಿಸನು ತನ್ನ ಮನೇ ಬಾಗಿಲಿಗೆ ಬಂದು ನೋಡಲು ಮೈಯನ್ನು ತರೆಸಿಕೊಂಡು ಕೊಚ್ಚೆಯಾಗಿ ಶರೀರವೆಲ್ಲಾ ನನೆದು ಹೋಗಿದ್ದ ಮದನನು ಮನೇಕಡೆಗೆ ಓಡಿ ಬರುತಿದ್ದನು. ರಾಮಜೋಯಿಸನು ಅವನನ್ನು ಕರೆದುಕೊಂಡು ಹೋಗಿ ಸ್ನಾನವನ್ನು ಮಾಡಿಸಿ ಒಣಗಿದ್ದ ಬಟ್ಟೆಯನ್ನು ಕೊಡಿಸಿ, ಆಗ ಯಾವ ಮಾತನ್ನೂ ಆಡದೆ ಸುಮ್ಮನೆ ಆದನು. ತರುವಾಯ ಆ ಸಂಗತಿಯನ್ನೆಲ್ಲಾ ಕೇಳಿ ತಿಳಿದುಕೊಂಡು ಮಾರನೇ ದಿನ ಮದನನನ್ನು ನೋಡಿ—ಮದನ, ನೀನು ನಿನ್ನೇದಿನ ಬಹಳ ಚೆನ್ನಾಗಿ ಕರುವನ್ನು ಹೊಡೆದು, ಕೈಲಾಗದ ಹುಡುಗರನ್ನು ಚಚ್ಚಿ, ಹೆಚ್ಚಾದ ಪರಾಕ್ರಮವನ್ನು ತೋರಿಸಿದಹಾಗಿದೆ ಎಂದನು.

ಮದನ—ಜೋಯಿಸರೆ, ಆ ಕೆಟ್ಟ ಹುಡುಗರೆಲ್ಲಾ ನನ್ನನ್ನು ಹಾಸ್ಯಮಾಡಿಕೊಂಡು ನಕ್ಕರು. ಅದಕ್ಕೋಸ್ಕರ ನನಗೆ ಕೋಪಬಂತು.

ಜೋಯಿಸ—ಅವರು ನಕ್ಕದ್ದರಿಂದ ನಿನಗೇನು ಕಡಮೆಯಾಯಿತು?

ಮದನ—ಇತರರು ನಮ್ಮನ್ನು ನೋಡಿ ನಕ್ಕರೆ ಕೋಪ ಬರದೇಯಿರುವುದಿಲ್ಲ.

ಜೋಯಿಸ—ಇದನ್ನು ನಿವಾರಣಮಾಡಿಕೊಳ್ಳುವುದಕ್ಕೆ ಎರಡು ಮಾರ್ಗ ಉಂಟು. ಇತರರು ಹಾಸ್ಯಮಾಡುವ ಕೆಲಸಕ್ಕೆ ನಾವು ಹೋಗಲೇಬಾರದು, ಅಥವಾ ಹೋದರೂ ಅವರು ಮಾಡಿದ ಹಾಸ್ಯವನ್ನು ಸಹಿಸಿಕೊಂಡು ಸುಮ್ಮನೇ ಇರಬೇಕು.

ಮದನ—ಅಂಥಾ ಸಂದರ್ಭದಲ್ಲಿ ಯಾರೂ ಸುಮ್ಮನೇ ಇರುವುದಕ್ಕಾಗುವುದಿಲ್ಲ.

ಜೋಯಿಸ—ನಿನ್ನಂಥಾ ಕೋಪಿಷ್ಠ ಈ ಪ್ರಪಂಚದಲ್ಲಿ ಯಾರೂ ಇಲ್ಲ. ಚಳಿಯಾದ ಸೀಮೆಯಲ್ಲಿರುವ ಜನರೆಲ್ಲಾ ವರಟರೆಂತಲೂ, ನೀನು ಬಹು ಬುದ್ಧಿಶಾಲಿ ಎಂತಲೂ, ಅವರು ನಿನಗೆ ಸಮಾನವಲ್ಲ

ವೆಂತಲೂ ಆ ದಿನ ಹೇಳಿಕೊಂಡೆ; ಆದರೆ ಆ ಬಡಜನರು ಎಲ್ಲರೂ ದೊರೆ ಮಕ್ಕಳಲ್ಲ. ಆದಾಗ್ಯೂ ಅವರಲ್ಲಿರುವ ನಡತೆ ದೊರೆಮಕ್ಕಳಲ್ಲಿ ಇದು ವರೆಗೂ ಕಾಣಬಂದಿಲ್ಲ. ಅವರನ್ನು ಯಾರಾದರೂ ಹಾಸ್ಯಮಾಡಿದರೆ, ನಿನ್ನಹಾಗೆ ಅವರು ಕೋಪಮಾಡಿಕೊಂಡು ಸಿಕ್ಕಿದವರನ್ನೆಲ್ಲಾ ಹೊಡೆ ಯುವುದಿಲ್ಲ. ಒಬ್ಬನನ್ನು ಒಬ್ಬ ಹಾಸ್ಯಮಾಡಿದರೆ, ಅವರಿಬ್ಬರೂ ಒಂದು ಮನೆಯಲ್ಲಿ ತಮ್ಮ ಜನರ ಸಭೆಸೇರಿಸಿ, ಅವರ ಮುಂದೆ ಇಬ್ಬ ರಲ್ಲಿ ಒಬ್ಬನು ತನ್ನ ಪ್ರತಿಕಕ್ಷಿಯನ್ನು ಹಾಸ್ಯಮಾಡಿ ಪದಗಳನ್ನು ಹಾಡುವನು. ಹೀಗೆ ಹಾಡಿ ಹಾಡಿ ಅವನಿಗೆ ಸಾಕಾದಮೇಲೆ ಪ್ರತಿ ಕಕ್ಷಿಯು ಅದೇರೀತಿಯಲ್ಲಿ ಇವನಮೇಲೆ ಪದವನ್ನು ಹಾಡುವನು. ಇವರಿಬ್ಬರಲ್ಲಿ ಯಾರ ಪದಗಳು ಸಭೆಯವರಿಗೆ ಹೆಚ್ಚು ನಗುವನ್ನು ಉಂಟುಮಾಡುವುದೋ ಅವನೇ ಜೈಸಿದನೆಂದು ಹೇಳಿ ಅವನಿಗೆ ಬಹು ಮಾನವನ್ನು ಮಾಡುವರು. ಆ ವರಟು ಜನರ ವ್ಯಾಜ್ಯ ಹೀಗೆ ವ್ಯವ ಸ್ಥೆಯಾಗುವುದೇ ಹೊರತು ಸಿಕ್ಕಿದವರನ್ನು ಹಿಡಿದು ಹೊಡೆಯುವುದ ರಿಂದ ಅಲ್ಲ. ಬಡವರು ನಿರಪರಾಧಿಗಳಾಗಿದ್ದಾಗ್ಯೂ ಸರಿಯೆ ಅವರನ್ನು ಹಿಡಿದು ಹೊಡೆಯುವ ಸುಗುಣ ದೊರೆಮಕ್ಕಳಲ್ಲಿಯೇ ಹೊರತು, ಆ ವರಟು ಜನರಲ್ಲಿ ಇಲ್ಲ. ಈ ಮಾತನ್ನು ಕೇಳಿ ಮದನ ನಾಚಿಕೊಂಡು ಸುಮ್ಮನಾದನು.

---

## ೧೭ ನೆ ಅಧ್ಯಾಯು.

ಅತ್ತ ಮದನನ ತಂದೆಯಾದ ಅನಂಗರಾಜನ ಅರಮನೆಯಲ್ಲಿ ನಡೆಯಬೇಕಾದ ಒಂದು ದೊಡ್ಡ ಮಹೋತ್ಸವವು ಸಮೀಪಿಸಿತು. ದೊರೇ ಹೆಂಡತಿಯಾದ ಮೀನಾಂಬಕೀದೇವಿಯ ತಂಗಿಯಾದ ಕಮ ಲಾಂಬಕೀದೇವಿಯನ್ನು ಕೋಡೂರು ಪಾಳಯಗಾರನಾದ ಮಲ್ಲನಾಯ ಕನಿಗೆ ಕೊಟ್ಟು ಮದುವೆಯಾಗಿತ್ತು. ಕಮಲಾಂಬಕಿಯು ಬಸಿರಾಗಿ ದ್ದಳು. ಮೀನಾಂಬಕಿಯು ತನ್ನ ತಂಗಿಯನ್ನು ಕರೆತಂದು ಅಕ್ಷತೆಪ್ರ ಸ್ತವನ್ನು ವಿಶೇಷ ವೈಭವದಿಂದ ಜರುಗಿಸಬೇಕೆಂದು ಯೋಚಿಸಿದಳು.

ಇದಕ್ಕಾಗಿ ಬೇಕಾದ ಅಣಿಯನ್ನು ಅತಿ ಸಂಭ್ರಮದಿಂದ ಮಾಡಿದಳು. ಒಂದು ಶುಭಲಗ್ನವು ಗೊತ್ತಾಯಿತು. ಬಂಧುವರ್ಗಕ್ಕೆಲ್ಲಾ ಔತಣಗಳು ಹೋಗಿ, ಅವರು ಒಬ್ಬೊಬ್ಬರಾಗಿ ಬರುತಾ ಇದ್ದರು. ಇಂಥಾ ಉತ್ಸವಕಾಲದಲ್ಲಿ ರಾಜಕುಮಾರ ಇಲ್ಲದೇ ಇದ್ದರೆ ಸರಿಯಾಗಿದ್ದೀತೆ? ಈ ಕಾಲದಲ್ಲಿಯೂ ಅತಿಶಯದ ಪುತ್ರನನ್ನು ಕರೆಸಿ ನೋಡದಿದ್ದರೆ ಇನ್ನು ಯಾವಾಗತಾನೆ ಕರೆಸಬೇಕು? ಎಷ್ಟರಮಟ್ಟಿಗೆತಾನೆ ರಚನೆಯಾಯಿತು, ಚಂದ್ರ ಇಲ್ಲದ ಇರುಳಿನಹಾಗೆ ಇರದೆ? ಆದ್ದರಿಂದ ಮಗನನ್ನು ಕರೆತರುವುದಕ್ಕೆ ಆಳುಗಳನ್ನೂ ಪಲ್ಲಕ್ಕಿಯನ್ನೂ ರಾಮಜೋಯಿಸನ ಅಗ್ರಹಾರಕ್ಕೆ ಕಳುಹಿಸಿದರು.

ಈ ಪ್ರಸ್ತದ ಸಮಾಚಾರವೂ ಅದಕ್ಕಾಗಿ ರಾಜಕುಮಾರನನ್ನು ಕರೆಯುವುದಕ್ಕೆ ಬರುವುದೂ ಸಹಾ ಮುಂಚಿತವಾಗಿಯೇ ರಾಮಜೋಯಿಸನಿಗೆ ಗೊತ್ತಾಗಿತ್ತು. ವಿವೇಕದಲ್ಲಿ ಕಾಡಕಲ್ಲಿನ ಹಾಗೆ ಇದ್ದ ರಾಜಪುತ್ರನನ್ನು ಅನೇಕ ಉಪಾಯಗಳಿಂದ ಸ್ವಲ್ಪಮಟ್ಟಿಗೆ ಸರಿಮಾಡಿ ವಿದ್ಯವನ್ನು ಕಲಿಸಿದ್ದ ಜೋಯಿಸನು, ತಂದೇಮನೆಗೆ ಮದನನು ಹೋಗುವುದರಿಂದುಂಟಾಗುವ ಕೇಡನ್ನು ಯೋಚಿಸಿಕೊಂಡು, ಅವನನ್ನು ಕಳುಹಿಸುವುದಕ್ಕೆ ಇಷ್ಟವಿಲ್ಲದೇ ಇದ್ದನು. ಆದರೆ ಈ ಲೋಕದಲ್ಲಿ ಒಂದೊಂದು ವೇಳೆ ನಮ್ಮ ಇಷ್ಟಕ್ಕೆ ವಿರೋಧವಾಗಿಯೂ ನಡೆಯಬೇಕಾಗುವುದು. ಆದ್ದರಿಂದ ತಂದೇಮನೆಗೆ ಹೋಗಿಬರುತೇನೆಂದು ಆಶೆಯಿಂದ ಕೇಳಿಕೊಳ್ಳಲು ಬಂದ ಮದನನಿಗೆ, ಆಗಲಿ ಎಂದು ಮನಸ್ಸಿಲ್ಲದೆ ಅಪ್ಪಣೆಯನ್ನು ಕೊಡಬೇಕಾಯಿತು. ಆದರೆ ಮದನನಿಗೂ ಸುಮತಿಗೂ ವಿಶೇಷವಾಗಿ ಸ್ನೇಹ ಬೆಳೆದಿತ್ತಾದಕಾರಣ, ಅವನನ್ನು ತನ್ನ ಸಂಗಡ ಅರಮನೆಗೆ ಕಳುಹಿಸಬೇಕೆಂದು ಹಠ ಮಾಡಿದನು. ಇದಕ್ಕೂ ರಾಮಜೋಯಿಸ ಒಪ್ಪಿದನು. ಹೀಗೆ ಈ ಇಬ್ಬರು ಹುಡುಗರೂ ಬನವಾಸಿಗೆ ಬಂದು ತಲಪಿದರು.

ಮಗನು ಬಂದದ್ದು ವಿಾನಾಂಬಕಿಗೆ ಬಹು ಸಂತೋಷವಾಯಿತು. ದೊರೆಯ ನಂಟರೆಲ್ಲರೂ ಸಂಸಾರಸಮೇತವಾಗಿ ಪ್ರಸ್ತಕ್ಕೆ ಬಂದಿದ್ದರು. ಅಕ್ಷತೇಪ್ರಸ್ತವು ವಿಶೇಷವಾಗಿ ಅಟ್ಟಹಾಸದಿಂದ ಜರುಗಿತು.

ಪದ್ಧತೀಪ್ರಕಾರ ಸಾಯಂಕಾಲ ಆರತಿಅಕ್ಷತೆಯು ಬಿಡದೇ ಏಳು ದಿವಸ ನಡೆಯಿತು. ಆ ಕಾಲದಲ್ಲಿ ರಾಜಸ್ತ್ರೀಯರೇ ಬಹಳವಾಗಿ ಸೇರಿ ಆ ವಿಭವವನ್ನು ನಡೆಯಿಸಿ ಹಾಡನ್ನು ಹೇಳಿ ವಿನೋದವಾಗಿ ಕಾಲವನ್ನು ಕಳೆಯುತಿದ್ದರು. ಆ ಪೆಣ್ಮಣಿಯರ ಸಭೆಯಲ್ಲಿ ಓರೆದುರುಬಿನ ವಯ್ಯಾರಿಯರು, ಸಣ್ಣ ಕುಂಕುಮದ ಬಿನ್ನಾಣಿಯರು, ಕೊಂಕು ಕುರುಳಿನ ಕುಲಕಲಾಟಿಯರು, ಹುಸಿನಗೆಯ ಸೊಗಸುಗಾತಿಯರು, ನುಣ್ಗಲ್ಲದವಳು, ಎಸಳು ಮೂಗಿನವಳು, ಕೊಂಕುಗುರುಳಿನವಳು, ಉಂಗುಟದಲ್ಲಿ ನೆಲವನ್ನು ಕೆರೆಯದಿದ್ದರೆ ತನ್ನ ಸೊಗಸು ಕಾಣುವದಿಲ್ಲವೆನ್ನುವಳು, ಹುಬ್ಬನ್ನು ಮೇಲಕ್ಕೆ ಎತ್ತಿ ಸ್ವಲ್ಪ ಗಂಟುಹಾಕಿಕೊಂಡು ಸ್ವಲ್ಪ ಸ್ವಲ್ಪ ನಗುತಿರುವ ಬಿಂಕಗಾತಿ, ಎಣೆಗಂಟನ್ನು ಉದ್ದವಾಗಿ ಹಾಕಿಕೊಂಡು ಅದಕ್ಕೆ ಹೂವನ್ನು ದಟ್ಟವಾಗಿ ಸುತ್ತಿ ಆ ಗಂಟನ್ನು ಬೆನ್ನಿನಮೇಲೆ ಭುಜದಿಂದ ಭುಜಕ್ಕೆ ಉರುಳಿಸಿಯಾಡುತಿರುವ ಒಲಪಿನವಳು, ಓರೆ ನೋಟದ ಕಪಟೆ, ತಲೆಗಿಟ್ಟ ಒಡವೆಯ ಭಾರ ಹಿಂದಕ್ಕೆ ಜಗಿಯಲು ತಲೆಯನ್ನು ಮುಂದಕ್ಕೆ ಬಗ್ಗಿಸಿಕೊಂಡಿರುವ ಹೊಸ ಮದುವಣಗಿತ್ತಿ, ಕತ್ತಿಗೆ ಇಟ್ಟ ಒಡವೆಯ ಭಾರದಿಂದ ತಿರುಗುವುದಕ್ಕಾಗದೆ ಕೊಂಚವಾಗಿ ದೇಹವನ್ನೇ ತಿರುಗಿಸಿ ನೋಡುತಿರುವ ಡಂಭದವಳು, ನೆವನೆವದಲ್ಲಿ ಸೆರಗನ್ನು ಜಾರಿಸಿ ತುಯಿದುತುಯಿದು ಹೊದೆಯುವ ವಯ್ಯಾರಿ, ಕ್ಷಣಕ್ಷಣಕ್ಕೆ ಮುಖವನ್ನು ಒರಸಿಕೊಳ್ಳುವ ಸೊಗಸುಗಾತಿ, ಕೆಳಗಡೇ ತುಟಿಯನ್ನು ಆಗಾಗ್ಗೆ ಹಿಡಿದು ನೋಡಿಕೊಳ್ಳುವ ಚತುರೆ, ಸಮಯ ಬಂದಾಗ ಗಂಡಸರ ಮುಖವನ್ನು ನೋಡಿ ಬಂದ ಹುಸಿನಗುವನ್ನು ಮರೆಮಾಚಿಕೊಳ್ಳುವುದಕ್ಕೆ ತುಟಿ ಎರಡನ್ನೂ ಮುಡಿಕಚ್ಚಿಕೊಳ್ಳುವ ಚಪಲೆ, ನಿಜವಾದ ಧ್ವನಿಯನ್ನು ಮರೆಸಿಕೊಂಡು ಮಾತನಾಡುವ ಮಾಯಾಂಗನೆ, ಏನೂ ಇಲ್ಲದೆ ಸುಮ್ಮನೆ ಕೂತಿರುವ ಗರತಿ, ಇವರೆಲ್ಲರೂ ಸಭೆ ಸೇರಿದ್ದರು. ಪ್ರತಿಯೊಬ್ಬ ಅರಸಿತ್ತಿಯ ಹತ್ತಿರದಲ್ಲೂ ಒಬ್ಬಳು ಎಲೆ ಅಡಕೆಯನ್ನು ನೀಡುತ್ತಲೂ, ಒಬ್ಬಳು ಕಾಳಂಜಿಯನ್ನು ಹಿಡಿಯುತ್ತಲೂ, ನಿಂತಿರುತಿದ್ದರು. ಈ ರಾಣಿವಾಸದ ಅರಸಿಯರೆಲ್ಲರೂ ಕೈವಸ್ತ್ರವನ್ನೂ ದೊಡ್ಡದಾದ ಚಿನ್ನದಲ್ಲಿ ಮಾಡಿದ ನೆಸ್ಯದ ಡಬ್ಬಿಗಳನ್ನೂ

ಹಿಡಿದು ಆಗಾಗ್ಗೆ ಡಬ್ಬಿಯನ್ನು ತೆಗೆದು ನೆಸ್ಯದ ಚುಟಿಗಿಯನ್ನು ಸೇದುತಾ ಇದ್ದರು.

ಈ ರೀತಿಯಲ್ಲಿದ್ದ ಹೆಂಗಸರ ಮಂಡಳಿಯೊಳಕ್ಕೆ, ರಾಜಪುತ್ರನು ತಕ್ಕ ಶೃಂಗಾರವನ್ನು ಮಾಡಿಕೊಂಡು ಬಂದನು. ಆ ರಾಜಾಂಗನೆಯರೆಲ್ಲರ ದೃಷ್ಟಿಯೂ ಇವನ ಕಡೆಗೆ ತಿರುಗಿತು. ಒಬ್ಬಳು ಅವನ ಕಣ್ಣು ನೋಡು, ಎಷ್ಟು ಅಗಲವಾಗಿದೆ; ಎಂದಳು. ಇನ್ನೊಬ್ಬಳು— ಆ ಮೂಗೂ, ಆ ಹಲ್ಲುಬಾಯಿದೆರೆಯೂ ರಾಜಲಕ್ಷಣಗಳೇ ಸರಿ, ಎಂದಳು. ಇನ್ನೊಬ್ಬಳು-ಅವನ ನಡೆಗೆ ಎಷ್ಟು ಠೀವಿಯಾಗಿದೆ ಎಂದಳು. ಒಬ್ಬ ಅರಸಿತ್ತಿಯು—ಹೆತ್ತರೆ ಇಂಥಾ ಮಗನನ್ನು ಹೆರಬೇಕು, ಎಂದು ನಿಟ್ಟುಸಿರ ಬಿಟ್ಟಳು. ಇನ್ನೊಬ್ಬ ರಾಜಸ್ತ್ರೀಯು—ಅದಕ್ಕೂ ಪುಣ್ಯವಿರಬೇಡವೆ? ಪೂರ್ವಜನ್ಮದಲ್ಲಿ ಈಶ್ವರನ ಪೂಜೆ ಮಾಡಿರಬೇಕು; ಎಂದಳು. ಅವನ ತಲೇಕೂದಲು ಮೊದಲುಮಾಡಿಕೊಂಡು ಅಂಗುಷ್ಟದ ವರೆಗೂ ಇವನ ಸೌಂದರ್ಯವನ್ನು ಎಲ್ಲರೂ ಹೊಗಳುವುದಕ್ಕೆ ಮೊದಲು ಮಾಡಿದರು. ಒಬ್ಬ ಬಾಲೆಯು ತಟ್ಟನೆ ಎದ್ದು ಬಂದು ಅವನ ಕೆನ್ನೆಗೆ ಮುತ್ತು ಕೊಟ್ಟಳು. ಒಬ್ಬ ದಿಟ್ಟಗಾತಿಯು ಅವನನ್ನು ಎತ್ತಿಕೊಂಡು—ಅಪ್ಪಾಜಿ, ನನ್ನನ್ನು ಮದುವೆಯಾಗುತೀರ? ಎಂದು ನಗುತಾ ಹಾಸ್ಯಮಾಡಿದಳು. ಅವಳ ಹತ್ತಿರ ನಿಂತಿದ್ದ ಚೆಲುವರಸಿ ಎಂಬುವಳು—ನಾನು ಒಲ್ಲೆ, ಚೆಲುವರಸಿಯನ್ನು ಮದುವೆಯಾಗುತೇನೆ, ಎಂದು ಹೇಳಿ ಪುಟ್ಟುಸ್ವಾಮಿ, ಎಂಬದಾಗಿ ಹೇಳಿಕೊಟ್ಟಳು. ಇದನ್ನೆಲ್ಲಾ ಕೇಳಿ ಮದನನಿಗೆ ಮೈ ಉಬ್ಬಿ ಹೋಯಿತು. ಬಹು ಬಿಂಕದಿಂದ ತಾಯಿಯ ಸಮೀಪಕ್ಕೆ ಹೋಗಿ ಕೂತುಕೊಂಡನು.

ಮದನನೂ ಸುಮತಿಯೂ ಯಾವಾಗಲೂ ಒಟ್ಟಿಗೆ ಇರುತಿದ್ದರು. ರಾಜಕುಮಾರನು ಎಲ್ಲಿ ಹೋದಾಗ್ಯೂ ತನ್ನ ಸಂಗಾತಿಯಾದ ಸುಮತಿಯನ್ನು ಬಿಟ್ಟು ಹೋಗುತಿರಲಿಲ್ಲ: ಅವನು ಯಾವಾಗಲೂ ಜೊತೆಯಲ್ಲಿಯೇ ಇರುತಿದ್ದನು. ಅವನನ್ನು ಅದೇ ಪ್ರಕಾರ ರಾಣಿವಾಸಕ್ಕೂ ಮದನನು ಕರೆದುಕೊಂಡು ಬಂದನು. ಅಯ್ಯೋ! ಆ ಸ್ತ್ರೀ ಸಾನ್ನಿಧ್ಯದ ಮಂತ್ರ ಎಂಥಾದ್ದೋ! ಮದನನು ಒಳಕ್ಕೆ ಹೊಕ್ಕ ಕೂಡಲೆ ಸುಮತಿ

ಯನ್ನು ಮರೆತುಬಿಟ್ಟನು. ಯಾವ ಒಡವೆಯೂ ಇಲ್ಲದೆ, ಹೊದ್ದಿದ್ದ ಪಂಚೆ ಹೊರತು ಮತ್ತೆ ಯಾವ ದುಕೂಲವೂ ಇಲ್ಲದೆ ಇದ್ದ ಸುಮತಿಯು ಆ ಸಭೆಯಲ್ಲಿ ದೂರವಾಗಿಯೇ ಕೂತುಕೊಂಡನು.

ಆಗ ಒಬ್ಬ ಅರಸಿತ್ತಿಯು—ಈ ಗಂಡು ಯಾವುದೋ ಕಾಣೆ, ದೊಣ್ಣೆಯ ಹಾಗೆ ಒರಟು ಒರಟಾಗಿದೆ; ನಮ್ಮ ಪುಟ್ಟಸಾಮಿಗೆ ದೃಷ್ಟಿ ಪರಿಹಾರಾರ್ಥವಾಗಿ ಇದನ್ನು ತಂದು ಕೂರಿಸಿದಾರೆಯೊ ಕಾಣೆ? ಎನಲು: ಅವಳ ಪಕ್ಕದಲ್ಲಿ ಕೂತಿದ್ದ ಒಬ್ಬ ಸಿಸ್ತುಗಾತಿಯು—ಆ ಗಂಡಿಗೆ ಭೂಷಣವಾಗಿ ಒಂದು ಬಟ್ಟೆಗೆಕೂಡ ಗತಿ ಇಲ್ಲ; ಇದರ ಮೇಲೆ ಸುವರ್ಣವೈರಿ; ಇದನ್ನು ಏನೆಂದು ಇಲ್ಲಿಗೆ ಕರೆತಂದರೋ ಕಾಣವ್ವ, ಎನಲು: ಈ ಮಾತನ್ನು ಕಿವಿಗೊಟ್ಟು ಕೇಳುತಿದ್ದ ಒಬ್ಬ ದಿಟ್ಟಗಾತಿಯು—ಐ! ತೆಗೆ, ಯಾರೊ ಹಾರವರ ಹೈದ, ದಕ್ಷಿಣೆಗೆ ಬಂದಿದೆಯೋ ಏನೋ, ಏನಾದರೂ ಕೊಟ್ಟು ಕಳುಹಿಸವ್ವ ಎನಲು; ಹತ್ತಿರಿದ್ದ ಮಿಠಾರಿಯೊಬ್ಬಳು-ಈ ಹಾರವರ ಹುಡುಗ ನಮ್ಮ ಮದನನಿಗೆ ಸಂಗಾತಿಯೊ? ಎನಲು: ಕೊನೆಗೆ ಅಲ್ಲಿದ್ದ ಒಬ್ಬ ಹಳ್ಳೀ ಗಡಾವಣೆ ಗಾತಿಯು—ಏನಾ? ನಮ್ಮ ದೊರೆಮಕ್ಕಳ ಸಂಗಡ ಆಡಾಕೆ ಈ ಹಾರವರ ಹಕ್ಕಳಾ? ಅವರ ಹರಟೆ, ಅವರ ಚಾಳಿ ನಮ್ಮ ಹಕ್ಕಳಿಗೂ ಭರಾಕಿಲ್ಲವಾ? ಎಂದಳು. ಹೀಗೆ ಅಲ್ಲಿದ್ದ ಅರಸಿಯರಲ್ಲಿ ಒಬ್ಬೊಬ್ಬರು ಒಂದೊಂದು ರೀತಿಯಾಗಿ ಸುಮತಿಯನ್ನು ಆಡಿಕೊಂಡರು.

ಆಗ ಹಸೇಮೇಲೆ ಪಟ್ಟಭದ್ರೆಯಾಗಿ ಅಕ್ಕನ ಹತ್ತಿರ ಕೂತಿದ್ದ ಕಮಲಾಂಬಕಿಯು-ಅಕ್ಕಯ್ಯ, ಅಲ್ಲಿ ಕುಕ್ಕರಬಡದಿರುವ ಹಾರವರಹೈದ ಯಾವಾಗ ನೋಡಿದರೂ ನಮ್ಮ ಪುಟ್ಟಸಾಮಿಯ ಸಂಗಡಲೇ ಹಿಂದೆ ಹಿಂದೆಯೇ ಸುತ್ತುತಾನೆ. ಈ ಪಂಚೆ ಹೈಕಳ ಗೆಳೆತನ ನಮ್ಮ ಮಕ್ಕಳಿಗೆ ಒಳ್ಳೇದೆ? ಆ ಹುಡುಗರ ಸಂಗಡ ನಮ್ಮ ಹುಡುಗರು ಆಡುತಿದ್ದರೆ ನಮಗೆತಾನೆ ಮಾನವೆ? ಎಂದಳು.

ಮೀನಾಂಬಕಿ—ಆ ಹುಡುಗ ಬಹು ಬುದ್ಧಿಶಾಲಿಯಂತೆ, ವಿದ್ಯೆ ಚೆನ್ನಾಗಿ ಬರುವುದಂತೆ, ಅವನು ರಾಜಸನ್ನಿಧಾನದಲ್ಲಿ ಬಹು ಅಚ್ಚುಮೆಚ್ಚು. ಅಂಥಾ ಹುಡುಗರ ಜೊತೆಯಲ್ಲಿ ನಮ್ಮ ಪುಟ್ಟಸಾಮಿಯು

ಇದ್ದರೆ ಅವನಿಗೂ ಚೆನ್ನಾಗಿ ಬುದ್ಧಿ ಬರುವುದು ಎಂದು, ಮಗುವನ್ನು ಅವನ ಜೊತೆಗೆ ಹಾಕಿದಾರೆ.

ಕಮಲಾಂಬಕಿ— ಹೇಳಿಕೊಡುವ ಉಪಾಧ್ಯಾಯ ಜಾಣನಾದರೆ ಸರಿ. ಕಾಡಹುಡುಗರನ್ನು ದೊರೆಯಮಕ್ಕಳಸಂಗಡ ಸೇರಿಸಲೇಕೆ?

ಮಿಾನಾಂ— ಇನ್ನು ರಾಮಜೋಯಿಸನಿಗಿಂತ ಗಟ್ಟಿಗರು ಈ ಪ್ರಾಂತ್ಯದಲ್ಲಿ ಯಾರೂ ಇಲ್ಲ. ಹುಡುಗರಿಗೆ ವಿದ್ಯಾಕಲಿಸುವುದರಲ್ಲಿ ಅವನು ನಿಸ್ಸೀಮನಂತೆ. ಅವನೂ ಸಹಿತ, ಮದನನಿಗೆ ಸಹವಾಸ ಸರಿಯಾಗಿರಬೇಕು, ಈ ಸುಮತಿ ಎಂಬ ಹುಡುಗನನ್ನು ಅವನ ಜೊತೆಗೆ ಹಾಕಿದರೆ ತಾನು ಪಾಠವನ್ನು ಹೇಳುತೇನೆ; ಇಲ್ಲದಿದ್ದರೆ, ಒಲ್ಲೆ ಎಂದು ಹೇಳಿದ. ಅದಕ್ಕೆ ನಿಮ್ಮ ಭಾವಾಜಿಯವರು ಒಪ್ಪಿದರು.

ಕಮಲಾಂ—ಸುಮತಿಯೊ ಗಿಮತಿಯೊ, ನಾನು ಕೇಳಲಾರೆ; ನಾಯಿಯ ಹೆಸರು ಸಂಪಿಗೆ ಎಂದ ಹಾಗಿದೆ. ರಾಮಜೋಯಿಸ ಪಾಠ ಹೇಳುವುದಿಲ್ಲ ಅಂದರೆ, ಅವರ ಅಪ್ಪ ಇನ್ನೊಬ್ಬ ಬರುತಾನೆ. ಆ ಹಾರವರ ಹೈದನನ್ನು ನಮ್ಮ ಮಗುವಿನ ಜೊತೆಗೆ ಹಾಕಬೇಡವೆಂದರೆ ಆಯಿತು, ಹೇಳಿದಮಾತ ಅವ ಕೇಳಬೇಕು.

ಮಿಾನಾಂ— ನಾವು ಹಾಗೆಲ್ಲಾ ಹೇಳಿದರೆ ಕೇಳತಕ್ಕ ಬ್ರಾಹ್ಮಣ ನಲ್ಲ, ರಾಮಜೋಯಿಸ; ನಾವು ಆತನಿಗೆ ಒಂದು ಕಾಸನ್ನೂ ಕೊಡು ವುದಿಲ್ಲ. ನಮ್ಮಿಂದ ಆತನಿಗೆ ಯಾವ ಉಪಕಾರವೂ ಇಲ್ಲ. ಹೀಗಿರು ವಲ್ಲಿ ನಮ್ಮ ಮಾತನ್ನು ಆತ ಕೇಳಲಾರ.

ಕಮಲಾಂ— ಇದೂ ಅಲ್ಲದೆ, ಅಕ್ಕೈಯ್ಯ, ಕಾಕು ಎಂದು ಎರಡು ಅಕ್ಷರ ಬರೆದರೆ ಉಪಯೋಗವೇನು? ದೊರೆಮಕ್ಕಳು ಬಿಳೀಕಾಗದದ ಮೇಲೆ ಕರೀಕಪ್ಪನ್ನು ಹತ್ತಿಸಿ ಹಾರವರಹಾಗೆ ಹೊಟ್ಟೇಹೊರೆಯ ಬೇಕೊ? ಸಾಮು ಮಾಡುವುದು, ಕುಸ್ತಿಮಾಡುವುದು, ಪಟಾತಿರುಗಿಸು ವುದು, ಅಂಬು ಬಿಲ್ಲು ಹೊಡೆಯುವುದು, ಜನರಿಗೆಲ್ಲಾ ಭಯವನ್ನು ಹುಟ್ಟಿಸಿ, ರಾಜ್ಯವನ್ನು ಜೈಸಿ ದೊರೆತನಮಾಡುವುದು, ಪಗಡೆ ಚದು ರಂಗ ಮೊದಲಾದ ಆಟಗಳನ್ನಾಡುವುದು, ಅಷ್ಟರಮಟ್ಟಿಗೆ ನಮ್ಮ ಮಕ್ಕ ಳಿಗೆ ಬಂದರೆ ಸಾಕು.

ಮೀನಾಂಬಕಿ—ನಾನೂ ಹಾಗೆಯೇ ಅಂದೆ. ನನ್ನ ಮಾತು ಯಾವುದು ಸಾಗುತ್ತೆ? ಒಳ್ಳೇ ಪಂಡಿತನಾದವನೇ ಒಳ್ಳೇ ದೊರೆಯಾಗು ತಾನಂತೆ. ಬುದ್ಧಿಯುವರು ಆಗಾಗ್ಗೆ ಈ ಮಾತನಾಡುತ್ತಲೇ ಇರು ತಾರೆ. ಬ್ರಾಹ್ಮಣರ ಸಹವಾಸದಿಂದ ನಮ್ಮ ಮಗು ವೃದ್ಧಿಗೆ ಬರುತಾ ನಂತೆ. ಏನೋ, ಏನಾದರೂ ಮಾಡಿಕೊಳ್ಳಿ. ನಾನು ಆ ಮಾತಿಗೆ ಹೋಗುವದಿಲ್ಲ.

ಕಮಲಾಂ—ಮೊದಲಿನಿಂದಲೂ ಹಾರವರಿಗೂ ನಿಮ್ಮ ಮನೆಯವ ರಿಗೂ ಗಂಟು. ಭಾವಾಜಿಗೆ ಹಾರವರು ಏನೋ ಮಂತ್ರಹಾಕಿ ಕೈ ವಶಮಾಡಿಕೊಂಡಿದಾರೆ.

ಹೀಗೆ ಎಲ್ಲರೂ ಮನಸ್ಸುಬಂದಹಾಗೆ ಸುಮತಿಯನ್ನು ಆಡಿಕೊ ಳ್ಳುತಿದ್ದರೇ ಹೊರತು, ಒಬ್ಬರಾದರೂ ಅವನನ್ನು ಮಾತಾಡಿಸಲಿಲ್ಲ. ಆಗ ಆ ಗುಂಪಿನಲ್ಲಿ ಲಲಿತೆ ಎಂಬ ಒಬ್ಬ ಬಡ ಅರಸುಮಗಳು ಇದ್ದಳು. ಇವಳಿಗೆ ವರ್ಷವರೆಯಲ್ಲಿ ತಾಯಿ ಸತ್ತುಹೋದಳು. ಈ ತಬ್ಬಲಿ ಮಗುವನ್ನು ಅವಳ ಚಿಕ್ಕಪ್ಪ ಸಾಕಿದನು. ಸ್ತ್ರೀಧರ್ಮವಿಚಾರದಲ್ಲಿ ಆತನ ತಾತ್ಪರ್ಯವೇನೆಂದರೆ:—ಹೆಂಗಸು ಮನೇಕೆಲಸವನ್ನೆಲ್ಲಾ ಬೇಸರ ಪಡದೆ ಮಾಡಬೇಕು; ಮತ್ತೊಬ್ಬರಿಗೆ ಹೇಳಿಮಾಡಿಸುವ ಬಿಂಕ ಯಾಕೆ? ಪಾತಿವ್ರತ್ಯವಿದ್ದರೆ ಸಾಕು; ಒಡವೆ ಯಾಕೆ? ಹರಿದಬಟ್ಟೆ ಯನ್ನು ಹೊಲಿಯುವದಕ್ಕೆ ಬಂದರೆ ಆಯಿತು; ಕಸೂತಿ ಎಂಬ ಹೆಸರಿ ನಿಂದ ಬಟ್ಟೇ ತೂತುಮಾಡಿ ಹರಿಯುವ ನಾಜೋಕಿನಿಂದೇನು? ಹಾಡನ್ನು ರಾಗವಾಗಿಯೂ ಸ್ಪಷ್ಟವಾಗಿಯೂ ಹೇಳಿದರೆ ಚೆನ್ನ; ಸರಿ ಗಮ ಎಂದುಕೊಂಡು ತಲೆಯನ್ನು ಅಲ್ಲಾಡಿಸುತಾ ಹಾಡುವ ಸಂಗೀತ ವೆಂಬ ಸದ್ದುಮಾಡುವ ಶಾಸ್ತ್ರದಿಂದ ಆಗತಕ್ಕದ್ದೇನು? ನಿಶ್ಚಲವಾದ ಮನಸ್ಸು ಇರಬೇಕು; ಗೋಷಾ ಯಾಕೆ? ಬಡವರಿಗೆ ಉಪಕಾರ ಮಾಡುವುದು ಉತ್ತಮ; ಹೆಮ್ಮೆಯನ್ನು ತೋರಿಸಿದರೆ ಬಂದ ಭಾಗ್ಯ ವೇನು? ಇತರರನ್ನು ಕಂಡು ಸಂತೋಷಪಡುವುದು ಲೇಸು; ಅಸೂಯೆ ಎಂದಿಗೆ ಕಟ್ಟಬಂದೀತು? ಇದೇ ಮೊದಲಾದ ಅಭಿಪ್ರಾಯವುಳ್ಳಂಥಾ ಚಿಕ್ಕಪ್ಪನಾದ ಲಲಿತೆಯ ಪೋಷಕನು ಇಂಥಾ ಅಭಿಪ್ರಾಯಕ್ಕೆ ಅನು

ಗುಣವಾಗಿ ಮಗಳನ್ನು ಸಾಕಿದನು. ಇಂಥಾ ಗುಣಸಂಪತ್ತನ್ನು ಉಳ್ಳ ಲಲಿತೆಯು ಸುಮತಿ ಕೂತಿದ್ದ ಬಳಿಗೆ ಹೋಗಿ ಅವನನ್ನು ಆದರಿಸಿ ಅಲ್ಲಿದ್ದ ಕೆಲವು ಹಣ್ಣುಗಳನ್ನು ತೆಗೆದು ಅವನಿಗೆ ಕೊಡುವುದಕ್ಕೆ ಹೋದಳು. ಆಗ ಸುಮತಿಯು—ತಾಯಿ, ತಮಗೆ ಕೃತಜ್ಞನಾಗಿದೇನೆ; ಹಣ್ಣನ್ನಾಗಲಿ ಯಾವ ಪದಾರ್ಥವನ್ನಾಗಲಿ ಯಾರು ಕೊಟ್ಟರೂ ಸುಮ್ಮನೆ ತೆಗೆದುಕೊಳ್ಳಬಾರದೆಂದು ನಮ್ಮ ಗುರುಗಳ ಅಪ್ಪಣೆಯಾಗಿದೆ, ಎಂದನು. ಗೋಪಾಳದ ಬ್ರಾಹ್ಮಣರು, ಪಂಜೆಹಾರವರು, ಎಂದು ಹೇಳಿದವರ ಮುಖವೆಲ್ಲಾ ಸುಮತಿಯ ಗಾಂಭೀರ್ಯವನ್ನು ಕಂಡು ಚಿಕ್ಕದಾದವು. ಈ ಮಧ್ಯೆ ಮದನನು ಸುಮತಿಯನ್ನು ಮರೆತು ಬಿಟ್ಟನು. ಈ ಹೆಂಗಸರ ಹೆಬ್ಬುಬ್ಬಿನ ಮಾತಿನಿಂದ, ತಾನು ಎಷ್ಟೋ ಬುದ್ಧಿಶಾಲಿಯೆಂದು ತಿಳಿದುಕೊಂಡನು.

---

## ೧೮ ನೆ ಅಧ್ಯಾಯ

ಈ ಪ್ರಕಾರ ಮದನನ ಬುದ್ಧಿಯೆಲ್ಲಾ ಬದಲಾಯಿಸಿತು. ಇವನ ಚಿಕ್ಕಮ್ಮ ಕಮಲಾಂಬಿಕೆಯ ಮಗನಾದ ವಾನರರಾಜನೂ, ಮತ್ತು ಇವನ ಸೋದರಮಾವನ ಮಗನಾದ ತಮ್ಮನಾಯಕನೂ, ಓರಗೇ ಹುಡುಗರಾಗಿದ್ದರು. ಇವರು ಮದನನ ಸಂಗಡ ಸೇರಿ ಆಡುವುದಕ್ಕೆ ಆರಂಭಿಸಿದರು. ಈ ಹುಡುಗರಿಬ್ಬರೂ ಮನಸ್ಸು ಬಂದಕಡೆಗೆ ಮದನನನ್ನು ಕರೆದುಕೊಂಡು ಹೋಗುವುದು, ಸಿಕ್ಕಿದವರ ಮೇಲೆ ಕಲ್ಲೆಸೆಯುವುದು, ಸಿಕ್ಕಿದ ಮರವನ್ನು ಹತ್ತುವುದು, ಅಂಗಡಿಗಳಿಗೆ ಹೋಗಿ ಕೈಗೆ ಸಿಕ್ಕಿದ್ದನ್ನು ಎಳೆದುಕೊಂಡು ಬರುವುದು, ಬಡ ಹುಡುಗರು ಸಿಕ್ಕಿದರೆ ಅವರನ್ನು ಹಿಡಿದು ಹೊಡೆದು ಅವರು ಗೋಳಾಡುವ ವಿನೋದವನ್ನು ನೋಡುವುದು, ಕಂಡವರನ್ನು ಬೈದು ಅವರಮೇಲೆ ಉಗುಳುವುದು, ಇವೇ ಮೊದಲಾದ ಅನೇಕ ತುಂಟತನಗಳನ್ನು ಮಾಡುತಾ ಹೊರಟರು. ಒಂದೆರಡುಸಾರಿ ಈ ಸಂಗಾತಿಗಳಿಬ್ಬರೂ ಮದನನನ್ನು ಜೂಜಾಡುವುದಕ್ಕೆ ಎಳೆದುಕೊಂಡು ಹೋದರು. ಜೂಜುಗಾರರು ಇವರುಗಳಲ್ಲಿದ್ದ

ದುಡ್ಡನ್ನೂ ಮೈಮೇಲಿದ್ದ ಕೆಲವು ಒಡವೆಗಳನ್ನೂ ಜೂಜಾಡಿ ಕಸಿದು ಕೊಂಡು ಆಚೆಗೆ ಕಳುಹಿಸಿದರು. ಸುಮತಿಯು ಇವರ ಸಂಗಡಲೇ ಇರುತಾ ಮದನ ಕೆಟ್ಟ ಕೆಲಸಕ್ಕೆ ಹೋದಾಗೆಲ್ಲಾ ಅದು ಸರಿಯಲ್ಲವೆಂದು ಎಚ್ಚರವನ್ನು ಹೇಳುತಲೇ ಇದ್ದನು. ಆದರೆ ಮಂಗರಾಜ, ತಿಮ್ಮ ನಾಯಕ, ಇವರಿಬ್ಬರ ದುರ್ಬೋಧೆಯು ಬಲವಾಗಿದ್ದ ಕಾರಣ, ಸುಮತಿ ಹೇಳಿದ ಬುದ್ಧಿವಾದ ಯಾವುದೂ ಪ್ರಯೋಜನಕ್ಕೆ ಬರಲಿಲ್ಲ. ಬರುತ ಬರುತಾ ಮದನನಿಗೆ ಸುಮತಿಯ ಕಂಡರೆ ಆಗದಹಾಗಾಯಿತು. ಇದೂ ಅಲ್ಲದೆ ರಾಮುಜೋಯಿಸನ ಹೆಸರನ್ನು ಯಾವಾಗ ತೆಗೆದಾಗ್ಯೂ, ಮದ ನನು ಈ ತುಂಟ ಹುಡುಗರ ಸಂಗಡ ಸೇರಿಕೊಂಡು ಸ್ವಲ್ಪ ಅಸಡ್ಡೆಯಾಗಿ ಮಾತನಾಡುವುದು ಹೆಚ್ಚುತಾ ಬಂತು. ಇವರಿಬ್ಬರೂ ಸೇರಿ ಮದನನ ಬುದ್ಧಿಯನ್ನು ಕೆಡಿಸಿ ತಂದಿಟ್ಟ ಕೆಟ್ಟತನವನ್ನು ಕಂಡು ಸುಮತಿಯು ಅದು ಸರಿಯಲ್ಲವೆಂದು ಹೇಳಿದಾಗಲೆಲ್ಲಾ ಸುಮ್ಮನಿರೊ, ಹಾರವ, ನೀನೇನು ಬಲ್ಲೆ ? ಎಂದು ಅವನನ್ನು ಬಯ್ಯುತಿದ್ದುದಲ್ಲದೆ ಒಂದೆರಡು ಸಾರಿ ಮಂಗರಾಜನು ಅವನನ್ನು ಹಿಡಿದು ಹೊಡೆದನು. ಆದರೆ ಸುಮ ತಿಗೆ ಮದನನಮೇಲಿದ್ದ ಪ್ರೀತಿಯು ಇಂಥಾ ಪೆಟ್ಟನಿಂದ ಉಂಟಾದ ಕೋಪಕ್ಕಿಂತಲೂ ಮಿಂಚಿ ಇತ್ತು.

ಹೀಗಿರಲಾಗಿ ಆ ಊರಲ್ಲಿ ಭಾಗವತರ ಆಟದವರು ಹೊಸದಾಗಿ ಬಂದು ಒಂದು ದಿನ ಆಟವನ್ನು ಕಟ್ಟಿದರು. ಅದನ್ನು ನೋಡುವುದಕ್ಕೆ ಹೋಗೋಣವೆಂದು ಮಂಗರಾಜನೂ ತಿಮ್ಮನಾಯಕನೂ ಮದನನನ್ನು ಎಳೆದರು. ಸುಮತಿಯೂ ಮದನನ ಬೆನ್ನಹತ್ತಿಹೋದನು. ಆಟ ಕಟ್ಟಿತು. ಆಗ ಮದನನ ತುಂಟ ಸಂಗಾತಿಗಳಿಬ್ಬರೂ ಮನಸುಬಂದ ಹಾಗೆ ಕೂಗುವುದೂ, ಗಟ್ಟಿಯಾಗಿ ನಗುವುದೂ, ಹೀಗೆಲ್ಲಾ ಗದ್ದಲವನ್ನು ಮಾಡಿದ್ದರಿಂದ ಆಟಗಾರರು ಹಾಡುವ ಹಾಡನ್ನು ಯಾರೂ ಚೆನ್ನಾಗಿ ಕೇಳದಂತೆ ಆಯಿತು. ಮದನನೂ ಇವರಜೊತೆಗೆ ಸೇರಿಕೊಂಡು ಕೂಗುಮಾಡುತಿದ್ದನು. ಇವರು ಅರಸುಮಕ್ಕಳಾದ್ದರಿಂದ, ಇವರನ್ನು ಸ್ವಲ್ಪ ಮಾತನಾಡಿಸಿದರೂ ಏನುಬಂದೀತೋ ಎಂದು ಸುಮ್ಮನಿರುತಾ, ಇವರು ಮಾಡುತಿದ್ದ ಗದ್ದಲಕ್ಕೆ ಮನಸ್ಸಿನಲ್ಲಿಯೇ ಇವರನ್ನು ಬೈಯುತಾ

ಇದ್ದರು. ಸುಮತಿಗೆ ಈ ಹುಡುಗರ ನಡತೆ ಬಹಳ ಅಸಮಾಧಾನ ವನ್ನು ಉಂಟುಮಾಡಿತು. ಆದರೂ ಅವನು ಎಲ್ಲವನ್ನೂ ತಾಳಿ ಕೊಂಡು ಮುಖವನ್ನು ಗಂಟುಹಾಕಿಕೊಂಡು ಮಾತನಾಡದೆ ದೂರವಾಗಿ ಕೂತಿದ್ದನು.

ಈ ಮಧ್ಯೆ ಮಂಗರಾಜನು ಮದನನನ್ನು ಕುರಿತು—ಪುಟ್ಟ ಸಾಮಿ, ನಾವು ಈಗ ಒಂದು ದೊಂಬಿಮಾಡಿ ಆಟವನ್ನು ಕೆಡಿಸೋಣ, ಎಂದನು. ಈ ಮಾತಿನ ಅರ್ಥವು ಮದನನಿಗೆ ಗೊತ್ತಾಗಲಿಲ್ಲ. ಆದರೂ ಈ ಇಬ್ಬರು ಹೊಸಸ್ನೇಹಿತರ ಸ್ವಭಾವವು ಇವನ ಮನಸ್ಸಿನಲ್ಲಿ ಚೆನ್ನಾಗಿ ನಾಟಿದ್ದಕಾರಣ, ಮದನನು ಅವರ ಮಾತಿಗೆ ಒಪ್ಪಿ ಹಾಗೇ ಮಾಡೋಣವೆಂದನು. ಕೂಡಲೆ ಈ ಮೂರುಜನವೂ ಸೇರಿ ಕಿತ್ತಿಳೇ ಹಣ್ಣಿನಸಿಪ್ಪೆ, ಬಾಳೇಹಣ್ಣಿನಸಿಪ್ಪೆ, ಜಲ್ಲೀಕಲ್ಲು, ಮರಳು ಹೆಂಚಿಬಕ್ಕರೆ ಇವುಗಳನ್ನು ಕುಣಿಯುತ್ತಾ ಇದ್ದ ಆಟಗಾರರಮೇಲೆ ಎಸೆಯುತ್ತಾ, ಗಟ್ಟಿಯಾಗಿ ಕೂಗಿಕೊಳ್ಳುತ್ತಾ, ದೀಪಗಳನ್ನು ಆರಿಸುತ್ತಾ ಬಹಳ ಆಭಾಸವನ್ನು ಮಾಡಿದರು. ಇವರು ದೊರೆಮಕ್ಕಳೆಂದು ಯಾರೂ ಯಾವಮಾತನ್ನೂ ಆಡದೆ ಸುಮ್ಮನೆ ಬಾಯಿಮುಚ್ಚಿಕೊಂಡಿದ್ದರು.

ಆದರೆ ಈ ಕೆಟ್ಟತನವನ್ನು ಕಂಡು ಸುಮತಿಯು ಸಹಿಸಲಾರದೆ ಅವರನ್ನು ಕುರಿತು—ಅಯ್ಯಾ, ಇದು ಸರಿಯಲ್ಲ, ಎಂದನು.

ಮಂಗರಾಜ—ನೀನೇನು ಬಲ್ಲೆಯೋ, ಸುಮ್ಮನೆ ಕೂತಿರು. ಅವರ ಆಟಕ್ಕೆ ತಕ್ಕಹಾಗೆ ನಾವು ಚೇಷ್ಟೆಯನ್ನು ಮಾಡುತೇವೆ. ಚೆನ್ನಾಗಿ ಆಟವನ್ನು ಕಟ್ಟದೆ, ಯಾಕೆ ಇಂಥಾ ಗತಿಗೆಟ್ಟ ಆಟವನ್ನು ಇಲ್ಲಿ ಬಂದು ಆಡಬೇಕು ?

ಸುಮತಿ—ನಾನು ಇಂಥಾ ಆಟಗಳನ್ನು ಎಂದಿಗೂ ನೋಡಿರಲಿಲ್ಲ. ಇದೇ ಮೊದಲು. ಆದಕಾರಣ ಇದರ ವಿಷಯದಲ್ಲಿ ನಾನು ಏನೂ ಹೇಳಲಾರೆ. ಆದರೆ ಆಟ ಚೆನ್ನಾಗಿಲ್ಲದಿದ್ದರೆ ಸುಮ್ಮನೆ ಕೂತುಕೊಂಡು ಇರಬೇಕು. ಅಥವಾ ಎದ್ದು ಮನೆಗೆ ಹೊರಟುಹೋಗಬೇಕು. ಇದನ್ನು ಬಿಟ್ಟು ಇಂಥಾ ತುಂಟತನವನ್ನು ನಾವು ಮಾಡವುದು ಯೋಗ್ಯವಲ್ಲ. ಇಂಥಾ ದೊಡ್ಡ ಪಟ್ಟಣದಲ್ಲಿ ಆಟವನ್ನು ಕಟ್ಟಲು ಬಂದಿರತಕ್ಕವರು

ತಮ್ಮ ಯೋಗ್ಯತೆಯನ್ನೆಲ್ಲಾ ಪ್ರಾಮಾಣಿಕವಾಗಿ ತೋರಿಸಿಯಾರು, ಇನ್ನೂ ಚೆನ್ನಾಗಿ ಆಡುವುದಕ್ಕೆ ಅವರಿಗೆ ಬಂದಿದ್ದರೆ ಆಡದೆಬಿಡುತಿರಲಿಲ್ಲ. ಅವರಿಗೆ ಬಾರದ ಆಟವನ್ನು ಆಡಲಿಲ್ಲವೆಂದು ಆ ಬಡಜನರನ್ನು ಹೀಗೆ ಅಗಡುಮಾಡುವುದು ಯುಕ್ತವಲ್ಲ. ನಿಮ್ಮ ಮನೆಗೆ ಔತಣದ ಊಟಕ್ಕೆ ಬಂದ ಜನರು ಅಡಿಗೆ ಚೆನ್ನಾಗಿಲ್ಲವೆಂದು ನಿಮ್ಮ ಮನೆಯವರನ್ನು ಹಿಡಿದು ಬೈದು ಹೊಡೆಯುವುದಕ್ಕೆ ಹೇಗೆ ಬಾಧ್ಯರಲ್ಲವೊ, ಹಾಗೆಯೇ ನೀವು ಈ ಆಟಗಾರರಿಗೆ ಅವಮಾನಮಾಡಲು ಬಾಧ್ಯರಲ್ಲ.

ಈ ಪ್ರಕಾರ ಈ ಹುಡುಗರಲ್ಲಿ ಚರ್ಚೆಹುಟ್ಟಿತು. ಮಂಗರಾಜನು ಸುಮತಿಯ ಮಾತನ್ನು ಕೇಳಿ ಅವನನ್ನು ಮನಸ್ಸುಬಂದಹಾಗೆ ಬೈದನು. ಅವರ ಸಮೀಪದಲ್ಲಿದ್ದ ಒಬ್ಬ ವಿದೇಶಿಯು ಇವರು ಇಂಥವರೆಂದು ತಿಳಿಯದೆ ಸುಮತಿ ಹೇಳಿದ ಬುದ್ಧಿವಾದ ಸರಿಯಾದ್ದೆಂದು ಹೇಳಿದನು. ಇಷ್ಟಕ್ಕೇ ಮಂಗರಾಜನಿಗೆ ಆಗ್ರಹಬಂತು. ಅವನಿಗೂ ಮಂಗನಿಗೂ ಜಗಳಹತ್ತಲು, ತಾನು ದೊರೆಮಗನೆಂಬ ಅಹಂಕಾರದಿಂದ ಮಂಗನು ಆ ವಿದೇಶಿಯ ಕೆನ್ನೆಯಮೇಲೆ ಒಂದೇಟನ್ನು ಹೊಡೆದನು. ಕೂಡಲೆ ಆ ವಿದೇಶಿಯು ಮುಖನೋಡದೆ ಮಂಗನಿಗೆ ದಿಂದಿರಗನ ಹಣ್ಣನ್ನು ಕೊಡಲು, ಈ ರಾಜಪುತ್ರನು ಬಾಯನ್ನು ಹೆಚ್ಚುಮಾಡಿದನು. ಅದನ್ನು ಸಹಿಸಲಾರದೆ ಈ ಹುಡುಗನಿಗೆ ತಕ್ಕದ್ದನ್ನು ಮಾಡಬೇಕೆಂದು ಆ ವಿದೇಶದವನು ಮಂಗನನ್ನು ಎತ್ತಿ ತನ್ನ ಕಾಲಕೆಳಗೆ ಹಾಕಿಕೊಂಡು ಅವನನ್ನು ತುಳಿಯುವುದಕ್ಕೆ ಮೊದಲುಮಾಡಿದನು. ಮಂಗರಾಜನಿಗೆ ಯಾತನೆ ಬಲವಾಯಿತು. ಏನುಮಾಡಿದರೂ ಎಷ್ಟು ಅರಚಿಕೊಂಡರೂ ಆ ಎದುರಾಳಿಯು ಬಿಡದೆ ತುಳಿಯುತ್ತಾ ಬಂದನು. ತಿಮ್ಮನಾಯಕನೂ ಮದನನೂ ತಮ್ಮ ಸಂಗಾತಿಯನ್ನು ಬಿಡಬೇಕೆಂದು ಎಷ್ಟು ಹೇಳಿದಾಗ್ಯೂ—ಆದ್ದೆಲ್ಲಾ ಆಗಲಿ, ನಾನು ಈ ತುಂಟ ಹುಡುಗನಿಗೆ ಬುದ್ಧಿಯನ್ನು ಕಲಿಸಿಯೇಬಿಡುತೇನೆ, ಎಂದನೇಹೊರತು, ಆ ಮನುಷ್ಯನು ಅವನನ್ನು ಬಿಡಲಿಲ್ಲ. ಕೊನೆಗೆ ಸುಮತಿಯು ಕನಿಕರದಿಂದ—ಅಯ್ಯಾ, ಈಗ್ಗೆ ಬಿಟ್ಟುಬಿಡು; ಈಗ ಆದ ಶಿಕ್ಷೆ ಸಾಕು, ಎಂದು ಕೇಳಿಕೊಳ್ಳಲು, ಆ ಪುರುಷನು ನಿನ್ನ ಒಡವೆಯನ್ನೂ ಶೃಂಗಾರವನ್ನೂ ನೋಡಿ

ಬಿಡುವುದಿಲ್ಲ. ಬುದ್ಧಿಶಾಲಿಯಾದ ಆ ಹುಡುಗ (ಸುಮತಿ) ಕೇಳಿ ಕೊಂಡದ್ದರಿಂದ ಬಿಟ್ಟಿದೇನೆ; ಇನ್ನು ತುಂಟಾಟವನ್ನು ಬಿಟ್ಟು ಬುದ್ಧಿ ಯನ್ನು ಕಲಿತುಕೊ, ಅರಸುಮಕ್ಕಳು ಇಷ್ಟು ಅವಿವೇಕದಿಂದ ನಡೆದು ಕೊಳ್ಳುತಾರೆಂದು ನಾನು ಯೋಚಿಸಿರಲಿಲ್ಲ, ಎಂದು ಹೇಳಿ ಆ ಮಂಗ ನನ್ನು ಬಿಟ್ಟುಕಳುಹಿಸಿದನು

ಆಗ ಮಂಗರಾಜನು ಮನೆಯಹತ್ತಿರ ಬರುತಬರುತಾ, ಅವನಿಗೆ ಧೈರ್ಯಹೆಚ್ಚುತಾಬಂತು. ಮಂಗನು ತನ್ನ ಜೊತೆಗಾರರನ್ನು ಕುರಿತು —ನಾಯಿ ಹೊಡೆಯುವದಕ್ಕೆ ಬಣ್ಣದ ಕೋಲೆ? ಆ ಅಲ್ಪನಸಂಗಡ ನನಗೇನು ಎಂದು ನಾನು ಸುಮ್ಮನಿದ್ದೆ; ಇಲ್ಲದಿದ್ದರೆ ಅವನ ಆಟವನ್ನು ತಿಳಿಸುತಿದ್ದೆ, ಹೀಗೆಂದು ಹೇಳಿದನು. ಇವರೆಲ್ಲಾ ಮನೆಗೆ ಬಂದಮೇಲೆ ಹುಡುಗರಸಂಗಡ ಮಾತನಾಡುತಾ ಅನಂಗರಾಜನು ಸುಮತಿಯನ್ನು ಕುರಿತು—ಅಯ್ಯಾ, ಮಗು, ನೀನು ಆಟವನ್ನು ನೋಡಿಕೊಂಡು ಬಂದೆ ಯಲ್ಲ; ಅದು ಹೇಗಿತ್ತು ? ಎಂದನು. ಅದಕ್ಕೆ ಸುಮತಿಯು—ಬುದ್ಧಿ, ಇಂಥಾ ಆಟಗಳನ್ನು ನಾನು ನೋಡುವುದಕ್ಕೆ ಇದೇ ಮೊದಲು, ಆದ್ದ ರಿಂದ ಆಡಿದ್ದು ಹೀಗಿತ್ತು ಎಂದು ಹೇಳುವುದಕ್ಕೆ ನನ್ನ ಕೈಲಾಗದು. ಆದರೆ ಆ ಆಟದಲ್ಲಿ ಉದ್ದಕ್ಕೂ ಮೋಸ, ಕಳ್ಳತನ, ಕಾಪಟ್ಯ, ಸುಳ್ಳು, ಇದೇ ತುಂಬಿತ್ತು. ಇಂಥಾದ್ದನ್ನು ನೋಡುವುದಕ್ಕೆ ದೊಡ್ಡವರೆಲ್ಲಾ ಹೋಗಿ ತಮ್ಮ ಕಾಲವನ್ನು ವ್ಯರ್ಥವಾಗಿ ಕಳೆಯುವದಲ್ಲದೆ, ಅದನ್ನು ನೋಡುವುದಕ್ಕೆ ತಮ್ಮ ಮಕ್ಕಳುಗಳನ್ನೂ ಕಳುಹಿಸಿ, ಆ ಹುಡುಗರೂ ಕೆಟ್ಟತನವನ್ನು ಕಲಿತುಕೊಳ್ಳುವ ಹಾಗೆ ಮಾಡುತಾರಲ್ಲಾ ಎಂದು ನನಗೆ ಆಶ್ಚರ್ಯವಾಗಿದೆ, ಎಂದು ನುಡಿದನು. ಸುಮತಿಯು ಆಡಿದಮಾತು ನಿಶ್ಚಯವೆಂದು ಅನಂಗರಾಜನು ಹೇಳಿ ನಕ್ಕನು. ಆದರೆ ಈ ಹುಡು ಗನ ಮಾತು ಅಲ್ಲಿದ್ದ ರಾಜಸ್ತ್ರೀಯರಿಗೆ ಸರಿಬೀಳಲಿಲ್ಲ. ಆದರೂ ದೊರೆ ಆಡಿದ ಮಾತಿಗೆ ಪ್ರತಿಯಾಗಿ ಆಡದೆ ಇವರೆಲ್ಲರೂ ಸುಮ್ಮನಿರಬೇಕಾಗಿ ಬಂತು.

ಮಾರನೇ ದಿನ ಅರಮನೆಯಲ್ಲಿ ಜೂಜನ್ನು ಇಟ್ಟು ಪಗಡೆಯಾಡು ವುದೆಂದು ಗೊತ್ತಾಯಿತು. ಆ ಆಟಕ್ಕೆ ಹುಡುಗರೂ ರಾಣಿವಾಸದಲ್ಲಿ

ರುವ ಅರಸಿತ್ತಿಯರೂ ಸೇರಿದರು. ಒಬ್ಬೊಬ್ಬರಾಗಿ ಆಡುತ್ತಾ ವಿಶೇಷ ವಾಗಿ ದ್ರವ್ಯವನ್ನು ಸೋಲುತ್ತಾ ಬಂದರು. ಈ ಆಟಕ್ಕೆ ಲಲಿತೆ ಎಂಬ ಅರಸು ಮಗಳು, ಸುಮತಿ, ಇವರಿಬ್ಬರುಮಾತ್ರ ಹೋಗಲಿಲ್ಲ. ಕೊನೆಗೆ ಇವರ ಸರದಿಬಂತು. ತನಗೆ ಆಟ ಬರುವುದೇ ಇಲ್ಲವೆಂತಲೂ, ಅಥವಾ ಆಡಿದಾಗ್ಯೂ ತಮ್ಮ ಚಿಕ್ಕಪ್ಪ ಸುಮ್ಮನೇ ಇರಲಾರನೆಂತಲೂ, ಲಲಿತೆಯು ತಪ್ಪಿಸಿಕೊಂಡಳು. ಆದರೆ ಸುಮತಿಗೆ ಇತರರ ಬಲವಂತ ಹೆಚ್ಚಾ ಯಿತು. ಮಂಗರಾಜನಂತೂ ಮನಸ್ಸು ಬಂದಹಾಗೆ ಹರಟಿ—ಏನೊ ಹಾರುವ, ನಾವೆಲ್ಲಾ ಸೋಲುವದನ್ನು ನೋಡಿಕೊಂಡಿದ್ದು, ನೀನು ತಂದ ಹಣವನ್ನು ಮಾತ್ರ ಕಟ್ಟಿಕೊಂಡು ಹೋಗುತೀಯಾ? ನೀನು ಆಡಲೇಬೇಕು. ಇಲ್ಲದಿದ್ದರೆ, ಬಿಡುವುದಿಲ್ಲ, ಎಂದನು. ಅದಕ್ಕೆ ಸುಮ ತಿಯು—ನನ್ನ ಹತ್ತಿರ ಒಂದು ಕಾಸೂ ಇಲ್ಲ, ನನಗೆ ಆಟವೂ ಬಾರದು, ನಾನು ಆಡುವುದೂ ಇಲ್ಲ, ಎಂದು ಹೇಳಿದನು. ಆಗ ಅಲ್ಲಿದ್ದ ಕಮ ಲಾಂಬಕೀದೇವಿಯೇ ಮೊದಲಾದ ಅರಸಿತ್ತಿಯರಿಗೆ ಸುಮತಿಯನ್ನು ಗೇಲೀಮಾಡಲು ಇದು ಒಂದು ಸಮಯ ಸಿಕ್ಕಿತು. ಪಂಗೂಳಿ ಹಾರು ವರ ಹೈದನಿಗೆ ನಮ್ಮ ಸಭೆಯಲ್ಲಿ ಆಟವನ್ನು ಹರಟೆ ಗೆಲ್ಲುವುದಕ್ಕೆ ಬಂದೀತೆ? ತೆಗೆ. ನಾನು ನೋಡಲಾರೆ! ಎಂದು ಆಡಿಕೊಂಡರು. ಮತ್ತು ಲಲಿತೆಯನ್ನು ಕುರಿತು—ಏನೇ ಬಿನ್ನಾಣಿ, ಆ ಹೈದ ಒಂದು ಪದಾರ್ಥವೆಂದು ನೀನು ಮಾತನಾಡಿಸಿಕೊಂಡು ಹೋಗುತೀಯಲ್ಲ! ಈಗ ಅವನ ಬಣ್ಣ ಏನಾಯಿತು, ನೋಡಿದೆಯಾ? ಎಂದು ಹಂಗಿಸಿದರು.

ಈ ಮಾತು ಲಲಿತೆ ಸಹಿಸಲಿಲ್ಲ. ಅವಳು—ಅಪ್ಪಾ ಸುಮತಿ, ಇವರ ಹಂಗಣೆಯನ್ನು ನಾನು ಕೇಳಲಾರೆ, ಏನಾದರೂ ಆಗಲಿ. ನಾನು ನಿನಗೆ ಹಣವನ್ನು ಕೊಡುತೇನೆ. ನೀನು ಪಗಡೇ ಆಡು, ಎಂದಳು. ಈ ಮಾತಿಗೆ ಸುಮತಿಯು—ತಾಯಿ, ಎಂದಿಗೂ ಜೂಜಾ ಡಬಾರದೆಂದು ನಮ್ಮ ಗುರುಗಳು ಹೇಳಿದಾರೆ. ಇದಲ್ಲದೆ ಇತರರಲ್ಲಿ ಸುಮ್ಮನೆ ಹಣವನ್ನು ತೆಗೆದುಕೊಳ್ಳಬಾರದೆಂದು ಹೇಳಿದಾರೆ. ಅದಾ ಗ್ಯೂ ನಿಮ್ಮ ಬಲವಂತ ಹೆಚ್ಚಾದಕಾರಣ ನಾನು ಆಡುತೇನೆ. ಗೆಲ್ಲಲ್ಲಿ, ಸೋಲಲಿ, ಅದರ ಆದಾಯನಷ್ಟ ನಮಗೆ ಬೇಡ, ಎಂದು ಹೇಳಿ

ಆಟಕ್ಕೆ ಮೊದಲುಮಾಡಿದನು. ಸ್ವಲ್ಪ ಹೊತ್ತಿನಲ್ಲಿ ಆಟದ ಕ್ರಮವನ್ನು ತಿಳಿದು, ಆಡುತಾ ಅಲ್ಲಿದ್ದವರೆಲ್ಲರನ್ನೂ ಸೋಲಿಸಿದನು. ಎಲ್ಲರೂ ತಂದ ಹಣವೂ ಇವನದಾಯಿತು. ಆಗ ಈ ಹುಡುಗನು ಹತ್ತಿರಿದ್ದ ಲಲಿತೆಯ ಮುಂದೆ ಆ ಹಣವನ್ನೆಲ್ಲಾ ಸುರಿದು, ಅದನ್ನು ತೆಗೆದುಕೊಳ್ಳು ವಂತೆ ಹೇಳಿದನು. ಅವಳು ಅದರಲ್ಲಿ ಸ್ವಲ್ಪವನ್ನಾದರೂ ಸ್ವೀಕರಿ ಸೆಂದು ಬೇಡಿಕೊಂಡದ್ದರಿಂದ, ಸುಮತಿಯು ಅವಳ ಮಾತನ್ನು ನಡೆಸಿ ಕೊಟ್ಟು, ಅವಳು ಮೆಚ್ಚುವರೀತಿಯಲ್ಲಿ ಆ ಹಣಕ್ಕೆ ಸದ್ವಿನಿ ಯೋಗವನ್ನು ಮಾಡುತೇನೆಂದು ಹೇಳಿದನು. ಮಾರನೇ ದಿನ ಬೆಳಗ್ಗೆ ಹೊತ್ತಿಗೆಮುಂಚೆ ಎದ್ದು ಹೊರಕ್ಕೆ ಹೋಗಿ ಆ ದಿನ ಸಾಯಂಕಾಲ ಹಿಂತಿರುಗಿ ಬಂದು ಅರಮನೆಗೆ ಸೇರಿದನು. ಅರೆಗಳಿಗೆಯೂ ಸುಮತಿ ಯನ್ನು ಬಿಟ್ಟು ಇರದೇ ಇದ್ದ ಮದನನು ಇವನನ್ನು ಮರೆತೇಬಿಟ್ಟನು. ಇವ ಎಲ್ಲಿ, ಎಂದು ಯಾರೂ ವಿಚಾರಮಾಡಲೇ ಇಲ್ಲ. ಅನಂಗರಾಜ ಮಾತ್ರ ಒಂದುಸಾರಿ ಕೇಳಿ ಸುಮ್ಮನಾದನು.

ಆದರೆ ಸಾಯಂಕಾಲ ಸುಮತಿಯು ಮನೆಗೆ ಬರಲು, ಲಲಿತೆಯು ನೀನು ಎಲ್ಲಿ ಹೋಗಿದ್ದೆಯಪ್ಪಾ? ಬೆಳಗಿನಿಂದಲೂ ನಿನ್ನನ್ನು ಕಾಣಲಿಲ್ಲ ವಲ್ಲಾ, ಎಂದಳು. ಅದಕ್ಕೆ ಸುಮತಿಯು ಹೇಳಿದ್ದೇನೆಂದರೆ—ತಾಯಿ, ನಿನ್ನೆ ನೀವು ಕೊಟ್ಟ ಹಣವನ್ನು ವಿನಿಯೋಗಿಸುವುದಕ್ಕಾಗಿ ಹೋಗಿದ್ದೆ. ಇಲ್ಲಿಗೆ ಎರಡು ಹರದಾರಿಯಲ್ಲಿ ಒಂದು ಗ್ರಾಮವಿದೆ. ಅಲ್ಲಿ ಒಬ್ಬ ಶೂದ್ರಿತಿ ಇದಾಳೆ. ಅವಳು ಬಾಲ್ಯದಲ್ಲಿ ನನ್ನನ್ನು ಎತ್ತಿ ಆಡಿಸುತಿದ್ದ ವಳು. ಅವಳ ತಂದೆತಾಯಿಗಳಿಬ್ಬರೂ ಬಹಳ ಮುದುಕರು. ಅವರಿಗೆ ಇವಳು ಹೊರತು ಇನ್ನು ಯಾರೂ ಮಕ್ಕಳಿಲ್ಲ. ಈ ಮುದು ಕರ ಪೋಷಣೆಗೆ ಯಾರೂ ಇಲ್ಲದೇ ಹೋದಾರಲ್ಲಾ, ಎಂಬ ಭಯ ದಿಂದಲೇ ಇವಳು ಮದುವೆಮಾಡಿಕೊಳ್ಳಲಿಲ್ಲ. ಮೊದಲಿನಿಂದಲೂ ಇತ ರರ ಮನೆಯಲ್ಲಿ ದುಡಿದು ಮಾತಾಪಿತೃಗಳನ್ನು ಸಂರಕ್ಷಣೆ ಮಾಡು ತಿದ್ದಳು. ಈಗ ಅವಳಿಗೂ ಮುಪ್ಪು ಬಂತು. ಎಪ್ಪತ್ತು ವರುಷದ ಸಮಯವಾಯಿತು. ಚಾಕರಿ ಮಾಡಲಾರಳು. ಹೊಟ್ಟೆಗಿಲ್ಲದೆ ಬಹು ಸಂಕಟಪಡುತಿದಾಳೆ. ಆದಕಾರಣ ಆ ಬಡವಳಿಗೆ ಸಹಾಯಮಾಡ

ಬೇಕೆಂದು, ಅಲ್ಲಿಗೆ ಹೋಗಿ, ನೀವು ಕೊಟ್ಟ ಹಣವನ್ನು ನಿಮ್ಮ ಹೆಸರಿನ ಮೇಲೇ ಅವಳಿಗೆ ಕೊಟ್ಟು ಜೀವನಾ ಮಾಡಿಕೊಳ್ಳುವಂತೆ ಹೇಳಿ ಬಂದೆ, ಹೀಗೆಂದು ಸುಮತಿ ಹೇಳಿದನು. ಅದಕ್ಕೆ ಲಲಿತೆಯು—ಅಯ್ಯ, ನೀನು ಮಾಡಿದ ಕೆಲಸ ಉತ್ತಮವಾದ್ದು. ದೀನರಾದವರಿಗೆ ಉಪಕಾರ ಮಾಡುವುದಕ್ಕಿಂತಲೂ ಇನ್ನು ಧರ್ಮವಿಲ್ಲ. ಆದರೆ ಆ ಹಣವನ್ನು ನಿನ್ನ ಹೆಸರಿನಮೇಲೆಯೇ ಕೊಡಬೇಕಾಗಿತ್ತು, ಎಂದಳು. ಇದಕ್ಕೆ ಸುಮತಿಯು ಅಮ್ಮಯ್ಯ, ಆ ಹಣ ನನ್ನದಲ್ಲ, ತಾವು ಕೊಟ್ಟದ್ದು. ಆದ್ದರಿಂದ ಧರ್ಮ ತಮಗೇ ಹೊರತು ನನಗಲ್ಲ. ಅದನ್ನು ಹಾಗೆ ನಾನು ಉಪಯೋಗಿಸಿದರೆ. ನೀವು ಸಂತೋಷಪಟ್ಟೀರಿ, ಎಂದು ತಿಳಿದೇ ನಾನು ಹಾಗೆ ವೆಚ್ಚಮಾಡಿದೆ. ಈ ಅರಮನೆಯಲ್ಲಿ ಎಷ್ಟೋ ಜನ ಅರಸು ಮಕ್ಕಳು ಬಂದು ನೆರೆದಿದ್ದಾರೆ. ಸಾಲವನ್ನಾದರೂ ಮಾಡಿ ಜೂಜಾಡಿ ಕೆಡುತ್ತಾರೆ. ಆ ಹಣಕ್ಕೆಲ್ಲಾ ಸರಿಯಾದ ಉಪಯೋಗವನ್ನು ಹುಡುಕಿ, ಬಡವರಿಗೆ ಸಹಾಯಮಾಡಿದರೆ ಎಷ್ಟು ಚೆನ್ನಾಗಿದ್ದೀತು! ಇದನ್ನು ಬಿಟ್ಟು, ತಮ್ಮ ಪೋಷಣೆಯಲ್ಲಿಯೇ ನಿರತರಾಗಿದ್ದಾರೆ. ಇವರಿಗೆ ಎಲ್ಲವೂ ಅನುಕೂಲವಾಗಿರಬೇಕು. ಬಿಸಿಲಾಗದು. ಚಳಿಯಾಗದು. ನಾಲ್ಕುಮಾರು ದೂರ ನಡೆಯುವುದಕ್ಕಾಗದು. ಅರಘಳಿಗೆಯೂ ಊಟ ಹೊತ್ತುಹೋಗಕೂಡದು. ಹೀಗೆಲ್ಲಾ ಮಾಡಿಕೊಂಡು ದೇಹಪೋಷಣೆಯನ್ನು ಬಹು ಅಕ್ಕರೆಯಿಂದ ಮಾಡಿಕೊಳ್ಳುತಾರೆ. ಇವರಿಗೆ ಸ್ವಲ್ಪ ನೆಗಡಿ ಬಂದರೆ ಹತ್ತುಜನ ವೈದ್ಯರು ಮನೆಗೆ ಸುತ್ತುತಲೇ ಇರಬೇಕು. ಇತರ ಬಡಜನರು ಮಾತ್ರ ಕಷ್ಟಪಟ್ಟು ಸಾಯಬೇಕು. ಬಡವರು ಎಷ್ಟು ಶ್ರಮಪಟ್ಟರೂ ಈ ಹಣವಂತರ ಮನಸ್ಸಿಗೆ ಅದು ಬರುವುದೇ ಇಲ್ಲ. ಮನುಷ್ಯ ಮನುಷ್ಯರಿಗೆ ಇಷ್ಟು ವ್ಯತ್ಯಾಸ ಉಂಟೆ? ಸ್ವಲ್ಪವೂ ದಯಾರಸವಿಲ್ಲದಿದ್ದರೆ, ಬಡವರು ಇವರಲ್ಲಿ ಸೇರಿಯಾರೆ? ಬೇಕಾದ ಒಡವೆಗಳನ್ನು ಹೇರಿಕೊಂಡು, ಉಡುಪನ್ನು ಹಾಕಿಕೊಂಡು, ಮುಖವನ್ನೂ ಮೈಯನ್ನೂ, ಕೈಕಾಲುಗಳನ್ನೂ ಕುಣಿಸುತಾ, ಇಲ್ಲದ ಅಭಿನಯವನ್ನು ಮಾಡುತಾ, ಡಂಭದಿಂದ ಮೆರೆಯುತಾರೆ. ಈ ಐಶ್ವರ್ಯವೆಲ್ಲಾ ಬಡವರ ಮನೆ ಹಾಳಾಗಿ ಅರಮನೆಗೆ ಬಂದದ್ದೇ ಹೊರತು, ಕಷ್ಟಪಟ್ಟು ಇವರು

ಹೊಸದಾಗಿ ಸಂಪಾದಿಸಲಿಲ್ಲ. ಕೃಷಿಮಾಡಿ ಅದರ ಫಲವನ್ನು ಅನುಭವಿಸುತಾ ಬಡವರಿಗೆ ಸಹಾಯಮಾಡುತಾ, ಯಾರಿಗೂ ಕೇಡನ್ನುಂಟುಮಾಡದೆ, ಇರಬೇಕೆಂದು ನಮ್ಮ ಗುರುಗಳು ಹೇಳಿದಾರೆ. ಆದರೆ ಈ ಹಣಗಾರರ ತಾತ್ಪರ್ಯ ಹಾಗಿಲ್ಲ. ತಾವು ಎಷ್ಟು ಕೆಲಸಮಾಡದೇ ಇದ್ದರೆ, ಅಷ್ಟು ದೊಡ್ಡವರು; ತಮ್ಮ ಬಳಿಯಲ್ಲಿ ಚಾಕರರು ಎಷ್ಟು ಹೆಚ್ಚಾಗಿದ್ದರೆ, ತಾವು ಅಷ್ಟು ದೊಡ್ಡವರು; ಲೋಕವನ್ನು ತಾವು ಎಷ್ಟು ಬಾಧಿಸಿ, ಬಡವರನ್ನು ಹಾಳುಮಾಡಿ, ತಾವು ಡಂಭಮಾಡಿದರೆ, ತಾವು ಅಷ್ಟು ದೊಡ್ಡವರು,—ಹೀಗೆಂದು ತಿಳಿದು ಇದಾರೆ. ಕಾಪಟ್ಯವು ಎಷ್ಟು ಹೆಚ್ಚಾಗಿದ್ದರೆ ಅಷ್ಟು ಮರ್ಯಾದೆ ಎಂತಲೂ, ಇತರರನ್ನು ಎಷ್ಟು ಮೋಸಮಾಡಿದರೆ, ಅದು ಅಷ್ಟು ಯುಕ್ತಿ ಎಂತಲೂ, ತಿಳಿದುಕೊಂಡಿದಾರೆ. ಇವರ ಅಹಂಕಾರದ ಹೊಗರಿನಲ್ಲಿ ಒಳ್ಳೇಮಾತು ಕಿವಿಗೇ ಬೀಳುವುದಿಲ್ಲ. ಹೀಗೆಂದು ಹೇಳಿದನು. ಈ ಮಾತನ್ನು ಕೇಳಿ ಲಲಿತೆಯು ಸುಮತಿಯ ಬುದ್ಧಿಯನ್ನು ಕೊಂಡಾಡುತಾ ಅಪ್ಪಾ ನೀನು ಹೇಳಿದ್ದೆಲ್ಲಾ ನಿಜ. ಇಂಥಾ ಒಳ್ಳೇಮಾತು ಒಳ್ಳೇ ಮನಸ್ಸುಳ್ಳವರಿಗೆ ಹೊರತು ಇತರರಿಗೆ ಬರುವುದಿಲ್ಲ. ಐಶ್ವರ್ಯಮದದಿಂದ ಜನರು ಬಡವರಿಗೆ ಮೋಸಮಾಡುವುದು ನಿಜ. ಆದರೆ ಹುಲೀ ಚಕ್ಕಳವನ್ನು ಹೊದ್ದು ಗದ್ದೆಯಲ್ಲಿ ಮೆಯ್ಯುವುದಕ್ಕೆ ಹೋದ ಕತ್ತೆಯು ತನ್ನ ಕೂಗಿನಿಂದಲೇ ತಾನು ಕೆಟ್ಟ ಹಾಗೆ ಈ ದುಷ್ಟರೂ ಸಹ ತಮ್ಮ ಅವಿವೇಕದಿಂದಲೇ ತಾವು ಕೆಡುತಾರೆಂದು ಹೇಳಿದಳು.

---

## ೧೯ ನೆ ಅಧ್ಯಾಯ

ಹೀಗೆ ಆ ದಿನ ಕಳೆದುಹೋಯಿತು. ಮಾರನೇ ದಿನ ಮದನನೂ ಅವನ ಹೊಸ ಸ್ನೇಹಿತರೂ ಉದ್ಯಾನವನಕ್ಕೆ ಹೋಗಿ ಆಟವನ್ನು ಆಡಿಕೊಂಡು ಬರಬೇಕೆಂದು ಹೊರಟರು. ಅವರ ಸಂಗಡ ಲಲಿತೆಯೇ ಮೊದಲಾದ ಒಬ್ಬಿಬ್ಬರು ಹೆಣ್ಣುಹುಡುಗರೂ ಸುಮತಿಯೂ ಹೋದರು. ಎಲ್ಲರೂ ಹೊಗೇಬತ್ತಿಯನ್ನು ಸೇದುವುದಕ್ಕೆ ಮೊದಲು ಮಾಡಿದರು. ಮಂಗರಾಜನು ಒಂದು ಸುತ್ತನ್ನು ಸುತ್ತಿ ಬೆಂಕಿಹತ್ತಿಸಿ, ನೀನೂ

ಅದನ್ನು ಸೇದಬೇಕೆಂದು ಲಲಿತೆಗೆ ಬಲವಂತಮಾಡಿ, ಬತ್ತಿಯನ್ನು ಒಂದು ಸಾರಿ ಸೇದಿಸಿದನು. ಆ ಕ್ಷಣವೇ ಅವಳಿಗೆ ತಲೇಸುತ್ತಿ ವಮನ ವಾಗುವ ಹಾಗಾಯಿತು. ಆ ವನದ ಒಂದು ಕಡೆ ಓಡಾಡುತಿದ್ದ ಸುಮ ತಿಯು ಬಂದುನೋಡಿ—ಏಕೆ ಹೀಗೆಮಾಡಿದೆ ಎಂದು ಮಂಗರಸನನ್ನು ಕೇಳಲು, ಅವನು ನೀನೇನು ಕೇಳುವುದು ಎಂದು, ಸುಮತಿಯನ್ನು ಹಿಡಿದು ಹೊಡೆಯುವುದಕ್ಕೆ ಪ್ರಾರಂಭಿಸಿದನು. ಮಂಗನು ತನ್ನ ಕೈಲಿದ್ದ ಕಲ್ಲಿನಿಂದ ಮುಖದ ಮೇಲೆ ಮೂರುನಾಲ್ಕು ಏಟ ಹೊಡೆದ ಕಾರಣ ಸುಮತಿಗೆ ಮುಖವೊಡೆದು ಮೈಕೈಯೆಲ್ಲಾ ರಕ್ತವಾಯಿತು. ಈ ವಿಪ ರೀತವನ್ನು ಕೇಳಿ, ದೊರೆಯು ಅಲ್ಲಿಗೆ ಬಂದು ವಿಚಾರಿಸುವಲ್ಲಿ, ಸುಮ ತಿಯು ತಾನೇ ಅಕಸ್ಮಾತ್ತಾಗಿ ತಗಲಿಸಿಕೊಂಡನೆಂದು ಮಂಗ ಮೊದ ಲಾದವರು ಹೇಳಿದರು. ಆದರೆ ಲಲಿತೆಯೂ ಸುಮತಿಯೂ ನಡೆ ದದ್ದನ್ನು ಹೇಳಿಬಿಟ್ಟರು. ಇದನ್ನು ಕೇಳಿ ದೊರೆಯು ಕೋಪಮಾಡಿ ಕೊಂಡು ಹೊರಟುಹೋಗಿ ಸುಮತಿಯ ಹಣೇಮೇಲಿನ ಗಾಯ ಮಾಯುವುದಕ್ಕೆ ತಕ್ಕ ಔಷಧವನ್ನು ಕೊಡಿಸಿದನು. ಕೆಲವು ಹುಡು ಗರು ಮೀನಾಂಬಕೀದೇವಿಗೆ ಈ ಜಗಳವನ್ನು ಹೇಳುತಾ, ಹೊಗೇಬತ್ತಿ ಯನ್ನು ಸೇದಬೇಕೆಂದು, ಹುಡುಗರಿಗೆಲ್ಲಾ ಸುಮತಿಯೇ ಹೇಳಿ ಕೊಟ್ಟನೆಂತಲೂ, ಎಲ್ಲರನ್ನೂ ಹಿಡಿದು ಸುಮತಿಯೇ ಹೊಡೆದನೆಂತಲೂ ಹೇಳಿದರು. ಅಕ್ಕನ ಸಮೀಪದಲ್ಲಿಯೇ ಇದ್ದ ಕಮಲಾಂಬಕೀದೇವಿಯು ಕೇಳಿ—ಅಗೊ ನಾನು ಹೇಳಲಿಲ್ಲವೆ? ಈ ಹಾಳ ಹಾರವರ ಜೊತೆಗೆ ನಮ್ಮ ಹುಡುಗರು ಸೇರಿದರೆ ಹೀಗೆ ಕೆಟ್ಟುಹೋಗುವರು, ನಮ್ಮ ಅರ ಮನೆಗಳಿಗೆ ಇಂಥಾವರು ಬರಲೇಕೂಡದು, ಅಕ್ಕೈಯ್ಯ, ಎಂದಳು. ಕೂಡಲೆ ದೊರೆಯು ಉದ್ಯಾನವನದಿಂದ ಅಲ್ಲಿಗೆ ಬಂದು, ಸುಮತಿ ಯಿಂದ ಯಾವ ತಪ್ಪೂ ಇಲ್ಲವೆಂದು ಹೇಳುವತನಕ, ಆ ಹುಡುಗನನ್ನು ಬೈಯುತಿದ್ದ ಹೆಂಗಸರ ಹರಟೆಗೆ ಕೊನೆಮಿತಿಯೇ ಇರಲಿಲ್ಲ.

ಈ ದೊರೆ ಮಕ್ಕಳ ಚರ್ಯಗಳನ್ನು ಕಂಡು ಸುಮತಿಗೆ ಬಹು ಅಸಹ್ಯ ಹಿಡಿಯಿತು. ಆದರೂ ಯಾವ ಮಾತನ್ನೂ ಆಡದೆ ಸುಮ್ಮನೆ ಆದನು. ಬೆಳಗಾದಮೇಲೆ ರಾಜಪುತ್ರರೆಲ್ಲರೂ ಸೇರಿ, ಕಾಡು ಸುತ್ತುವ

ದಕ್ಕೆ ಹೋಗಬೇಕೆಂದು ನಿಷ್ಕರ್ಷೆಮಾಡಿಕೊಂಡರು. ಸುಮತಿಯೂ ಇವರ ಸಂಗಡಲೇ ಹೊರಟನು. ಮಂಗರಾಜ ಮೊದಲಾದ ಕೆಲವು ಹುಡುಗರಿಗೆ ಇವನಮೇಲೆ ದ್ವೇಷವಿತ್ತು. ಮದನನು ಈ ಕೆಟ್ಟ ಹುಡುಗರ ಸಹವಾಸದಲ್ಲಿಯೇ ಲೋಲನಾಗಿ ಸುಮತಿಯನ್ನು ಮಾತನಾಡಿಸದೆ ಸುಮ್ಮನೆ ಹೋಗುತಿದ್ದನು. ಮುನ್ನಾದಿವಸ ನಡೆದ ಜಗಳಕ್ಕೆ ಕಾರಣ ವೇನೆಂದು ಮದನ ಕೇಳಲೂ ಇಲ್ಲ. ಅವ ಕೇಳದೆ ನಾನು ಯಾಕೆ ಹೇಳಲೆಂದು ಸುಮತಿ ಹೇಳಲೂ ಇಲ್ಲ. ಇವರೆಲ್ಲರೂ ಹೋಗುತಿರುವಾಗ, ಸ್ವಲ್ಪದೂರದಲ್ಲಿ ಕೆಲವು ಜನರು ಗುಂಪು ಸೇರಿಕೊಂಡಿದ್ದರು. ಅದಕ್ಕೆ ಕಾರಣವೇನೆಂದು ಕೇಳಲಾಗಿ, ಸ್ವಲ್ಪ ಹೊತ್ತಿನಲ್ಲಿಯೇ ಗೂಳಿ ಕಾಳಗವಾಗುವುದೆಂದು ಹೇಳಿದರು. ಆಗ ಸುಮತಿಯು— ನಾವು ಗೂಳಿಕಾಳಗಕ್ಕೆ ಹೋಗಬಾರದು. ಅವು ಕಿತ್ತುಕೊಂಡು ಜನರಮೇಲೆ ನುಗ್ಗಿದರೆ ತಪ್ಪಿಸಿಕೊಳ್ಳುವುದು ಕಷ್ಟ. ಇಂಥಾ ಅಪಾಯ ಯಾವುದಕ್ಕೂ ಪುಟ್ಟಸ್ವಾಮಿಯನ್ನು ಸಿಕ್ಕಿಸುವುದಿಲ್ಲವೆಂದು ವಿಶಾನಾಂಬಕಿಗೆ ಮಾತ ಕೊಟ್ಟು ಬಂದಿದ್ದೀರಿ, ಎಂದನು. ಆಗ ಅವರಲ್ಲಿ ಒಬ್ಬ ಹುಡುಗನು ಗೂಳಿಗಳನ್ನು ಉದ್ದವಾದ ಹಗ್ಗಕ್ಕೆ ಕಟ್ಟಿರುತಾರೆ. ಅದನ್ನು ಕಿತ್ತುಕೊಂಡು ಬರಲಾರವು. ಅಥವ ಬಂದರೂ ಇಂಥಾ ಅಪಾಯ ಸಂಭವಿಸಿತೆಂದು ಯಾರುತಾನೆ ಅರಮನೆಗೆ ಹೋಗಿ ಹೇಳುತಾರೆ? ಎಂದನು.

ಹುಡುಗರು— ಯಾರೂ ಹೇಳುವುದಿಲ್ಲ.

ಸುಮತಿ— ನಾನು ಒಬ್ಬರಮೇಲೆ ಚಾಡಿ ಹೇಳಬೇಕೆಂದು ಇಲ್ಲ. ಆದರೆ ಎಲ್ಲಿಗೆ ಹೋಗಿದ್ದಿರಿ, ಏನು ನಡೆಯಿತು? ಎಂದು ಕೇಳಿದರೆ, ನಾನು ಏನಹೇಳಲಿ?

ಹುಡುಗರು— ನಮ್ಮ ದಾರಿಯಲ್ಲಿ ನಾವು ಹೋಗುತಿದ್ದೆವೆಂದು ಅಷ್ಟರಮಟ್ಟಿಗೆ ಹೇಳು. ಮುಂದಕ್ಕೆ ಬೇಡ.

ಸುಮತಿ— ಹಾಗಾದರೆ ನಾವು ನಿಶ್ಚಯವನ್ನು ಹೇಳಿದಹಾಗಾಗುವುದಿಲ್ಲ. ಮತ್ತೂ ಗೂಳೀಕಾಳಗದಲ್ಲಿ ಅಪಾಯವುಂಟು. ನಾವು ಅಲ್ಲಿಗೆ ಹೋಗಬಾರದು. ಮದನನನ್ನು ಅಲ್ಲಿಗೆ ಕರೆದುಕೊಂಡು ಹೋಗಲೇ ಕೂಡದು—(ಹೀಗೆ ಸುಮತಿ ಆಡಿದ ಮಾತು ಅಲ್ಲಿದ್ದವರು ಯಾರಿಗೂ ಸರಿಬೀಳಲಿಲ್ಲ).

ಹುಡುಗರು—ಲೋಕದಲ್ಲೆಲ್ಲಾ ತಾನೇ ಬುದ್ಧಿವಂತನೆಂದು ಈ ಸುಮತಿ ಕೊಚ್ಚಿಕೊಳ್ಳುತಾನೆ.

ತಿಮ್ಮನಾಯಕ—ಈ ಭಿಕ್ಷಾನ್ನದ ಹಾರುವ ದೊರೆಮಕ್ಕಳಾದ ನಮಗೆ ಬುದ್ಧೀಕಲಿಸುವುದಕ್ಕೆ ಬರುತಾನೆ! ಮದನನು ಇವನ ಸ್ನೇಹಾ ಮಾಡಿದಮಾತ್ರಕ್ಕೆ ಇವ ಹೆಚ್ಚಿಕೊಂಡ

ಮಂಗ—ನಮ್ಮ ಪುಟ್ಟಸಾಮಿಯು ನಿನಗೆ ಮಾಡಿದ ಉಪಕಾರಕ್ಕೆ ನೀನು ಅವನಮೇಲೆ ಚಾಡೀ ಹೇಳುತೀಯೇನೆಲಾ?

ಸುಮತಿ—ಚಾಡೀಹೇಳಬೇಕಾದ ಅಗತ್ಯ ನನಗಿಲ್ಲ. ನಾನು ಭಿಕ್ಷಾನ್ನದವನಾದರೆ, ನಿಮ್ಮಗಳಿಂದ ನನಗೆ ಯಾವ ಉಪಕಾರವೂ ಆಗತಕ್ಕದ್ದಿಲ್ಲ.

ಇದುವರೆಗೂ ಸುಮ್ಮನೇ ಇದ್ದ ಮದನನು ಈ ಮಾತನ್ನು ಕೇಳಿ ಕೋಪಗೊಂಡು—ಏನೆಲೋ! ನನಗೆ ಅವಮಾನ ಮಾಡುತೀಯಾ?

ಸುಮತಿ—ನಾನು ಅವಮಾನಮಾಡುವುದಿಲ್ಲ. ನೀನೂ ನಿನ್ನ ಸ್ನೇಹಿತರೂ ಸೇರಿ ನನಗೆ ಅವಮಾನಮಾಡುತೀರಿ.

ಮದನ—ನೀನೇನು ಮಹಾ ದೊಡ್ಡಮನುಷ್ಯನೊ?

ಸುಮತಿ — ಇದುವರೆಗೂ ನೀನು ದೊಡ್ಡಮನುಷ್ಯನೆಂದು ಕೊಂಡಿದ್ದೆ.

ಮದನ—ಈಗ ನಾನು ದೊಡ್ಡಮನುಷ್ಯನಲ್ಲವೇನೊ? ನನ್ನನ್ನು ಬೈಯುತೀಯಾ?

ಹೀಗೆಂದು ಕೋಪದಿಂದ ಉಳ್ಳಂಬಿರಿಸಿಗೂ ಸುಮತಿಯ ಕೆನ್ನೆಗೆ ಮದನ ಒಂದು ಏಟನ್ನು ಹೊಡೆದನು. ಆಗ ಸುಮತಿಯ ಧೈರ್ಯ ಸ್ವಲ್ಪ ಕುಂದಿತು. ಅವನು ಎರಡು ಕೈಯಿಂದಲೂ ಮುಖವನ್ನು ಮುಚ್ಚಿ ಕೊಂಡು ಅಳುತಾ—ಮದನ, ನೀನು ನನಗೆ ಹೀಗೆ ಮಾಡುತೀಯೆಂದು ತಿಳಿದಿರಲಿಲ್ಲ ಎಂದನು. ಆ ಕಾಲದಲ್ಲಿ ಹತ್ತಿರಿದ್ದ, ತುಂಟಹುಡುಗರೆಲ್ಲಾ —ಪುಟ್ಟಸಾಮಿ, ಇನ್ನೂ ನಾಲ್ಕು ಏಟ ಕೊಡಿ ಕೊಡಿ, ಎಂದು ಕೂಗಿದ್ದಲ್ಲದೆ, ಇದೇ ಸಮಯವೆಂದು, ಎಲ್ಲರೂ ಒಂದೊಂದು ಏಟ ಹಾಕುವುದಕ್ಕೆ ಮೊದಲುಮಾಡಿ,—ಎಲ್ಲಿ ನಿನ್ನ ಮುಖ ತೋರಿಸು, ಹೇಡಿ, ಎಂದು

ಕೂಗಿದರು. ಸುಮತಿಯು ಅಳುವುದನ್ನು ಬಿಟ್ಟು ಚೇತರಿಸಿಕೊಂಡು ಮೇಲಕ್ಕೆ ಎದ್ದು—ನನ್ನಮೇಲೆ ಯಾರು ಬರುತೀರಿ, ಬನ್ನಿ, ಎಂದು ಹೇಳುತಾ ಒಬ್ಬೊಬ್ಬರನ್ನಾಗಿ ಹಿಡಿದು, ಕುಕ್ಕಿ, ಉರುಳಿಸುತಾ ಬಂದನು. ಅತಿಮೂರ್ಖನಾದ ಮಂಗರಾಜಮಾತ್ರ ಇವನ ಮೇಲೆ ಹೋರಾಟಕ್ಕೆ ನಿಂತುಕೊಂಡನು. ಕೊನೆಗೆ ಸುಮತಿಯ ಕೈಬಲವಾಗಿ ಮಂಗನಿಗೆ ಪೆಟ್ಟು ಜೋರಾಯಿತು. ಮಂಗರಸನು ಮೇಲಕ್ಕೆ ಏಳಲು ಕೈಲಾಗದೆ ಕೆಳಕ್ಕೆ ಬಿದ್ದುಬಿಟ್ಟನು. ಇದುವರೆಗೂ ಸುಮತಿಯನ್ನು ಹಾಸ್ಯಮಾಡುತಿದ್ದ ಹುಡುಗರೆಲ್ಲರೂ ಅವ ಜೈಸಿದ್ದನ್ನು ಕಂಡು—ಭಲಾ! ಭಲರೇ ಸುಮತಿ! ಎಲ್ಲರನ್ನೂ ಗೆದ್ದ! ಎಂದು ಅವನ ಬೆನ್ನು ತಟ್ಟಿ ಕೊಂಡಾಡುವುದಕ್ಕೆ ಪ್ರಾರಂಭಿಸಿದರು. ಆದರೆ ಸುಮತಿಯು ಈ ಸ್ತೋತ್ರಕ್ಕೆ ಉಬ್ಬದೆ, ಮಂಗನ ಸಮೀಪಕ್ಕೆ ಹೋಗಿ ಅವನ ಕೈಹಿಡಿದು, ಎಬ್ಬಿಸಿ—ಅಯ್ಯಾ, ಏಳು, ನಿನಗೆ ಪೆಟ್ಟು ಬಲವಾಗಿ ಬಿತ್ತು. ನೀನಾಗಿ ಬಂದಕಾರಣ ನಾನು ಜಗಳಕ್ಕೆ ನಿಂತೆ, ಎಂದು ಹೇಳಿದನು. ತರುವಾಯ, ಹುಡುಗರೆಲ್ಲರೂ ಸೇರಿ ಗೂಳೀಕಾಳಗದ ಸ್ಥಳಕ್ಕೆ ಹೋದರು. ಹೋಗಬೇಡಿ, ಎಂದು ಸುಮತಿ ಎಷ್ಟು ಹೇಳಿದರೂ ಕೇಳಲಿಲ್ಲ. ಕೇಳದೇಇದ್ದ ಕಾರಣ ಅವರ ಸಂಗಡ ತಾನೂ ಹೊರಟನು. ಮದನನ ಕ್ಷೇಮವನ್ನೇ ನೋಡ ಬೇಕೆಂಬ ಕುತೂಹಲವು ಹೆಚ್ಚಾಗಿದ್ದ ಕಾರಣ, ಸುಮತಿಗೆ ಇದಕ್ಕೆ ಪೂರ್ವದಲ್ಲಿ ಬಿದ್ದ ಏಟಿನ ಯಾತನೆಯೂ, ಆದ ಅವಮಾನವೂ, ಲೇಶವೂ ತೋರಲಿಲ್ಲ. ಗೂಳೀಕಾಳಗಕ್ಕೆ ಮೊದಲಾಯಿತು.

ಈ ಮಧ್ಯೆ ಒಬ್ಬ ಸಿದ್ದಿಯವನು ಅಲ್ಲಿಗೆ ಬಂದು, ಈ ದೊರೆ ಮಕ್ಕಳ ಹತ್ತಿರ ಭಿಕ್ಷ ಕೇಳುವುದಕ್ಕೆ ಮೊದಲು ಮಾಡಿದನು. ಅವ ನಿಜವಾಗಿ ದರಿದ್ರನೆಂದು ತಿಳಿದಿದ್ದಾಗ್ಯೂ, ಅವನ ಮುಖದ ಕಪ್ಪನ್ನೂ ಅವನ ತಲೇಕೂದಲನ್ನೂ ನೋಡಿ ಹಾಸ್ಯಮಾಡಿಕೊಂಡು ನಗುವುದರಲ್ಲಿ ಈ ದೊರೆಮಕ್ಕಳು ಚತುರರಾದರೇ ಹೊರತು, ದೀನನಾದವನಿಗೆ ಸಹಾಯ ಮಾಡಬೇಕೆಂಬ ಬುದ್ಧಿಯನ್ನು ಇವರು ತೋರಿಸಲೇ ಇಲ್ಲ. ಇದನ್ನು ಕಂಡು ಸುಮತಿಯು ಅವನಲ್ಲಿ ನಿಜವಾದ ದಯಾರಸದಿಂದ ತನ್ನ ಹತ್ತಿರಿದ್ದ ಒಂದೇ ಒಂದು ಹಣವನ್ನು ತೆಗೆದು ಅವನಿಗೆ ಕೊಟ್ಟು—ಅಪ್ಪಾ

ನನ್ನಲ್ಲಿ ಇನ್ನೇನೂ ಇಲ್ಲ, ಈ ಒಂದು ಹಣ ಮಾತ್ರ ದೊರೇಮನೆಯಲ್ಲಿ ನಿನ್ನೆ ದಕ್ಷಿಣೆಯಾಗಿ ಬಂದಿತ್ತು. ಇದನ್ನು ಹಿಡಿ ಎಂದು ಕೊಟ್ಟನು. ತಾನೂ ಆ ಸಿದ್ದಿಯವನಿಗೆ ಉಚಿತವನ್ನು ಕೊಡಬೇಕೆಂದು ಮದನನು ನೋಡಿಕೊಳ್ಳಲು ಹತ್ತಿರ ಇದ್ದ ದುಡ್ಡೆಲ್ಲ ವೆಚ್ಚವಾಗಿ ಹೋಗಿತ್ತು. ತುಂಟರ ಹಾವಳಿಯಲ್ಲಿ ಒಂದು ಕಾಸೂ ಉಳಿದಿರಲ್ಲ.

ತರುವಾಯ ಹುಡುಗರೆಲ್ಲರೂ ಗೂಳೀಕಾಳಗವಾಗುವ ಕಡೆಗೆ ತಿರುಗಿದರು. ಆಗ ಸುಮತಿಯು—ಅಲ್ಲಿಗೆ ಹೋಗುವುದು ಸರಿಯಲ್ಲ; ನಾವು ಹುಡುಗರು, ದೊಡ್ಡವರ ಗುಂಪಿನ ಮಧ್ಯೆ ನಾವು ಸಿಕ್ಕಿಕೊಂಡರೆ ಈಚೆಗೆ ಬರುವುದಕ್ಕೂ ಇಲ್ಲದೆ ಅಲ್ಲಿ ಇರುವುದಕ್ಕೂ ಇಲ್ಲದೆ ಕಷ್ಟವಾಗುವುದು. ಗೂಳಿ ತಪ್ಪಿಸಿಕೊಂಡು ಈಚೆಗೆ ಬಂದರೆ, ಜನರನ್ನು ತುಳಿದು ಬಿಟ್ಟೀತು. ನಾವು ಚಿಕ್ಕವರಾದ್ದರಿಂದ, ನಮ್ಮನ್ನು ದೊಡ್ಡವರು ತಳ್ಳಿಬಿಟ್ಟು ತಾವು ತಪ್ಪಿಸಿಕೊಂಡು ಓಡಿಹೋಗವರು. ಗೂಳಿಯು ನಮ್ಮನ್ನು ತುಳಿದುಬಿಡಬಹುದು. ಇಷ್ಟರಮೇಲೆ ಬೇಕಾದವರು ಹೋಗಲಿ. ಆದರೆ ಮದನ ಮಾತ್ರ ಹೋಗುವುದು ಸರಿಯಲ್ಲ. ಅವನಿಗೆ ಏನಾದರೂ ಅಪಾಯ ಸಂಭವಿಸಿದರೆ ದೊರೆಗೂ ಅರಸಿಗೂ ಬಹಳ ವ್ಯಾಕುಲ ಉಂಟಾದೀತು,—ಹೀಗೆಂದು ಹೇಳಿದನು. ಈ ಮಾತನ್ನು ಯಾರೂ ಲಕ್ಷ್ಯ ಮಾಡಲಿಲ್ಲ. ಆದಕಾರಣ ಸುಮತಿಯೂ ಅವರ ಸಂಗಡಲೇ ಹೋದನು.

ಗೂಳಿಗಳು ಕಾದಾಡುತಿದ್ದ ರಂಗದ ಸುತ್ತಲೂ ಜನರ ಗುಂಪು ನಿಂತಿತ್ತು. ಅವರ ಹತ್ತಿರ ಈ ಹುಡುಗರೂ ನುಸುಳಿಕೊಂಡು ಹೋಗಿ ನಿಂತರು. ಆಗ ಗೂಳಿಗಳ ಕಾಳಗ ಬಲವಾಗಿ ನಡೆಯುತ್ತಿತ್ತು. ಕೊನೆಗೆ ಒಂದು ದೊಡ್ಡ ಗೂಳಿಯು ಇನ್ನೊಂದನ್ನು ತಿವಿದು ಸೋಲಿಸಿತು. ಈ ಎರಡು ಗೂಳಿಗಳೂ ಒಂದನ್ನು ಒಂದು ಹರಿಸಿಕೊಂಡು ಜನರಮೇಲೆ ನುಗ್ಗಿದವು. ಜನರೆಲ್ಲಾ ಛಿನ್ನಾಭಿನ್ನವಾಗಿ ಓಡಿದರು. ಇಬ್ಬರು ಗಂಡಸರನ್ನೂ ಒಬ್ಬ ಹೆಂಗಸನ್ನೂ ಒಬ್ಬ ಹುಡುಗನನ್ನೂ ಗೂಳಿಗಳು ತುಳಿದು ಬಿಟ್ಟವು. ಇಬ್ಬರ ಪ್ರಾಣಹೋಯಿತು. ಇಬ್ಬರಿಗೆ ಕಾಲುಮುರಿದು ಪೂರಾ ಪೆಟ್ಟಾಯಿತು. ಮದನನ ಸಂಗಡ ಇದ್ದ ಹುಡುಗರೆಲ್ಲರೂ ಗಾಬರಿಯಾಗಿ ಓಡಿಹೋದರು. ಮದನಕುಮಾರ ಮಾತ್ರ ಓಡಿಬರುತಾ

ದಾರಿಯಲ್ಲಿ ಮುಗ್ಗುರಿಸಿ ಬಿದ್ದನು. ಭೂಮಿ ಹಳ್ಳದಿಣ್ಣೆಯಾಗಿದ್ದದ ರಿಂದಲೋ ಅಥವಾ ಹಿಂದಟ್ಟಿಕೊಂಡು ಬರುತಿದ್ದ ಗೂಳಿಗೆ ಭಯಪಟ್ಟದ ರಿಂದಲೋ ಅಂತು ಹೇಗೋ ಕೆಳಕ್ಕೆ ಬಿದ್ದಬಿರಸಿಗೆ ಕೆನ್ನೆ ಮೈಯೆಲ್ಲಾ ತರೆದುಹೋಯಿತು. ಎಡದರಟ್ಟೆ ಉಳುಕಿತು. ಇವನ ಸಮೀಪಕ್ಕೆ ಓಡಿಬರುತಿದ್ದ ಗೂಳಿಯ ರಭಸವನ್ನು ಕಂಡು ಅಲ್ಲಿದ್ದ ಜನರೆಲ್ಲಾ —ಅಯ್ಯೋ, ಹುಡುಗ ಹೋದನಲ್ಲಾ ಎಂದು ಕೂಗಿಕೊಳ್ಳುತಿದ್ದರೇ ಹೊರತು ಯಾರೂ ಆ ಗೂಳಿಯನ್ನು ನಿಲ್ಲಿಸುವುದಕ್ಕೆ ಧೈರ್ಯಮಾಡ ಲಿಲ್ಲ. ಮಂಗರಾಜ ಮೊದಲಾದ ವೀರರೆಲ್ಲಾ ಇವನಕಡೆ ತಿರುಗಿಕೂಡ ನೋಡದೆ ಓಡಿಹೋದರು. ಕೆಳಕ್ಕೆ ಬಿದ್ದಿದ್ದ ಮದನನಿಗೂ ಗೂಳಿಗೂ ಎರಡುಮೊಳ ಬಿಟ್ಟಿತು. ದೊರೆಮಗನ ಪರಿಣಾಮ ಅಲ್ಲಿಗೆ ಆಯಿತೆಂಬ ದಾಗಿ ಅಲ್ಲಿದ್ದ ಜನರೆಲ್ಲಾ ಹೋ! ಎಂದು ಕೂಗಿದರು. ಅಲ್ಲಿ ಯಾರೋ ಕೊನೆಗೆ ಮೊಳೆ ಪೆಟ್ಟದ್ದ ಬಾರುಕೋಲನ್ನು ಕೆಡವಿಕೊಂಡು ಹೋಗಿ ರಲು, ಆ ಸಮಯಕ್ಕೆ ಸುಮತಿಯು ಅದನ್ನು ತೆಗೆದುಕೊಂಡು ಧೈರ್ಯದಿಂದ ಓಡಿಹೋಗಿ ಗೂಳಿಯ ಪಕ್ಕೆಗೆ ತಿವಿದನು. ಆ ಗಳಿಗೆಯಲ್ಲಿಯೇ ಆ ಮಹಾವೃಷಭವು ರೋಷದಿಂದ ಸುಮತಿಯ ಕಡೆ ತಿರುಗಿ ಇವನ ಕಾಲಿನ ಸಂದಿಗೆ ಕೊಂಬನ್ನು ಹಾಕುವುದಕ್ಕೆ ಹೊರಟಿತು. ಮದನನಮೇಲೆ ಬಂದ ಮೃತ್ಯು ಸುಮತಿಯ ಕಡೆಗೆ ತಿರುಗಿತು. ಅಲ್ಲಿ ದೂರದೂರವಾಗಿ ನಿಂತು ನೋಡುತಿದ್ದ ಜನರಲ್ಲಿ ಸುಮತಿಯ ಧೈರ್ಯವನ್ನು ನೋಡಿ ಹುಟ್ಟಿದ ಮೆಚ್ಚಿಕೆಯೂ ಆಶ್ಚರ್ಯವೂ, ಇಂಥಾ ಹುಡುಗನ ಪ್ರಾಣವನ್ನು ಗೂಳಿ ಅಪಹರಿಸುವುದಲ್ಲಾ ಎಂಬ ವ್ಯಸನದಲ್ಲಿ ಕಲಕಿಹೋಯಿತು. ಇನ್ನೇನು ಗತಿ! ಎಂದು ಜನರೆಲ್ಲರೂ ಕೂಗುವದಕ್ಕೆ ಮೊದಲುಮಾಡಿದರು. ಆ ಸಮಯಕ್ಕೆ ಸರಿಯಾಗಿ ಒಬ್ಬ ಮನುಷ್ಯನು ಗುಂಪಿನೊಳಗಿನಿಂದ ಸಿಡಿಲು ಹೊಡೆದಹಾಗೆ ಓಡಿಬಂದು ತನ್ನ ಮುಷ್ಟಿಯಿಂದ ಗಟ್ಟಿಯಾಗಿ ಗೂಳಿಯ ಮೂಗಿನಮೇಲೆಯೂ ಅದರ ಪಕ್ಕೆಯಮೇಲೆಯೂ ಗುದ್ದಿ ದನು. ಅದಕ್ಕೆ ಇನ್ನೂ ರೋಷಹೆಚ್ಚಿ ಈ ಮನುಷ್ಯನಮೇಲೆ ತಿರು ಗಿತು. ಆದರೆ ಈ ಆಪದ್ಬಂಧುವು ಗೂಳಿಯ ಕೈಗೆ ಸಿಕ್ಕದಹಾಗೆ ಅದಕ್ಕೆ ವಿಶೇಷವಾಗಿ ಏಟನ್ನು ಕೊಡುತ್ತಾ, ಅದರ ಬಾಲವನ್ನು ಹಿಡಿದು ಎಳೆ

ಯುತ್ತಾ, ಅದರ ಸಂಗಡ ಸ್ವಲ್ಪದೂರ ಓಡುತ್ತಾ, ಅದು ತಿರುಗಿ ಹರಿಸಿ ಕೊಂಡು ಬಂದರೆ ಸೊಟ್ಟಸೊಟ್ಟನಾಗಿ ಹೋಗುತ್ತಾ, ಹಳ್ಳದೊಳಕ್ಕೆ ದುಮುಕುತ್ತಾ, ತಿಟ್ಟಿನ ಮೇಲಕ್ಕೆ ಕಡಿದಾದ ಸ್ಥಳದಲ್ಲಿ ಹತ್ತುತ್ತಾ, ಸಮಯ ಸಿಕ್ಕಿದಾಗಲೆಲ್ಲಾ ಮೊನಚಾದ ಕಲ್ಲನ್ನು ಹಿಡಿದು ಅದರ ಅಪಾಯಸ್ಥಳಕ್ಕೂ ಪಕ್ಕೆಗೂ ಮೂತಿಯ ಮೇಲೆಯೂ ಮನಸ್ಸಿ ಹೊಡೆ ಯುತ್ತಾ ಬಂದನು. ಗೂಳಿಯು ತನ್ನ ಶತ್ರುವನ್ನು ತೀರಿಸಿಕೊಳ್ಳ ಬೇಕೆಂಬ ಆಕ್ರೋಶದಿಂದ ಅವನ ಹಿಂದೆ ಹಿಂದೆಯೇ ಹೋಗಿ, ಹಳ್ಳ ಗಳಿಗೆ ಬಿದ್ದು, ದಿಣ್ಣೆಗಳ ಮೇಲೆ ಮುಗ್ಗರಿಸಿ, ಮೈಯೆಲ್ಲಾ ತರೆದು ಹೋದ್ದೂ ಅಲ್ಲದೆ, ಅವನ ಕೈಪೆಟ್ಟಿನಿಂದ ಅಸ್ವಾವಸ್ಥೆಯಾಗಿ ಕೆಳಗೆ ಬಿದ್ದು ಬಿಟ್ಟಿತು; ಮೇಲಕ್ಕೆ ಏಳಲಾರದೆ ಹೋಯಿತು. ಆಗ ಅಲ್ಲಿದ್ದ ಜನ ರೆಲ್ಲಾ ಸೇರಿ ಆ ಗೂಳಿಗೆ ಹಗ್ಗವನ್ನು ಕಟ್ಟಿ, ಎಳೆದುಕೊಂಡು ಹೋದರು. ಹೀಗೆ ಸುಮತಿಯ ಪ್ರಾಣ ಉಳಿಯಿತು. ಆಗ ಈ ಪ್ರಕಾರ ಆ ಗೂಳಿ ಯನ್ನು ಅಡ್ಡಗಟ್ಟಿ ಪ್ರಾಣದಾನವನ್ನು ಮಾಡಿದ ಪುಣ್ಯಾತ್ಮ ಯಾರೆಂದು ಸಾವಕಾಶವಾಗಿ ನೋಡಿಕೊಳ್ಳಲು, ಅವನು ಸ್ವಲ್ಪಹೊತ್ತಿಗೆ ಮುಂಚೆ ಸುಮತಿಯಿಂದ ಯಾಚನೆಯನ್ನು ಇಸುಕೊಂಡಿದ್ದ ಸಿದ್ದಿಯವನಾಗಿ ದ್ದನು. ಸುಮತಿಯು ಮದನ ಸುರಕ್ಷಿತನಾಗಿದಾನೆಂದು ತಿಳಿದು ಬಹು ಸಂತೋಷದಿಂದ ಆ ಸಿದ್ದಿಯವನನ್ನು ಕರೆದುಕೊಂಡು ತಮ್ಮ ತಂದೆ ಇದ್ದ ಗ್ರಾಮಕ್ಕೆ ಹೊರಟುಹೋದನು.

ಅತ್ತ ದೊರೆಮಗನಾದ ಮದನನನ್ನು ಹುಡುಕುವುದಕ್ಕೆ ಬಂದಿದ್ದ ಓಲೆಕಾರರು, ಪೆಟ್ಟು ಏನೂ ಇಲ್ಲದಿದ್ದಾಗ್ಯೂ ಭಯದಿಂದ ಕೆಳಕ್ಕೆ ಬಿದ್ದು ಜ್ಞಾನತಪ್ಪಿಹೋಗಿದ್ದ ಮದನನನ್ನು ಎತ್ತಿಕೊಂಡು ಅರಮನೆಗೆ ಹೋದರು.

ಮಗನಿಗೆ ಉಂಟಾದ ಅಪಾಯದ ಸಂಗತಿಯನ್ನು ರಾಣೀವಾಸದ ಲ್ಲಿದ್ದ ದೊರೇ ಹೆಂಡತಿಯು ಕೇಳಿ ಗಾಬರಿಯಾಗಿ—ಅಯ್ಯೋ, ನನ್ನ ಕಂದನಿಗೆ ಹೀಗಾಯಿತಲ್ಲಾ! ಇನ್ನೇನುಗತಿ ಎಂದು ಗಟ್ಟಿಯಾಗಿ ಅಳುತ್ತಾ ಅರಮನೆಯಿಂದ ಈಚೆಗೆ ಬಂದಳು. ಕೂಡಲೆ ಸಮೀಪದ ಲ್ಲಿದ್ದ ರಾಜಸ್ತ್ರೀಯರೆಲ್ಲಾ ವ್ಯಸನಪಡುವವರಂತೆ ಕಣ್ಣಿಗೆ ಸೆರಗನ್ನು

ಹಾಕಿಕೊಂಡು ರಾಣಿಯು ಸಂಗಡ ತಾವೂ ಈಚೆಗೆ ಹೊರಟರು. ಆ ಸಮಯಕ್ಕೆ ಸರಿಯಾಗಿ ಮದನನ ಸಂಗಡ ಹೋಗಿದ್ದ ಹುಡುಗರು ಕೆಲವರು ಬಂದು, ಮದನನಿಗೆ ವಿಶೇಷವಾಗಿ ಏನೂ ಗಾಯವಾಗಲಿಲ್ಲವೆಂದು ಹೇಳಿದರು. ಅವರ ಹಿಂದುಗಡೆಯಲ್ಲಿಯೇ ಮದನನೂ ಬಂದನು. ರಾಣಿಯು ಅವನನ್ನು ನೋಡಿ, ಅತ್ಯಾನಂದದಿಂದ ಎತ್ತಿಕೊಂಡು ಅವನ ಗುಣಗಳನ್ನು ಹಾಡಿಹಾಡಿಕೊಂಡು ಮುದ್ದಾಡಿದಳು. ತರುವಾಯ ಪುಟ್ಟುಸಾಮಿಯಸಂಗಡ ಹೋಗಿದ್ದ ಹುಡುಗರೆಲ್ಲರೂ ಅಲ್ಲಿಬಂದು ನಿಂತಿರುವುದನ್ನೂ ಆ ಗುಂಪಿನಲ್ಲಿ ಸುಮತಿ ಇಲ್ಲದೇ ಇರುವುದನ್ನೂ ಕಂಡು ಆಕೆಯು ಎಲ್ಲರೂ ಬಂದಿದಾರೆ, ಆ ಕೆಟ್ಟ ಹುಡುಗನಾದ ಸುಮತಿ ಮಾತ್ರ ಇಲ್ಲಿಲ್ಲ. ಅವನೇ ಪುಟ್ಟುಸಾಮಿಗೆ ಈ ಅಪಾಯವನ್ನು ತಂದು ಬಿಟ್ಟಿರಬೇಕು. ಆ ಗಂಡನ್ನು ಕಂಡರೆ ಮೊದಲಿನಿಂದಲೂ ನನಗೆ ಆಗದು. ಆ ಗೂಳಿಯು ಆ ಗಂಡನ್ನೇ ಹಾದುಕೆಡವಿದ್ದರಾಗಿತ್ತು. ಹೀಗೆಂದು ಕೋಪದಿಂದ ಗರ್ಜಿಸಿದಳು.

ಮದನ—ಅಮ್ಮಯ್ಯ, ಸುಮತಿಯನ್ನು ತಾವು ಯಾಕೆ ಬಯ್ಯುತೀರಿ. ಅವನಿಂದ ನನಗೆ ಅಪಾಯವೇನೂ ಉಂಟಾಗಲಿಲ್ಲ. ಇನ್ನೂ ಅವನು ಹೇಳಿದ ಬುದ್ಧಿವಾದವನ್ನು ನಾನು ಕೇಳಿದ್ದರೆ ಹೀಗೆಲ್ಲಾ ಆಗುತಿರಲಿಲ್ಲ.

ರಾಣಿ—ಹಾಗಾದರೆ, ಇದೆಲ್ಲಾ ಯಾರಿಂದ ಆಯಿತು ?

ಮದನ—ಇಂಥಾ ಅಪಾಯ ಉಂಟಾಗಬಹುದೆಂದು ಸುಮತಿಯು ಮುಂಚಿತವಾಗಿಯೇ ನಮಗೆ ಹೇಳಿದ. ಅವನ ಮಾತನ್ನು ನಾವು ಕೇಳದೇಹೋದೆವು. ಗೂಳಿಯು ನನ್ನನ್ನು ಹರಿಸಿಕೊಂಡು ಬರುವುದನ್ನು ಕಂಡು ಅಲ್ಲಿದ್ದವರೆಲ್ಲಾ ಭಯದಿಂದ ಕೂಗಿಕೊಳ್ಳುತಿದ್ದರೇ ಹೊರತು, ಯಾರೂ ಅದನ್ನು ಹಿಡಿದು ನಿಲ್ಲಿಸಲಾರದೇ ಹೋದರು. ಸುಮತಿಯು ಒಂದು ಕೋಲಿನಿಂದ ಅದನ್ನು ತಿವಿದನು. ಆಗ ಗೂಳಿಯು ಅವನ ಕಡೆಗೆ ತಿರುಗಿತು. ಆಗ ಜ್ಞಾನತಪ್ಪಿ ನಾನು ಅಲ್ಲಿ ಬಿದ್ದುಬಿಟ್ಟೆ. ಆ ಮೇಲೆ ಏನಾಯಿತೋ ನಾನರಿಯೆ.

ಓಲೆಕಾರರು—ಬುದ್ಧಿ, ಸುಮತಿಗೆ ಅಪಾಯಸಂಭವಿಸಿ ಅವನನ್ನು

ಗೂಳಿಯು ಹಾಯುವುದರೊಳಗಾಗಿ ಒಬ್ಬ ಸಿದ್ದಿಯವ ಬಂದು ಗೂಳಿ ಯನ್ನು ಹೊಡೆದು ಕೆಳಕ್ಕೆ ಕೆಡವಿದನು. ಅವ ಇಲ್ಲದಿದ್ದರೆ, ಸುಮ ತಿಯು ಉಳಿಯುತಿರಲಿಲ್ಲ.

ರಾಣಿ—ತಾನು ಸುಮತಿಯನ್ನು ಅನ್ಯಾಯವಾಗಿ ದೂಷಿಸಿದ್ದ ಕ್ಕಾಗಿ ನಾಚಿಕೊಂಡು) ಈಗ ಆ ಹುಡುಗ ಎಲ್ಲಿಹೋದ ?

ಓಲೆಕಾರರು—ಅವನಿಗೆ ಏನೂ ಪೆಟ್ಟಾಗಲಿಲ್ಲ. ಆ ಸಿದ್ದಿಯವ ನನ್ನು ಅವನು ಕರೆದುಕೊಂಡು ಹೋಗುತಿದ್ದುದನ್ನು ಕಂಡು ಬಂದೆವು.

ಈ ಮಾತನ್ನು ಕೇಳಿ, ಅಲ್ಲಿದ್ದ ರಾಣಿವಾಸದವರೆಲ್ಲಾ, ಸ್ವಲ್ಪ ಹೊತ್ತಿಗೆಮುಂಚೆ ತಾವು ತಿರಸ್ಕರಿಸಿ ಮಾತನಾಡಿದ ಸುಮತಿಯನ್ನು ಆಗ ವಿಶೇಷವಾಗಿ ಕೊಂಡಾಡಲು ಮೊದಲುಮಾಡಿದರು. ಮದನನು ನಡೆದ ಸಂದರ್ಭವನ್ನೆಲ್ಲಾ ಸವಿಸ್ತಾರವಾಗಿ ಹೇಳಿದನು. ಆಗ ದೊರೆಯು— ಸುಮತಿಗೆ ಇಲ್ಲಿನ ಚರ್ಯಗಳು ಸರಿಬೀಳದೆ ಅವನಿಗೆ ಅವಮಾನವಾದ್ದ ರಿಂದ, ಅವನು ಅಸಮಾಧಾನಪಟ್ಟುಕೊಂಡು ಇಲ್ಲಿಂದ ಹೊರಟು ಹೋಗಿರಬೇಕು. ಮದನ, ಅಂಥಾ ಒಳ್ಳೇ ಹುಡುಗನನ್ನು ನೀನು ಹೊಡೆ ಯಬಹುದೆ ? ನಾಚಿಕೆ ಇಲ್ಲವೆ ? ಅವನು ನಿನಗೆ ಮಾಡಿದ ಉಪಕಾರಕ್ಕೆ ಇದೇಯೋ ಪ್ರತ್ಯುಪಕಾರ ? ಎಂದನು. ಆಗ ಮದನನು ತಲೆಬಾಗಿ ನಿಂತು, ಕಣ್ಣಿನಲ್ಲಿ ನೀರನ್ನು ಸುರಿಸುವುದಕ್ಕೆ ಮೊದಲು ಮಾಡಿದನು.

ಮಗನು ಅಳುತಾ ಇರುವುದನ್ನು ನೋಡಿ ಸಹಿಸಲಾರದೆ ರಾಣಿಯು ಅವನನ್ನು ಸಮದಾಯಿಸಿ ಮುದ್ದಿಸುವುದಕ್ಕೆ ಹೊರಟಳು. ಪುನಃ ದೊರೆಯು-ಮಗನಮೇಲೆ ವಾತ್ಸಲ್ಯವನ್ನು ತೋರಿಸಿ ಅವನನ್ನು ಮುದ್ದಿ ಸುವುದಕ್ಕೆ ಇದು ಸಮಯವಲ್ಲ. ಅತ್ಯಂತ ನೀಚಕೃತ್ಯವನ್ನು ಮಾಡಿ ಇವನನ್ನು ಹೆತ್ತ ತಾಯಿತಂದೆಗಳಿಗೆ ಅವಮಾನವನ್ನು ತಂದಂಥಾ ಈ ಹುಡುಗನು ಅಂಥಾ ಅಭಿಮಾನಕ್ಕೆ ಪಾತ್ರನಲ್ಲ; ಹೀಗೆಂದು ಹೇಳಿದ ದೊರೆಯ ಕಟುವಾದ ಮಾತಿನಿಂದ ರಾಣಿಗೆ ಮನಸು ಬಹಳವಾಗಿ ಕಲಕಿ ಹೋಯಿತು. ಅವಳು ಅಳುತ್ತಾ ಇದ್ದ ತನ್ನ ಮಗನನ್ನು ಒಳಕ್ಕೆ ಕರೆದುಕೊಂಡು ಹೊರಟುಹೋದಳು. ಮತ್ತು ಮದನನು ಸುಮತಿ ಯನ್ನು ಹೊಡೆಯುವುದಕ್ಕೆ ಉಂಟಾದ ಸಂದರ್ಭಗಳನ್ನೆಲ್ಲಾ ಕಣ್ಣಾರ

ಕಂಡ ಒಬ್ಬ ಹುಡುಗನಿಂದ ಪುನಃ ಕೇಳಿ, ದೊರೆಯು ಮನಸ್ಸಿಗೆ ಹೆಚ್ಚಾದ ಖೇದವನ್ನು ಉಂಟುಮಾಡಿಕೊಂಡನು.

---

## ೨೦ ನೆ ಅಧ್ಯಾಯ

ಹೀಗಿರುವಲ್ಲಿ ದೊರೆಯ ಅರಮನೆಗೆ ರಾಮಜೋಯಿಸನು ಅಕಸ್ಮಾತ್ತಾಗಿ ಒಂದು ದಿನ ಬಂದನು. ದೊರೆಮಗನ ನಡತೆಯಲ್ಲಿ ಈಚೆಗೆ ಉಂಟಾದ ಅನರ್ಥ ಯಾವುದೂ ಜೋಯಿಸನಿಗೆ ತಿಳಿದಿರಲಿಲ್ಲ. ಅವ ಬಂದಕೂಡಲೆ ದೊರೆಯು ತಕ್ಕ ಮರ್ಯಾದೆಯನ್ನು ತೋರಿಸಿ ಕೂರಿಸಿಕೊಂಡನು. ಆದರೆ ಅರಸನ ಮನಸ್ಸಿಗೆ ಏನೋ ಕಿಂಕೃತಿ ಯುಂಟಾಗಿದೆ ಎಂಬ ಭಾವವನ್ನು ತಿಳಿದು, ಅದಕ್ಕೆ ಮದನನೇ ಕಾರಣ ವಾಗಿರಬೇಕೆಂದು ಯೋಚಿಸಿ, ಜೋಯಿಸನು ಮುಖ್ಯವಾಗಿ ಆ ಹುಡು ಗನ ಯೋಗಕ್ಷೇಮವನ್ನು ವಿಚಾರಿಸಿದನು. ಆಗ ಅರಸು—ಸ್ವಾಮಿ, ನಾನು ಏನ ಹೇಳಲಿ. ಆ ಹುಡುಗನ ವಿಷಯದಲ್ಲಿ ನನಗಿದ್ದ ಆಸೆ ಯೆಲ್ಲಾ ಭಗ್ನವಾಯಿತು. ಈಚೆಗೆ ಅವ ಮಾಡಿದ ಒಂದೆರಡು ಕಾರ್ಯ ಧಿಂದ ಅವನಲ್ಲಿ ಆಮೂಲವಾಗಿ ಕೆಟ್ಟಗುಣವೇ ತುಂಬಿದೆ, ಅಹಂಕಾರ ವಿಶೇಷವಾಗಿದೆ ಎಂದು ಹೇಳಬೇಕು.—ಹೀಗೆಂದು ಹೇಳಿ, ಮದನನ ನಡತೆಯನ್ನು ವಿವರಿಸಿ, ಅವನನ್ನು ಬೈದು, ತನ್ನ ಅದೃಷ್ಟವನ್ನು ಬೈದುಕೊಂಡನು.

ಈ ಮಾತಿಗೆ ಜೋಯಿಸನು—ದೊರೆಯೆ, ನಿಮ್ಮ ಪುತ್ರನ ನಡತೆ ಬದಲಾಯಿಸಿದ್ದನ್ನು ಕೇಳಿ ನನಗೂ ಸ್ವಲ್ಪ ಸಂಕಟವಾಯಿತು. ಆದರೆ ಸರಿಮಾಡುವುದಕ್ಕೆ ಆಗದ ದುರ್ಗುಣ ಯಾವುದೂ ಆತನಲ್ಲಿಲ್ಲ. ಕೆಟ್ಟ ದಾರಿಗೆ ಇಷ್ಟು ಸುಲಭವಾಗಿ ಬೀಳತಕ್ಕ ಸ್ವಭಾವವೇನೋ ಅಪಾಯ ಕರವಾದ್ದೇ ಹವುದು. ಆದರೆ ಈ ಕೆಟ್ಟತನ ನೀವು ಯೋಚಿಸುವ ಮಟ್ಟಿಗೆ ಅವನನ್ನು ಅವರಿಸಿಕೊಂಡಿದೆ ಎಂದು ನಾನು ನಂಬಿಲ್ಲ. ನಾವು ಅಂಗಸಾಧನೆಯನ್ನು ಮಾಡುವಾಗ್ಗೆ ಮೈ ಬಗ್ಗಬೇಕಾದರೆ, ಸ್ವಲ್ಪದಿವಸದ ಸಾಧಕ ಅಗತ್ಯವಷ್ಟೆ, ಬುದ್ಧಿಗೂ ಹಾಗೆಯೇ. ಅದು ಒಂದು ಮಾರ್ಗ

ವನ್ನು ಬಿಟ್ಟು ಇನ್ನೊಂದು ಮಾರ್ಗಕ್ಕೆ ಬರಬೇಕಾದರೆ, ಸ್ವಲ್ಪ ದಿವಸದ ಸಾಧನೆ ಅಗತ್ಯವಲ್ಲವೆ? ಇಷ್ಟಕ್ಕೆ, ನಿರಾಶೆಯಾಯಿತಲ್ಲಾ, ಎಂದು ನೀವು ಯಾಕೆ ವ್ಯಥೆಪಡಬೇಕು?

ದೊರೆ—ಜೋಯಿಸರೆ, ತಮ್ಮ ಉದಾರವಾದ ಸ್ವಭಾವಕ್ಕೆ ಅನುಗುಣವಾದ ಮಾತನ್ನೇ ಆಡುತೀರಿ. ತಮ್ಮ ಮಾತಿನಿಂದ ಉಂಟಾಗುವ ಆಸೆಯು ತಂದೆಯಾದ ನನಗೆ ಆಪ್ಯಾಯಮಾನವಾಗಿಯೇ ಇದೆ. ಆದಾಗ್ಯೂ ತಟ್ಟನೆ ಒಳ್ಳೇಮಾರ್ಗವನ್ನೆಲ್ಲಾ ಬಿಟ್ಟು ಕೆಟ್ಟಮಾರ್ಗಕ್ಕೆ ತಿರುಗಿ ತಮ್ಮಲ್ಲಿ ಇದ್ದಾಗ ಕಲಿತುಕೊಂಡು ವಿವೇಕವನ್ನೆಲ್ಲಾ ಒಟ್ಟಿಗೆ ಮರೆತುಬಿಟ್ಟು, ನನ್ನ ಮಗ ಸನ್ಮಾರ್ಗಕ್ಕೆ ಬರುತಾನೆ, ಎಂಬ ಆಸೆ ನನಗೆ ಹೇಗೆ ಹುಟ್ಟೀತು?

ಜೋಯಿಸ—ಹಾಗಲ್ಲ. ಮನುಷ್ಯಸ್ವಭಾವದಲ್ಲಿರತಕ್ಕ ಮುಖ್ಯವಾದ ದೋಷ ಬೇರೆ, ನಿಮ್ಮ ಮಗನಲ್ಲಿ ಇರುವ ಅಸ್ಥೈರ್ಯ ಬೇರೆ, ಎಂದು ತಿಳಿದಿದ್ದೀರಾ? ಲೋಕದಲ್ಲಿ ಜನರು ಮಾಡತಕ್ಕ ಕೆಟ್ಟ ಕೆಲಸವೆಲ್ಲಾ ಬೇಕೆಂದು ಮಾಡುವುದೆಂತಲೇ ಯೋಚಿಸಕೂಡದು. ಜನಸಾಮಾನ್ಯದಲ್ಲಿ ಸ್ಥೈರ್ಯವಿಲ್ಲದೇ ಇರುವುದೇ ಹೆಚ್ಚಾಗಿದೆಯೇ ಹೊರತು ದುರ್ಗುಣ ಹೆಚ್ಚಾಗಿಲ್ಲ.

ದೊರೆ—ತಾವು ಹೇಳುವುದು ಬಹಳ ಯೋಗ್ಯವಾಗಿದೆ. ಇಷ್ಟು ದಿವಸವೂ ಅತಿ ಲಾಲನೆಯಿಂದ ಕೆಟ್ಟುಹೋದ ಹುಡುಗನಲ್ಲಿ ದೋಷ ಇರುವುದೇನೂ ಹೆಚ್ಚಲ್ಲ. ಆದರೆ ಇಷ್ಟೊಂದು ದುರ್ಮಾರ್ಗಕ್ಕೆ ಅವನು ನಿಷ್ಕಾರಣವಾಗಿ ಪ್ರವೇಶಿಸಿದ್ದನ್ನು ನೋಡುವಲ್ಲಿ ಅವನ ಒಳ್ಳೇ ಸ್ವಭಾವದಲ್ಲೇ ಕುಂದಕವಿದೆಯೆಂದು ನಾನು ತಿಳಿಯುತೇನೆ.

ಜೋಯಿಸ—ಅಂಥಾ ಕುಂದಕವೇನೂ ತೋರುವುದಿಲ್ಲ. ಇಲ್ಲಿಗೆ ಅವ ಬಂದಮೇಲೆ ಅವನ ಜೊತೆಯಲ್ಲಿ ತಿರುಗಾಡತಕ್ಕ ಹುಡುಗರ ಸ್ವಭಾವವೆಂಥಾದ್ದೋ ಅದನ್ನು ಕೊಂಚ ಯೋಚಿಸಬೇಕು. ತಮ್ಮ ಜೊತೆಗಾರರು ಮಾಡತಕ್ಕ ಕೆಲಸವನ್ನು ತಾವೂ ಮಾಡದೇ ಇರತಕ್ಕದ್ದು ವಯಸ್ಸಾದ ಅನುಭವಶಾಲಿಗಳಿಗೇ ಕಷ್ಟವಾಗಿರುವಲ್ಲಿ ನಿಮ್ಮ ಮಗನ ಮಾತೇನು? ಲೋಕದಲ್ಲಿ ಎಲ್ಲರೂ ಹಿಡಿದಿರುವ ದಾರಿಯನ್ನು ನಾವು

ಬಿಡುವುದೂ, ಡಂಭವಾಗಿ ಕಾಣಿಸತಕ್ಕ ಕೆಟ್ಟತನವನ್ನು ಬಿಟ್ಟು ಒಳ್ಳೇ ತನವನ್ನು ಅನುಸರಿಸುವುದೂ ಪ್ರಪಂಚದಲ್ಲಿ ಬಹುಶ್ರಮ. ಎಂಥಾ ಒಳ್ಳೇ ಮನುಷ್ಯನಾಗಲೀ ಹೊರಗಡೆ ಡಂಭಕ್ಕೆ ಸೋಲುವನು. ನಿಮ್ಮ ಮಗನಲ್ಲಿ ಕೋಪವೂ, ದುಡುಕೂ, ವಿಶೇಷವಾಗಿದೆ ಎನ್ನುತೀರಿ, ಅದೇನೋ ಸರಿ. ಆದರೆ ಅದನ್ನೇ ಒಳ್ಳೇದಾರಿಗೆ ತಿರುಗಿಸಲಾಗಿ ಒಳ್ಳೇ ಪ್ರಯೋಜನ ಉಂಟಾಗುವುದು. ದುರ್ಮಾರ್ಗಕ್ಕೆ ಎಳೆಯುವ ಗುಣ ವನ್ನು ಸರಿಮಾಡಿಕೊಂಡರೆ, ಅದೇ ಸನ್ಮಾರ್ಗಕ್ಕೆ ಎಳೆಯುವ ಗುಣ ವಾಗುವುದು.

## ಪೋಲಕ, ಋಷಿ

ಒಂದಾನೊಂದು ಪಟ್ಟಣದಲ್ಲಿ ಪೋಲಕನೆಂಬ ಒಬ್ಬ ಹುಡುಗ ನಿದ್ದನು. ಬಾಲ್ಯದಿಂದಲೂ ಶಿಕ್ಷೆ ಇಲ್ಲದೆ ಇವನು ಪೋಲಿಯಾಗಿ ತಿರುಗುತಾ, ಕನ್ನಾ ಹಾಕುವುದು, ದಾರೀಕಟ್ಟಿ ತಲೆಹೊಡೆಯುವುದು, ಸಿಕ್ಕಿದವರ ಮನೆಗೂ ಹುಲ್ಲುಮೆದೆಗಳಿಗೂ ಬೆಂಕಿ ಹಾಕುವುದು, ಹೀಗೆಲ್ಲಾ ಮಾಡುತಾ, ಆವೂರಿಗೆ ದೊಡ್ಡ ಹೆಮ್ಮಾರಿಯಾಗಿದ್ದನು. ಸರಕಾರದವರು ಇವನನ್ನು ಆಗಾಗ್ಗೆ ಹಿಡಿದು ಶಿಕ್ಷೆ ಮಾಡುತಲೇ ಇದ್ದರು. ಇವನು ಸ್ವಲ್ಪಕಾಲದಲ್ಲಿಯೇ ದರಿದ್ರನಾದನು. ನೆಂಟರು ಇಷ್ಟರು ಯಾರೂ ಇವ ನನ್ನು ಹತ್ತಿರ ಸೇರಿಸಲಿಲ್ಲ. ತಿನ್ನುವುದಕ್ಕೆ ಗತಿ ಇಲ್ಲದೆ ಹೋಯಿತು. ಕೊನೆಗೆ ಕಾಡಿನಲ್ಲಿ ಯಾರೂ ಕಾಣದಹಾಗೆ ಅವಿತುಕೊಂಡಿರುತಾ, ಸಿಕ್ಕಿ ದವರ ಹತ್ತಿರ ಸಿಕ್ಕಿದ್ದನ್ನು ಸುಲಿದುಕೊಂಡು ಹೊಟ್ಟೇ ಹೊರೆಯು ತಿದ್ದನು. ಒಂದುದಿನ ಪೋಲಕನು ಅರಣ್ಯದಲ್ಲಿ ಹೋಗುತಿರುವಾಗ್ಗೆ ಒಂದು ಹಾಳುಗುಡಿ ಸಿಕ್ಕಿತು. ಅಲ್ಲಿರುವ ದೇವರನ್ನು ಕಿತ್ತು ಹಾಕಿ ದರೆ ಅದರ ಕೆಳಗೆ ಏನಾದರೂ ನಿಕ್ಷೇಪ ಸಿಕ್ಕಬಹುದೆಂದು, ಆ ದೇವಾ ಲಯದೊಳಕ್ಕೆ ಹೊಕ್ಕನು. ಗರ್ಭಗೃಹದವರೆಗೂ ಹೋಗುವಾಗ, ಒಳಗೆ ಒಬ್ಬ ಋಷಿಯು ತಪಸ್ಸು ಮಾಡುತಾ ಕೂತಿದ್ದನು. ಆಗ ಪೋಲಕನು ತನ್ನ ಮನಸ್ಸಿನಲ್ಲಿ—ಇಲ್ಲಿ ಯಾವನೋ ಕೂತಿದಾನೆ; ಇವನಿಗೆ ಒಂದು ಒದೆತವನ್ನು ಕೊಟ್ಟು ಉರುಳಿಸಿ ಇದ್ದದನ್ನು ಕಿತ್ತು ಕೊಂಡು ಹೋಗೋಣ, ಎಂದು ಯೋಚಿಸಿ, ಆ ಮುನಿಯ ಜಟೆಯನ್ನು

ಹಿಡಿದು ಮುಂದಕ್ಕೆ ಎಳೆದುಕೊಂಡು ಅವನನ್ನು ಹೊಡೆಯುವುದಕ್ಕೆ ಮೊದಲುಮಾಡಿದನು. ಋಷಿಯು ಎಚ್ಚತ್ತು ನೋಡಿ ತನಗೆ ದೊಡ್ಡ ವಿಪತ್ತು ಬಂತೆಂದು ತಿಳಿದು, ಆ ದುಷ್ಟನನ್ನು ಕುರಿತು—ಎಲ ಪ್ರಾಣಿ, ನನ್ನನ್ನು ಯಾಕೆ ಹೊಡೆಯುತೀಯೆ? ನನ್ನ ಬಳಿಯಲ್ಲಿ ಒಂದು ಸೋರೇಬುರುಡೆ ಒಂದು ಕೌಪೀನ, ಇಷ್ಟು ಹೊರತು ಏನೂ ಇಲ್ಲ. ನನ್ನನ್ನು ಹೊಡೆಯುವುದರಿಂದ ನಿನಗೆ ಪಾಪಮಾತ್ರ ಸಂಭವಿಸುವುದು. ಮನುಷ್ಯನು ಲೋಕದಲ್ಲಿ ಒಳ್ಳೇ ಕೆಲಸವನ್ನು ಮಾಡಿದರೆ ಅವನಿಗೆ ಒಳ್ಳೇದಾಗುವುದು; ಕೆಟ್ಟ ಕೆಲಸವನ್ನು ಮಾಡಿದರೆ ಕೆಟ್ಟದಾಗುವುದು. ಇದಕ್ಕೆ ನೀನೇ ದೃಷ್ಟಾಂತ. ನೀನೇನೋ ಸಮರ್ಥನೇ ಸರಿ. ಆದರೆ ಸಾಮರ್ಥ್ಯವನ್ನು ದುರ್ಮಾರ್ಗದಲ್ಲಿ ವೆಚ್ಚಮಾಡಿದೆ. ಆದ್ದರಿಂದ ಒಂದು ತುತ್ತು ಅನ್ನಕ್ಕೆ ಸಹಿತ ಗತಿ ಇಲ್ಲದವನಾಗಿದ್ದೀಯೆ. ಇಂಥಾ ಕಾರ್ಯಗಳನ್ನೇ ನೀನು ಮುಂದಕ್ಕೂ ಮಾಡಿದರೆ ನಿನ್ನ ಪಾತಕವು ಇನ್ನೂ ಹೆಚ್ಚುವುದು. ಇಂಥಾ ದಾರಿಯನ್ನೇ ಬಿಟ್ಟು ಒಳ್ಳೇತನವನ್ನು ಹಿಡಿ; ಈ ವೂರನ್ನು ಬಿಟ್ಟು ಇನ್ನೊಂದುವೂರಿಗೆ ಹೋಗಿ ಅಲ್ಲಿ ಕೃಷಿಮಾಡಿ, ಈಗ ನಿನಗೆ ಇರುವ ಸಾಮರ್ಥ್ಯವನ್ನೆಲ್ಲಾ ಉಪಯೋಗಿಸು. ನೀನು ಶ್ರೇಯೋವಂತನಾಗಿ ಬದುಕುತೀಯೆ; ಇತರರಿಗೂ ಉಪಕಾರವನ್ನು ಮಾಡುತೀಯೆ. ಹೀಗೆಂದು ಮುನಿ ನುಡಿದನು. ಈ ಬುದ್ಧಿವಾದವು ಪೋಲಕನ ಮನಸ್ಸಿಗೆ ಅಂಟಿತು. ಅವನು ಋಷಿಗೆ ನಮಸ್ಕಾರವನ್ನು ಮಾಡಿ ಆತನನ್ನು ಬಿಟ್ಟು ಮತ್ತೊಂದು ಊರಿಗೆ ಹೊರಟುಹೋದನು; ಅಲ್ಲಿ ಇವನು ಒಳ್ಳೇ ನಡತೆಯಿಂದ ದಿನಕ್ರಮೇಣ ಹಣವನ್ನು ಸಂಪಾದಿಸಿ ಸುಖವಾಗಿ ಬಾಳಿದನು.

ಹೀಗೆ ಕಥೆಯನ್ನು ಹೇಳಿ ಮುಗಿಸಿ, ರಾಮಜೋಯಿಸನು ನುಡಿದದ್ದು ಹೇಗೆಂದರೆ:

ಅಯ್ಯಾ ದೊರೆಯೆ, ಹುಡುಗರು ಕೆಟ್ಟುಹೋದರೆಂದು ನಿರಾಶೆಯಿಂದ ಸುಮ್ಮನೆ ಇರಬಾರದೆಂಬ ವಿಷಯವು ಈ ಕಥೆಯಿಂದ ಗೊತ್ತಾಯಿತಷ್ಟೆ? ಯಾವ ಕೆಲಸವನ್ನು ಮಾಡುವುದಕ್ಕೆ ತಮಗೆ ಸಂಪೂರ್ಣವಾದ ಯೋಗ್ಯತೆ ಇದೆ ಎಂಬ ಸಂಗತಿ ಯಾರಿಗೂ ತಿಳಿಯದು.

ಒಬ್ಬೊಬ್ಬರಲ್ಲಿ ಒಂದೊಂದು ಯೋಗ್ಯತೆ ಇದ್ದೇ ಇರುವುದು. ಆದರೆ ಅದು ಬೂದಿಮುಚ್ಚಿದ ಕೆಂಡದಹಾಗೆ ಪ್ರಕಾಶಕ್ಕೆ ಬರದೇ ಆರುತ್ತೆ. ಸ್ವಭಾವವಾದ ಇಂಥಾ ಶಕ್ತಿಯನ್ನು ಹೊರಪಡಿಸುವಂತೆ ಮಾಡುವುದು ವಿದ್ಯಾವ್ಯಾಸಂಗ. ದುರ್ಮಾರ್ಗಕ್ಕೆ ತಿರುಗಿಸಿದರೆ ಕೆಟ್ಟಗುಣವೆನ್ನಿಸಿ ಕೊಳ್ಳತಕ್ಕ ಶಕ್ತಿಯೇ ಸನ್ಮಾರ್ಗಕ್ಕೆ ತಿರುಗಿಸಿದರೆ ಮಹಾಕಾರ್ಯಗಳನ್ನು ನಿರ್ವಹಿಸತಕ್ಕ ಸದ್ಗುಣವಾಗುವುದು.

ದೊರೆ—ಕೆಟ್ಟುಹೋಗಿದ್ದ ಪೋಲಕನಿಗೆ ಋಷಿಯ ದೆಸೆಯಿಂದ ಹೇಗೆ ಬುದ್ಧಿಬಂತೋ ಹಾಗೆಯೇ ನನ್ನ ಮಗನಿಗೆ ತಮ್ಮಿಂದ ಬುದ್ಧಿ ಬರಬೇಕಾಗಿದೆ. ತಮ್ಮ ಕೈಲಿ ಕೊಟ್ಟಿದ್ದೇನೆ. ಹೇಗಾದರೂ ಮಾಡಿ. ಆದರೆ ಈಗ ಅವನ ಸ್ಥಿತಿ ನೋಡಲಾಗಿ ಅವ ಹೇಗೆ ಯೋಗ್ಯನಾದನೊ ತಿಳಿಯದು. ಜೋಯಿಸ—ಅವನ ಬುದ್ಧಿ ಹೇಗೆ ಇದೆಯೊ ಅದರ ಪ್ರಕಾರ ಆಗುವುದು. ಆದರೆ ಅವನು ಸ್ವಭಾವದಲ್ಲಿ ಒಳ್ಳೇತನ, ಔದಾರ್ಯ, ದಯಾರಸ ಇವುಗಳನ್ನುಳ್ಳವನಾಗಿದಾನೆ. ಆಗಲೇ ಅವನು ಮಾಡಿದ ಕೆಟ್ಟಕೆಲಸಗಳಿಗಾಗಿ ಅವನಿಗೆ ನಾಚಿಕೆಹುಟ್ಟಿರಬೇಕು. ಪರೀಕ್ಷಿಸಿ ನೋಡೋಣ.

ಹೀಗೆ ಹೇಳಿ ದೊರೆಯು ಜೋಯಿಸನನ್ನು ತನ್ನ ಅರಮನೆಯ ಅಂತಃಪುರಕ್ಕೆ ಕರೆದುಕೊಂಡು ಹೋದನು. ಅಲ್ಲಿ ಅರಸಿಯೇ ಮೊದ ಲಾದವರೆಲ್ಲರೂ ಆತನಿಗೆ ಬಹಳ ಮರ್ಯಾದೆಯನ್ನು ತೋರಿಸಿದರು. ಆದರೆ ಅರೆಗಳಿಗೆಗೆ ಮುಂಚೆ ಎಲ್ಲರೂ ಕೊಂಡಾಡುತಿದ್ದ ಮದನನಿಗೆ ಉಪಾಧ್ಯಾಯನನ್ನು ಕಂಡಕೂಡಲೆ, ಹಾವಿಗೆ ಗರುಡಪಕ್ಷಿಯನ್ನು ತೋರಿಸಿದಂತೆ ಆಯಿತು. ಆತನಿಗೆ ತಕ್ಕ ಮರ್ಯಾದೆಯನ್ನೇನೋ ಮಾಡಿದನು; ಆತ ಕೇಳಿದ ಮಾತಿಗೆಲ್ಲಾ ಸದುತ್ತರವನ್ನು ಬಹು ವಿನಯವಾಗಿಯೇನೋ ಹೇಳಿದನು. ಆದರೆ ಅವನ ತಲೆಯು ಕೆಳಕ್ಕೆ ಬಗ್ಗಿ ಇತ್ತು. ಏನೋ ಒಂದು ಬಗೆಯ ವ್ಯಸನವೂ ಪಶ್ಚಾತ್ತಾಪವೂ ಅವನ ಮುಖದಲ್ಲಿ ತೋರಿಬರುತಿತ್ತು. ಇದನ್ನು ಕಂಡು ಜೋಯಿಸನು ಅರಸನನ್ನು ನೋಡಿ—ಮದನನಲ್ಲಿ ಇರುವ ಒಳ್ಳೇ ಗುಣಕ್ಕೆ ಜಾಗ್ರತೆ ಯಾಗಿ ದೃಷ್ಟಾಂತ ದೊರೆಯುವುದು, ಎಂದು ರಹಸ್ಯವಾಗಿ ಹೇಳಿದನು.

ಇದನ್ನು ಕೇಳಿ ದೊರೆಗೆ ಸಂತೋಷವಾಯಿತು.

ಕೂಡಲೆ ಅಕ್ಷತೆಪ್ರಸ್ತಕ್ಕಾಗಿ ಅರಮನೆಗೆ ಬಂದಿದ್ದ ನಂಟರೆಲ್ಲಾ ತಂತಮ್ಮ ಊರಿಗೆ ಹೊರಟು ಹೋದರು. ಲಲಿತೆಯು ಸ್ವಲ್ಪ ದಿವಸ ಹೆಚ್ಚಾಗಿ ಉಳಿದಳು. ಒಂದು ದಿನ ಭೋಜನವೆಲ್ಲಾ ಆದ ತರುವಾಯ ದೊರೆ, ದೊರೇ ಹೆಂಡತಿ, ರಾಮುಜೋಯಿಸ, ಲಲಿತೆ, ಮದನ ಇವರೆಲ್ಲರೂ ಓಲಗಶಾಲೆಯಲ್ಲಿ ಸೇರಿದರು. ಜೋಯಿಸರಿಗೆ ಜೂಜಾಡುವುದು ಇಷ್ಟವಿಲ್ಲವಾದಕಾರಣ, ಲಲಿತೆಯು ಒಂದು ಕಥೆಯನ್ನು ಓದಬೇಕೆಂದು ಗೊತ್ತುಮಾಡಿದರು. ಆ ಪ್ರಕಾರ ಲಲಿತೆಯು ಓದಿದ ಕಥೆ ಹೇಗೆಂದರೆ:–

## ಮಲ್ಲ ಹೊಲ್ಲರ ಕಥೆ

ಒಂದು ಊರಿನಲ್ಲಿ ನೆರೆಮನೆ ಹೊರಮನೆಯಲ್ಲಿ ವಾಸವಾಗಿದ್ದ ಇಬ್ಬರು ಕುರುಬರಿಗೂ ಇಬ್ಬರು ಗಂಡುಮಕ್ಕಳು ಇದ್ದರು. ಇವರಲ್ಲಿ ಒಬ್ಬನ ಹೆಸರು ಮಲ್ಲ; ಮತ್ತೊಬ್ಬನ ಹೆಸರು ಹೊಲ್ಲ. ಈ ಹುಡುಗರಿಬ್ಬರೂ ಒಟ್ಟಿಗೆ ತಂತಮ್ಮ ತಂದೆಯ ಕುರಿಗಳನ್ನು ಕಾಯುತಾ, ಕಾಡಿನಲ್ಲಿ ಸುತ್ತಾಡಿಕೊಂಡು ಇರುತಿದ್ದರು.

ಮಲ್ಲನು ದೃಢಾಂಗನಾಗಿಯೂ, ಸೌಮ್ಯವಾದ ಮುಖವುಳ್ಳವನಾಗಿಯೂ ಇದ್ದನು. ಹೊಲ್ಲನು ದೇಹದಾರ್ಢ್ಯದಲ್ಲಿ ಸ್ವಲ್ಪ ಕಡಿಮೆಯಾಗಿಯೂ ಎಂಥಾ ಕಷ್ಟತರವಾದ ಕಾರ್ಯಕ್ಕೂ ಅನುಕೂಲವಾಗಿರುವಂತೆ ಲಿವಿಯಾದ ಅಂಗಗಳುಳ್ಳವನಾಗಿಯೂ ಇದ್ದನು. ಮುಖದಲ್ಲಿ ರೌದ್ರವೂ ಅಹಂಕಾರವೂ ಕಾಣುತಿತ್ತು.

ಇವರಿಬ್ಬರೂ ಕಾಡಿನಲ್ಲಿ ತಂತಮ್ಮ ಕುರಿಗಳನ್ನು ಕಾಯುತಿರುವಾಗ, ಹೊಲ್ಲನು ಮಲ್ಲನನ್ನು ನೋಡಿ—ಮಲ್ಲ, ನೋಡು, ಆ ಹದ್ದು ಎಷ್ಟು ಮೇಲಕ್ಕೆ ಹಾರಿ ಹೋಗಿದೆ; ಅದಕ್ಕೆ ಇರುವಂತೆ ನನಗೂ ರೆಕ್ಕೆ ಇದ್ದರೆ, ನಾನೂ ಮೇಲಕ್ಕೆ ಹಾರಿ ಹೋಗುತಿದ್ದೆ.

ಮಲ್ಲ—ದುಷ್ಟತನದಲ್ಲಿಯೂ ಕೆಟ್ಟತನದಲ್ಲಿಯೂ ಹದ್ದು ಎತ್ತಿದ ಕೈ. ಆಕಾಶದಲ್ಲಿ ಹಾರಾಡುವ ಹಕ್ಕಿಗಳಿಗೆಲ್ಲಾ ಇದು ಶತ್ರುವಾಗಿದೆ ಈ ಹದ್ದಿನ ಹಾಗೆ ಇರುವುದಕ್ಕಿಂತಲೂ, ಆಗೋ ಆ ನದೀತೀರದಲ್ಲಿ ಹಾರಾಡುವ ಹಂಸದ ಹಾಗೆ ಇದ್ದರೆ ಚೆನ್ನಾಗಿ ಇದ್ದೀತು. ಹಂಸವು

ಒಬ್ಬರ ತಂಟೆಗೂ ಹೋಗುವುದಿಲ್ಲ. ತನ್ನ ತಂಟೆಗೆ ಯಾರಾದರೂ ಬಂದರೆ ಬಿಡುವುದಿಲ್ಲ.

ಹೀಗೆ ಮಾತನಾಡುತಿರುವ ಸಮಯದಲ್ಲಿ ಒಂದು ಹದ್ದು ಆಕಾಶ ದಿಂದ ಕೆಳಕ್ಕೆ ಬಂದು ಕೋಳೀಮರಿಯೊಂದನ್ನು ಎತ್ತಿಕೊಂಡು ಹಾರಿತು. ಕೂಡಲೆ ಹತ್ತಿರ ಕಾದುಕೊಂಡಿದ್ದ ಒಬ್ಬ ಹುಡುಗನು ತನ್ನ ಬಿಲ್ಲಿನಿಂದ ಒಂದು ಕಲ್ಲನ್ನು ಹೊಡೆಯಲು, ಹದ್ದು ಆ ಏಟನ್ನು ತಿಂದು ಕೆಳಕ್ಕೆ ಬಿದ್ದು ಮರಣಸಂಕಟದಿಂದ ಒದ್ದಾಡುತಿತ್ತು.

ಮಲ್ಲ—ವಿಶೇಷವಾಗಿ ದುರಾಶೆಯುಳ್ಳ ಜನರ ಪಾಡೆಲ್ಲಾ ಕೊನೆಗೆ ಹೀಗೆಯೇಸರಿ. ಎಲ್ಲರಿಗಿಂತಲೂ ಹೆಚ್ಚಾಗಿ ತಾವು ಮೇಲಕ್ಕೆ ಏರ ಬೇಕೆಂದು ಯತ್ನಮಾಡುವಾಗ, ಏನೋ ಒಂದು ಬಿಜ್ಜುಬಡಿದು ಅವರು ಕೆಳಕ್ಕೆ ಬೀಳುತಾರೆ.

ಹೊಲ್ಲ—ನಾನು ಗಗನಕ್ಕೆ ಹಾರಿ ಪ್ರಾಣವನ್ನು ಬಿಟ್ಟಾದರೂ ಬಿಟ್ಟೇನು; ಇಲ್ಲಿ ಕೆಳಗೆ ಬಿದ್ದಿರಲಾರೆ.

ಮಲ್ಲ—ನಮ್ಮ ಕಷ್ಟಸುಖಗಳೆರಡೂ ದೇವರ ಕೈಲಿದೆ. ನಿರಪ ರಾಧಿಗಳನ್ನು ಅನ್ಯಾಯವಾಗಿ ಹಿಂಸೆಮಾಡಿ ಮೇಲಕ್ಕೆ ಏರುವುದ ಕ್ಕಿಂತಲೂ, ಒಬ್ಬರ ಗೋಜಿಗೂ ಹೋಗದೆ ಕೆಳಗೆ ಬಿದ್ದಿರುವುದು ಮೇಲು.

ಹೀಗೆ ಇಬ್ಬರೂ ಮಾತನಾಡಿಕೊಂಡರು. ಮಲ್ಲನು ಯಾವಾಗಲೂ ನಿಧಾನಿಯಾಗಿ ಒಳ್ಳೇ ಕಾರ್ಯಗಳನ್ನು ಮಾಡುವುದರಲ್ಲಿಯೇ ಬುದ್ಧಿ ಯುಳ್ಳವನಾಗಿದ್ದನು. ಆದರೆ ಹೊಲ್ಲನು ಮರಗಳನ್ನು ಹತ್ತುತಾ, ಬೆಟ್ಟಗಳನ್ನು ಹತ್ತುತಾ, ಅಲ್ಲಿಂದ ಧುಮುಕುತಾ, ಇವೇ ಮೊದಲಾದ ಅನೇಕ ಸಾಹಸ ಕಾರ್ಯಗಳನ್ನು ಮಾಡುವುದರಲ್ಲಿಯೇ ಬುದ್ಧಿಯುಳ್ಳವ ನಾಗಿದ್ದನು. ಒಂದು ದಿನ ಕಾಡಿನಲ್ಲಿ ಹೋಗುತಿರುವಾಗ ಹೊಲ್ಲನಿಗೆ ಒಂದು ತೋಳನಮರಿ ಸಿಕ್ಕಿತು. ಅವನು ಅದನ್ನು ಹಿಡಿದುಕೊಂಡು ಮನೆಗೆ ತಂದು ಅದನ್ನು ಸಾಕುತಾಬಂದನು. ಆ ತೋಳವು ದಿನಕ್ರಮ ದಲ್ಲಿ ದೊಡ್ಡದಾಗುತಾ ನೆರೆಹೊರೆಯವರ ಕುರಿಗಳನ್ನೂ ಮೇಕೆಗಳನ್ನೂ ಹಿಡಿದು ಕೊಲ್ಲುತಾ ಇತ್ತು. ಇಂಥಾ ಮೃತ್ಯುವನ್ನು ಸಾಕಿ ಎಲ್ಲರಿಗೂ

ಹಿಂಸೆಯನ್ನುಂಟುಮಾಡುವುದು ಸರಿಯಲ್ಲವೆಂದು ಯಾರು ಎಷ್ಟು ಹೇಳಿದಾಗ್ಯೂ ಹೊಲ್ಲನು ಅಂಥವರ ಮೇಲೆ ಬಿದ್ದು ಅವರನ್ನು ಹೊಡೆಯುವುದಕ್ಕೆ ಹೋಗುತಿದ್ದನು. ಹೀಗೆ ಈ ಹೊಲ್ಲನು ಆ ಊರಿನ ಜನಗಳಿಗೆ ಮಾರಿಯಾಗಿದ್ದನು. ಇವನ ತೋಳವು ಹೆಮ್ಮಾರಿಯಾಗಿತ್ತು.

ಈ ತೋಳವು ಒಂದು ದಿನ ಮಲ್ಲ ಮೇಯಿಸುತಿದ್ದ ೩ ಆಡುಗಳನ್ನು ಯಾರೂ ಇಲ್ಲದ ಸಮಯದಲ್ಲಿ ಹೊಡೆದು ಕೊಂದು ಅವುಗಳನ್ನು ತಿನ್ನುವುದಕ್ಕೆ ಆರಂಭಿಸಿತು. ಮಲ್ಲನು ಇದನ್ನು ಕಂಡು ಅದನ್ನು ಹಿಡಿದುಕೊಳ್ಳುವುದಕ್ಕೆ ಹೋಗಲು, ಆ ದುಷ್ಟ ಜಂತುವು ಇವನ ಮೇಲೆ ಬಿದ್ದು ಗಾಯವನ್ನು ಮಾಡಿತು. ಆಗ ಮಲ್ಲನು ಅದನ್ನು ಲಕ್ಷ್ಯಮಾಡದೆ ತೋಳನನ್ನು ಹಿಡಿದು ಅದರ ಕತ್ತನ್ನು ಕಿವಿಚಲು ಆರಂಭಿಸಿದನು. ಇವನ ಶಕ್ತಿ ಬಲವಾದ್ದರಿಂದ ಅದರ ತುಂಟತನ ಏನೂ ನಡೆಯದೇ ಹೋಯಿತು. ಕೊನೆಗೆ ತೋಳನು ಸತ್ತು ಕೆಳಕ್ಕೆ ಬಿತ್ತು.

ತನ್ನ ತೋಳನಿಗೆ ಈ ಗತಿ ಬಂದದ್ದನ್ನು ಕಂಡು ಹೊಲ್ಲನು, ಮಹಾ ಕೋಪದಿಂದ ಮಲ್ಲನ ಮೇಲೆ ಬಿದ್ದು ಹೊಡೆಯುವುದಕ್ಕೆ ಹೋದನು. ಮಲ್ಲನು ಬುದ್ಧಿಹೀನನಾದ ಹೊಲ್ಲನ ಆಟೋಪವನ್ನೆಲ್ಲಾ ನೋಡಿ ಆತ್ಮಸಂರಕ್ಷಣಾರ್ಥವಾಗಿ ಅವನನ್ನು ಎದುರಿಸಲು ತಾನು ಅನುವಾದನು. ಇಬ್ಬರಿಗೂ ದೊಡ್ಡದಾಗಿ ಮಲ್ಲಯುದ್ಧ ತೊಡಗಿತು. ಕೊನೆಗೆ ಮಲ್ಲನು ಹೊಲ್ಲನನ್ನು ಕೆಳಕ್ಕೆ ಕೆಡವಿ ಮೇಲೆಹತ್ತಿ ಕೂತುಕೊಂಡು— ಎಲ ಹೊಲ್ಲಾ ! ನೀನು ದುಷ್ಟನಾಗಿದ್ದೀಯೆ ; ಅದಕ್ಕೆ ತಕ್ಕ ಫಲವನ್ನು ಅನುಭವಿಸಿದೆ. ಇನ್ನುಮೇಲೆ ಒಳ್ಳೇದಾರಿಯಲ್ಲಿ ನಡೆ. ನನ್ನಮೇಲೆ ನೀನು ಕೈಮಾಡಿದ್ದರಿಂದ ಇಷ್ಟಕ್ಕೆ ಬಂತು. ಇಲ್ಲದಿದ್ದರೆ ನಿನ್ನ ತಂಟೆಗೆ ನಾನು ಬರುತಿರಲಿಲ್ಲ. ಇಂದಿಗೆ ನಿನ್ನನ್ನು ಪ್ರಾಣಸಹಿತ ಬಿಟ್ಟಿದೇನೆ. ಎದ್ದುಹೋಗು, ಎಂದನು. ಕೂಡಲೆ ಹೊಲ್ಲನು ನಾಚಿಕೊಂಡು ಹೊರಟು ಹೋದನು.

ಇದು ನಡೆದ ಸ್ವಲ್ಪ ದಿವಸಕ್ಕೆ ಮಲ್ಲನು ಕಾಡಿನಲ್ಲಿ ಕುರಿಗಳನ್ನು ಕಾಯುತಿರುವಾಗ ದಂಡಿನ ಜನರು ಊರಿಂದ ಊರಿಗೆ ಹೋಗುತಾ

ಗಟ್ಟಿಮುಟ್ಟಾಗಿದ್ದ ಇವನನ್ನು ಕಂಡು—ಎಲ ಕುರುಬ, ಕುರೀಕಾಯು ವುದರಿಂದ ನಿನಗೆ ಬರುವುದೇನು? ನಮ್ಮ ಜೊತೆಗೆ ಬಾ. ನೀನು ಬಲವಾಗಿದ್ದೀಯೆ. ಚೆನ್ನಾಗಿ ಯುದ್ಧಮಾಡಬಹುದು. ಕೊಳ್ಳೇ ಹೊಡೆದುಕೊಂಡು ಬರಬಹುದು. ನಿನ್ನ ಬಡತನವೆಲ್ಲಾ ಇದರಿಂದ ಹೋಗುವುದು ಎಂದರು. ಅದಕ್ಕೆ ಮಲ್ಲನು—ಸ್ವಾಮಿ, ನಮ್ಮ ತಂದೆ ತಾಯಿಗಳು ಬಹಳ ಮುದುಕರು. ಅವರನ್ನ ಬಿಟ್ಟು ಬಂದರೆ, ಪಾಲ ನೆಗೆ ಯಾರೂ ಇಲ್ಲದೆ ಅವರು ಕಾಡಪಾಲಾಗುವರು. ಇದೂ ಅಲ್ಲದೆ ನಿಮ್ಮ ದಂಡಿಗೆ ಬಂದು ಸೇರಿದರೆ, ನಿರಪರಾಧಿಗಳಾದ ಅನೇಕರನ್ನು ಕೊಲ್ಲಬೇಕು. ಅನೇಕರಿಗೆ ಹಿಂಸೆಕೊಡಬೇಕು. ಇದರಿಂದ ಪಾಪ ಸಂಭವಿಸುವುದು. ನನ್ನ ಕುರಿಯೇ ನನಗೆ ಸಾಕು ಎಂದನು.

ಈ ಮಾತಿಗೆ ಕೋಪಗೊಂಡು ದಂಡಿನ ಭಟರು ದಪ್ಪವಾಗಿ ಬೆಳೆ ದಿದ್ದ ಅವನ ಒಂದೆರಡು ಕುರಿಗಳನ್ನು ಎತ್ತಿಕೊಂಡು ಹೋದರು. ಈ ತುಂಟತನವನ್ನು ಕಂಡು ರೋಷದಿಂದ ಮಲ್ಲನು ಕೈಯಲ್ಲಿ ಒಂದು ಕಟ್ಟಿಗೆಯನ್ನು ಹಿಡಿದು—ನನ್ನ ಕುರಿಗಳನ್ನು ಬಿಟ್ಟು ಬದಲು ಮಾತ ನಾಡಿ, ಇಲ್ಲದಿದ್ದರೆ ನನ್ನ ಸಂಗಡ ಜಗಳಕ್ಕೆ ಬನ್ನಿ ಎಂದನು. ದಂಡಿ ನವರು ಇದನ್ನು ಲಕ್ಷ್ಯಮಾಡದೆ ಇರಲು, ಮಲ್ಲನು ತನ್ನ ದೊಣ್ಣೆ ಯನ್ನು ತಿರುಗಿಸುತಾ ಅವರ ಮೇಲೆ ಬಿದ್ದು, ಎಲ್ಲರಿಗೂ ಪೆಟ್ಟುಮಾಡಿ ಕುರಿಯನ್ನು ಬಿಡಿಸಿಕೊಂಡದ್ದಲ್ಲದೆ ಅವರ ಸೇನಾಪತಿಯ ಸಮೀಪಕ್ಕೆ ಹೋಗಿ, ನಡೆದ ಸಮಾಚಾರವನ್ನೆಲ್ಲಾ ತಿಳಿಸಿದನು. ಆಗ ಆ ಸೇನಾ ಪತಿಯು ತನ್ನ ಭಟರ ತುಂಟತನಕ್ಕಾಗಿ ಅವರನ್ನು ಶಿಕ್ಷಿಸಿ, ಮುಂದಕ್ಕೆ ಹೊರಟನು.

ಹೀಗೆ ಅವರು ಮುಂದಕ್ಕೆ ಹೋಗುತಿರುವಾಗ, ಹೊಲ್ಲನು ಇವರನ್ನು ಕಂಡು ಬೆರಗಾದನು. ನಮ್ಮ ಜೊತೆಗೆ ಬರುತೀಯಾ ಎಂದು ಸೇನೆಯವರು ಅವನನ್ನು ಕೇಳಿದರು. ಹೊಲ್ಲನು ಆಗಲಿ ಎಂದು ಒಪ್ಪಿ ಅವರ ಸಂಗಡ ಹೊರಟನು. ಇವನು ಶತ್ರುಗಳನ್ನು ಕೊಲ್ಲುವುದರಲ್ಲಿಯೂ, ಗಡಿದುರ್ಗಗಳನ್ನು ಹಿಡಿಯುವುದರಲ್ಲಿಯೂ ವಿಶೇಷ ಪರಾಕ್ರಮವನ್ನು ತೋರಿಸಿದ ಕಾರಣ, ಇವನ ಖ್ಯಾತಿಯು

ದಿನೇ ದಿನೇ ಹೆಚ್ಚುತ ಬಂತು. ಸ್ವಲ್ಪ ದಿವಸದಲ್ಲಿಯೇ ಇವನಿಗೆ ದೊಡ್ಡ ಸೇನಾಧಿಕಾರವಾಯಿತು.

ಈ ಕಥೆಯನ್ನು ಉದ್ದಕ್ಕೂ ಕೇಳುತಾ ಇದ್ದ ಮದನನ ಕಣ್ಣಿನಲ್ಲಿ ನೀರು ಸುರಿಯುವುದಕ್ಕೆ ಮೊದಲಾಯಿತು. ಮಗು, ಯಾಕಪ್ಪಾ ಅಳುತೀಯೆ? ಎಂದು ರಾಣಿಯು ಕೇಳಲು—ಅಮ್ಮಯ್ಯ, ನನಗೆ ಸುಮತಿಯ ಜ್ಞಾಪಕಬಂತು. ಸುಮತಿಗೆ ಈ ಮಲ್ಲನ ವಯಸ್ಸು ಬಂದರೆ, ಅವನೂ ಇವನ ಹಾಗೇ ಬಹು ಒಳ್ಳೆಯವನಾಗಿದ್ದಾನು, ಎಂದು ಮದನನು ಹೇಳಿದನು. ಆಗ ರಾಣಿಯು—ಯಾಕೆ ಹಾಗನ್ನು ತೀಯೆ? ಹೊಲ್ಲ ಏನು ಕಡಮೆಯಾಗಿದಾನೆಯೆ? ಸೈನ್ಯದಲ್ಲಿ ದೊಡ್ಡ ಅಧಿಕಾರವನ್ನು ಮಾಡುತಿದಾನಲ್ಲ? ಎಂದಳು. ಮದನನು-ಅಮ್ಮಯ್ಯ, ಹಾಗಲ್ಲ. ಹೊಲ್ಲ ಎಂಥಾ ಪದವಿಯಲ್ಲಾದರೂ ಇರಲಿ, ಅದರಿಂದ ಬಂದ ಭಾಗ್ಯವೇನು? ತಂದೆತಾಯಿಗಳಲ್ಲಿಯೂ, ದೇವರಲ್ಲಿಯೂ ವಿಶೇಷ ಭಕ್ತಿಯನ್ನಿಟ್ಟುಕೊಂಡಿರುವಂಥಾ ಮಲ್ಲನು ಏನೂ ಅರಿಯದವನೆಂದು ಹಳಿಯಲಾಗದು. ಹೊಲ್ಲನ ಡಂಭವೆಲ್ಲಾ ಹಾಗಿರಲಿ. ಮಲ್ಲನೇ ಉತ್ತಮ, ನಾನು ಆ ಹೊಲ್ಲನ ಹಾಗೆ ಒಬ್ಬ ನೀಚ.

ಹೀಗೆಂದು ಮಗ ಆಡಿದ ಮಾತನ್ನು ದೊರೆ ಕೇಳಿ, ಇಷ್ಟು ಜಾಗ್ರತೆಯಾಗಿ ಬುದ್ಧಿಬಂತಲ್ಲಾ ಎಂದು ಸಂತೋಷಪಡುತಾ, ಅವನನ್ನು ಕುರಿತು—ಮಗು ನಿನ್ನ ತಪ್ಪು ನಿನಗೆ ತಿಳಿಯಿತಲ್ಲಾ, ನನಗೆ ಅಷ್ಟೇ ತೃಪ್ತಿಯಾಯಿತು, ಎಂದು ಹೇಳಿದನು. ಲಲಿತೆಯು ಕಥೆಯನ್ನು ಮುಂದಕ್ಕೆ ಓದಲು ಆರಂಭಿಸಿದಳು, ಹೇಗೆಂದರೆ:—

ಮಲ್ಲನು ತನ್ನ ಕುರೀಹಿಂಡನ್ನು ಕರೆದುಕೊಂಡು ಹೋಗಿ, ಬೆಟ್ಟದ ಕಿಬ್ಬೆಯಲ್ಲಿ ಮೇಯಿಸುವ ಪದ್ಧತಿಯಿತ್ತು. ಅಲ್ಲಿನ ಹೊದರುಗಳಲ್ಲಿಯೂ, ಗುಹೆಗಳಲ್ಲಿಯೂ, ಹುಲಿ, ಕಿರುಬ, ತೋಳ ಮುಂತಾದ ದುಷ್ಟಜಂತುಗಳು ಸೇರಿಕೊಂಡು, ಮೇಯುವುದಕ್ಕೆ ಬಂದ ಕುರಿಗಳಲ್ಲಿ ಯಾರೂ ಅರಿಯದಂತೆ ಒಂದೊಂದು ಕುರಿಯನ್ನು ಕಚ್ಚಿಕೊಂಡು ಓಡಿ ಹೋಗುತಿದ್ದವು. ಇಂಥಾ ಕೆಟ್ಟ ಮೃಗಗಳನ್ನು ಕೊಂದು, ಊರ ಜನಕ್ಕೆ ಉಪಕಾರಮಾಡುವುದರಲ್ಲಿ ಹೊರತು, ಮತ್ತೆ ಯಾವ ವಿಧವಾದ

ಪ್ರಾಣಿಹಿಂಸೆಯಲ್ಲಿಯೂ ಮಲ್ಲನಿಗೆ ಇಷ್ಟವಿರಲಿಲ್ಲ. ಎಲ್ಲಾ ಭಾಗ ದಲ್ಲಿಯೂ ಶಕ್ತನಾದ ಇವನನ್ನೇ ಮುಂದಾಳಾಗಿ ಇಟ್ಟುಕೊಂಡು, ಅವ ಹೇಳಿದಂತೆ ಕೇಳಿಕೊಂಡು ಆ ಊರ ಕುರುಬರು ತಮ್ಮ ಕುರೀಹಿಂಡು ಗಳನ್ನು ಕಾಪಾಡಿಕೊಳ್ಳುತಿದ್ದರು.

ಮಲ್ಲನು ಒಂದು ದಿನ ಈಟಿಯನ್ನು ಕೈಯಲ್ಲಿ ಹಿಡಿದು ಹೆಚ್ಚಾಗಿ ಹಾವಳಿಮಾಡುತಿದ್ದ ಒಂದು ಕಿರುಬನನ್ನು ಹರಿಸಿಕೊಂಡು ಹೋದನು. ಅದು ದಿಕ್ಕು ದಿಕ್ಕಿಗೆ ಓಡಿ ಹೋಯಿತು. ಅದರ ಹಿಂದೆ ಹಿಂದೆಯೇ ಇವನೂ ಹೋಗಿ ಅದನ್ನು ಕೊಂದನು. ಆದರೆ ದಾರಿತಪ್ಪಿ ಹೋಯಿತು. ಎತ್ತ ನೋಡಿದರೂ ದೊಡ್ಡ ದೊಡ್ಡ ಬಂಡೆಗಳೇ ಕಾಣುತಿದ್ದವು. ಅಲ್ಲಿಂದ ಈಚೆಗೆ ಬರಬೇಕೆಂದು ಸ್ವಲ್ಪ ದೂರ ಹೊರಡಲು, ಒಂದು ದೊಡ್ಡ ಕಾಡು ಸಿಕ್ಕಿತು. ದೊಡ್ಡ ದೊಡ್ಡ ಮರಗಳು ಒತ್ತಾಗಿ ಬೆಳೆದಿದ್ದವು. ಹೆಜ್ಜೆಯಿಡುವುದಕ್ಕೆ ಕೂಡ ಸ್ಥಳವಿರಲಿಲ್ಲ. ಬಂಡೆಗಳ ಮೇಲಿನಿಂದ ದೊಣೆನೀರು ಅಲ್ಲಲ್ಲಿ ಹೇರಳವಾಗಿ ಸುರಿಯುತಿತ್ತು. ಆ ಸಮಯಕ್ಕೆ ಸರಿಯಾಗಿ ಸಾಯಂಕಾಲವಾಯಿತು. ಸೂರ್ಯ ಮುಳುಗಿದನು. ಕತ್ತಲೆ ಕವಿಯಿತು. ಸ್ವಲ್ಪ ದೂರ ಹೋಗಲು, ಆಚೆಗೆ ಕಣ್ಣೇ ಕಾಣಿಸ ಲಿಲ್ಲ. ಸ್ವಲ್ಪ ವಿರಾಮವಾಗಿದ್ದ ಆ ಪ್ರದೇಶದಲ್ಲಿ ಒಂದು ಬಂಡೆಯ ಕೆಳಗೆ ರಾತ್ರೆ ಮಲಗಿದ್ದು ಬೆಳಗಾದ ಮೇಲೆ ದಾರಿಯನ್ನು ಹುಡುಕಿ ಕೊಂಡು ಊರ ಕಡೆ ಹೋಗೋಣವೆಂದು ಇವನು ಕೂತುಕೊಂಡನು. ಸ್ವಲ್ಪ ದೂರದಲ್ಲಿ ಒಂದು ಬಂಡೇ ಸಮೀಪದಲ್ಲಿ ಬೆಳಕು ಕಾಣಿಸಿತು. ಅದು ಇರುವ ದಿಕ್ಕಿಗೆ ಮಲ್ಲನು ತಡವರಿಸಿಕೊಂಡು ಮೆಲ್ಲಗೆ ಹೋಗಿ ಮರೆಯಾಗಿನಿಂತು ನೋಡುವಾಗ, ಅಲ್ಲಿ ಕೆಲವು ಸಿಪಾಯಿಗಳು ಕೂತು ಬೆಂಕೀ ಕಾಯಿಸಿಕೊಳ್ಳುತಿದ್ದರು. ಅವರ ಮಧ್ಯೆ ಬಹಳ ವಯಸ್ಸಾದ ಒಬ್ಬ ಮುದುಕನೂ ಅವನ ಹತ್ತಿರ ರೂಪಿಣಿಯಾಗಿ ಪ್ರಾಯಸಮರ್ಥ ಳಾಗಿದ್ದ ಒಬ್ಬ ಹುಡುಗಿಯೂ ಕೂತಿದ್ದರು. ಆ ಹುಡುಗಿ ಕಣ್ಣಿನಲ್ಲಿ ನೀರಸುರಿಸುತಾ ಇದ್ದಳು. ಆ ಸಿಪಾಯಿಗಳ ಹಾರಾಟವನ್ನೂ ಈ ಮುದುಕನ ಅತಿ ದೀನವಾದ ಮುಖರಸವನ್ನೂ ನೋಡಿ, ಆ ವೃದ್ಧನೂ ಹುಡುಗಿಯೂ ಇವರ ಕೈಗೆ ಸೆರೆಸಿಕ್ಕಿರಬೇಕೆಂದು ಯೋಚಿಸಿ, ಅವರನ್ನು

ಬಿಡಿಸಿಕೊಳ್ಳುವುದಕ್ಕೆ ಯತ್ನಿಸಲು ಹೊರಟನು. ಆದರೆ ಏನು ಪ್ರಯೋಜನ? ಮಲ್ಲನ ಹತ್ತಿರ ಒಂದು ಆಯುಧವೂ ಇರಲಿಲ್ಲ. ಸಹಾಯಕ್ಕೆ ಮತ್ತೆ ಯಾರೂ ಇಲ್ಲ. ಸಿಪಾಯಿಗಳಾದರೊ ನೂರಾರು ಜನದ ಮೇಲಿದ್ದರು. ಆದಕಾರಣ ಇವರನ್ನು ಉಪಾಯದಿಂದ ಗೆಲ್ಲಬೇಕೆಂದು ಯೋಚಿಸಿ ತನ್ನ ಬಳಿಯಲ್ಲಿದ್ದ ಗುಂಡುಗೊಡಲಿಯಿಂದ ಮರದ ಕೊಂಬೆಗಳನ್ನು ಕಡಿದು ಅದಕ್ಕೆ ಬೆಂಕಿಹತ್ತಿಸಿದನು. ಆ ಎತ್ತರವಾದ ಸ್ಥಳದಲ್ಲಿ ಉರಿಯುತಿದ್ದ ಆ ಬೆಂಕಿಯ ಪ್ರಭೆಯು ಸುತ್ತಲೂ ಇದ್ದ ಬೆಟ್ಟ ಗುಟ್ಟದ ಮೇಲೂ, ಕಾಡುಗಿಡಗಳ ಮೇಲೂ ಬಿದ್ದು ಅದೆಲ್ಲಾ ಹೆಚ್ಚಾಗಿ ಬೆಳಕಾಯಿತು. ಅಕಸ್ಮಾತ್ತಾಗಿ ಏನಾದರೂ ಒಂದು ಸಂಗತಿ ಜರುಗಿದರೆ ಅದನ್ನು ಕಂಡು ಕೂಡಲೆ ಗಾಬರಿಯಿಂದ ಭಯಪಟ್ಟು ಎಲ್ಲಾ ಕೆಲಸವನ್ನೂ ಬಿಟ್ಟುಬಿಡುವ ಸ್ವಭಾವವು ಯಾವಾಗಲೂ ಮನುಷ್ಯಸಾಮಾನ್ಯರಲ್ಲಿ ಇದೆ- ಎಂದು ತಿಳಿದಿದ್ದ ಮಲ್ಲನು ಸುತ್ತಲೂ ಪರ್ವತಗಳಿಂದ ಆವೃತವಾದ ಒಂದು ಜಾಗದಲ್ಲಿ ನಿಂತು ತನ್ನ ಕೈಲಾದಮಟ್ಟಿಗೂ ಗಟ್ಟಿಯಾಗಿ ವಿಧ ವಿಧವಾಗಿ ಕೂಗಿಕೊಂಡನು. ಹೊಳಲು ಕೊಡುತಿದ್ದ ಆ ಸ್ಥಳದ ಸ್ವಭಾವದಿಂದ ಈ ಕೂಗು ಸುತ್ತಲೂ ಬಹಳ ದೂರಕ್ಕೆ ಅತಿಯಾಗಿ ಕೇಳಿಸಿತು. ವಿಪರೀತವಾದ ಈ ಬೆಂಕಿಯ ಪ್ರಕಾಶವನ್ನು ಕಂಡು ಈ ಗದ್ದಲವನ್ನು ಕೇಳಿ ಗಾಬರಿಪಟ್ಟಿದ್ದ ಆ ಸಿಪಾಯಿಗಳು ಭಯದಿಂದ ದಿಕ್ಕೆಟ್ಟು ಕಿತ್ತುಮುರಿದು ಓಡಿ ಹೋದರು.

ಇದೆಲ್ಲವನ್ನೂ ದೂರದಲ್ಲಿ ನಿಂತು ನೋಡುತಿದ್ದ ಮಲ್ಲನು ಆ ಮುದುಕನ ಹತ್ತಿರ ಹೋಗಿ ಆತನನ್ನೂ ಆ ಯುವತಿಯನ್ನೂ ಎತ್ತಿಕೊಂಡು ನಿರ್ಭೀತಿಯಾದ ಒಂದು ಸ್ಥಳಕ್ಕೆ ಹೋಗಿ ಅಲ್ಲಿ ಕೂತುಕೊಂಡನು. ಆಗ ಮುದುಕನು ಮಲ್ಲನನ್ನು ಕುರಿತು—ಅಯ್ಯಾ, ನೀನು ಯಾರು, ಯಕ್ಷನೋ, ಕಿನ್ನರನೋ, ಕಿಂಪುರುಷನೋ, ಸಿದ್ಧನೋ, ರಾಕ್ಷಸನೊ ಪಿಶಾಚವೊ, ಅಥವಾ ಮನುಷ್ಯನೊ? ನೀನು ಯಾರೋ ನಾನರಿಯೆ. ಮಹತ್ತಾದ ಅಪಾಯದಲ್ಲಿ ಸಿಕ್ಕಿದ ನಮಗೆ ಪಂಚಪ್ರಾಣವೂ ಹೋಗಿತ್ತು. ನಮ್ಮಿಬ್ಬರ ಮರಣವು ಗಳಿಗೆಯೋ ಕ್ಷಣವೋ ಎನ್ನುವ ಹಾಗಿತ್ತು. ಹೀಗೆ ಮೃತ್ಯುವಿನ ದವಡೆಯಲ್ಲಿ ಸಿಕ್ಕಿಕೊಂಡಿದ್ದ ನಮ್ಮನ್ನು

ಬಿಡಿಸಿಕೊಂಡು ಬಂದ ನಿನ್ನ ಪರಾಕ್ರಮವನ್ನು ಕೊಂಡಾಡಲೆ! ದಿಕ್ಕಿಲ್ಲದ ನಮಗೆ ಪ್ರಾಣದಾನವನ್ನು ಮಾಡಿದ ನಿನ್ನ ದಯಾರಸವನ್ನು ಕೊಂಡಾಡಲೆ! ನಿನಗೆ ನಾವು ಹೇಗೆತಾನೆ ಪ್ರತ್ಯುಪಕಾರವನ್ನು ಮಾಡಿಯೇವು? ಎಂದನು. ಆಗ ಮಲ್ಲನು—ತಾತ, ಅಕಸ್ಮಾತ್ತಾಗಿ ನಡೆದ ಕಾರ್ಯನಿರ್ವಾಹವು ಅಲ್ಪನಾದ ನನ್ನಿಂದಾಯಿತು ಎಂದು ತಾವು ಹೇಳುವ ಮಾತು ಪ್ರೇಮದಿಂದ ಬರುವ ಮಾತಾಗಿದೆ ಎಂದು ಹೇಳಿ ಅವರನ್ನು ಕರೆದುಕೊಂಡು ಮುಂದಿನ ಊರಿಗೆ ಹೋಗಿ ಅಲ್ಲಿ ಆ ಮಾರನೇ ದಿನ ತಂಗಿದ್ದು ಭೋಜನಾದಿಗಳು ಆದನಂತರ ಆ ವೃದ್ಧನನ್ನು ಕುರಿತು—ತಾತ, ತಮಗೆ ಇಂಥಾ ವಿಪತ್ತು ಯಾಕೆ ಬಂತು ಎಂದನು. ಆಗ ಮುದುಕನು ತನ್ನ ಕಥೆಯನ್ನು ಹೇಳಿಕೊಂಡಿದ್ದು ಹೇಗೆಂದರೆ :—

## ಚಾರುದತ್ತ ಅವನ ಮಗಳು

ಅಯ್ಯಾ ಮಗು, ಕೇಳು. ನಾನು ಅಲ್ಪ, ಆದಾಗ್ಯೂ ನಮಗೆ ಪ್ರಾಣದಾನವನ್ನೇ ಮಾಡಿದ ನಿನ್ನಂಥಾ ಮಹಾಪುರುಷನ ಮಾತನ್ನು ಇಷ್ಟರಮಟ್ಟಿಗೆ ನಡಸಿಕೊಡಲಾರೆನೆ? ಹೇಳುತ್ತೇನೆ ಕೇಳು. ನನ್ನ ಹೆಸರು ಚಾರುದತ್ತ, ಸಿಂಧು ದೇಶದ ಒಂದು ರೇವು ಪಟ್ಟಣದಲ್ಲಿ ನಾನು ಹುಟ್ಟಿದ್ದು. ನಮ್ಮ ತಂದೆಯು ಬಹು ದೊಡ್ಡ ವರ್ತಕ. ನನ್ನ ಚಿಕ್ಕ ವಯಸ್ಸಿನಲ್ಲಿಯೇ ತಾಯಿತಂದೆಗಳು ಇಬ್ಬರೂ ದೈವಾಧೀನರಾದ್ದರಿಂದ, ಲೋಕವ್ಯವಹಾರದಲ್ಲಿ ನನಗೆ ಬಹಳವಾಗಿ ಅಸಹ್ಯಹುಟ್ಟಿ ದೇಶಾಟನ ಮಾಡಬೇಕೆಂದು ನಾನು ಹೊರಟೆನು. ನಮ್ಮ ತಂದೆಯು ಬಹು ಸಮರ್ಥನಾಗಿದ್ದನು. ವಿದ್ಯಾವ್ಯಾಸಂಗವನ್ನು ಮಾಡುತಾ ಗ್ರಂಥಗಳಲ್ಲಿ ಕಾಲವನ್ನು ಕಳೆಯಬೇಕೆಂಬ ಆಶೆಯು ನನಗೆ ಆತನಿಂದಲೇ ಉಂಟಾದ್ದು. ಆತನ ಅಪರಿಮಿತವಾದ ಐಶ್ವರ್ಯವು ನನ್ನ ದೇಶಾಟನೆಗೆ ಸಹಾಯಕಾರಿಯಾಯಿತು.

ಮೊದಲು ನಾನು ಮಿಸರ್ ದೇಶಕ್ಕೆ ಹೋದೆನು. ಪಾಂಡಿತ್ಯಕ್ಕೂ ಸಮಸ್ತ ಕುಶಲ ವಿದ್ಯೆಗಳಿಗೂ ಆ ದೇಶವು ಪೂರ್ವದಿಂದಲೂ ನೆಲೆ ಎಂದು ಖ್ಯಾತಿಗೊಂಡಿತ್ತು. ಅಲ್ಲಿ ಉತ್ತಮವಾದ ನೀಲನದಿಯು ಹರಿ

ಯುತಿದೆ. ಈ ನದಿಯಿಂದ ದೇಶವೆಲ್ಲಾ ಪಾವನವಾಗಿದೆ. ಸ್ವಲ್ಪ ವ್ಯವಸಾಯದಿಂದಲೇ ಬೆಳೆ ಒಂದಕ್ಕೆ ಹತ್ತರಷ್ಟಾಗುವುದು. ಇದರಿಂದ ಜನರೆಲ್ಲಾ ಪುಷ್ಟರಾಗಿ ಅವರಿಗೆ ಗ್ರಂಥವ್ಯಾಸಂಗಕ್ಕೂ ಕುಶಲ ವಿದ್ಯಾ ವ್ಯಾಸಂಗಕ್ಕೂ ಬಹಳವಾಗಿ ಅವಕಾಶ ದೊರೆತಿತ್ತು. ರಾಜ್ಯದ ಉನ್ನತ ಸ್ಥಿತಿಗೆ ಯಾವುದು ಕಾರಣವಾಯಿತೋ ಅದೇ ಅದರ ಹೀನದಶೆಗೂ ಕಾರಣವಾಯಿತು. ಹೆಚ್ಚು ಗ್ಯೈವೆುಯಿಂದ ದೊರೆಯುತಿದ್ದ ಆದಾಯವು ಜನರಿಗೆ ಒಂದು ಬಗೆಯ ಜಡತ್ವವನ್ನು ಉಂಟುಮಾಡಿತು. ಈ ಜಡತ್ವವು ದುರ್ಮಾರ್ಗಕ್ಕೆ ಎಳೆಯಿತು. ಮಂದಿಯೆಲ್ಲಾ ಕೆಟ್ಟತನದಲ್ಲಿ ಇಳಿಯಾಮುಳುಗಿದ್ದರು. ಪರಾಕ್ರಮ ಜನರಲ್ಲಿ ಲವಲೇಶವೂ ಇರಲಿಲ್ಲ.

ಮಲ್ಲ—ಕಾಡಿನಲ್ಲಿಯಾದರೂ ಇದ್ದು ಕಾಲವನ್ನು ಕಳೆಯಬಲ್ಲೆನೇ ಹೊರತು ಇಂಥಾ ಹೇಡಿಗಳ ಸೀಮೆಯಲ್ಲಿ ಅರೆಗಳಿಗೆಯೂ ಇರಲಾರೆ.

ಚಾರುದತ್ತ—ಅಯ್ಯಾ, ನಿನ್ನ ಮಾತನ್ನು ಮೆಚ್ಚಿದೆ. ನನ್ನ ಅಭಿಮತವೂ ಹಾಗೆಯೇ ಸರಿ. ಅದರಿಂದಲೇ ಆ ದೇಶವನ್ನು ಬಿಟ್ಟು ನಾನು ಹೊರಟು ಹೋದೆ. ಅಲ್ಲಿಂದ ಮಗ್ಗುಲ ದೇಶವಾದ ಅರಬ್ಬೀ ಸ್ಥಾನಕ್ಕೆ ಬಂದೆ. ಅಲ್ಲಿನ ಜನರ ಸ್ವಭಾವವೂ ಬೇರೆ. ಇಲ್ಲಿಗೆ ಬರುವಾಗ ದಾರಿಯಲ್ಲಿ ಮರಳಕಾಡನ್ನು ದಾಟಿಕೊಂಡು ಬರಬೇಕಾಗಿತ್ತು. ಅದರಿಂದ ಒಂಟೆಯನ್ನು ಬಾಡಿಗೆಗೆ ತೆಗೆದುಕೊಂಡು ಅದರ ಮೇಲೆ ಕೂತು ಹೊರಟೆ. ಮರಳಕಾಡಿನ ಪ್ರಯಾಣಕ್ಕೆ ಒಂಟೆಯು ಬಹಳ ಅನುಕೂಲವಾದ್ದು. ಇದು ಎಷ್ಟು ಕಷ್ಟವನ್ನಾದರೂ ಸಹಿಸುವುದು. ಸಾಧಾರಣವಾದ ಸೊಪ್ಪು ಸಿಕ್ಕಿದಾಗ್ಗೂ ಅದನ್ನು ತಿಂದು ಹೊಟ್ಟೆಯನ್ನು ತುಂಬಿಕೊಳ್ಳುವುದು. ಮತ್ತು ಆಹಾರ ನೀರು ಏನೂ ಇಲ್ಲದೆ ೯–೧೦ ದಿವಸಗಳಾದಾಗ್ಗೂ ಕಾಡಿನಲ್ಲಿ ನಡೆದುಕೊಂಡು ಹೋಗುತಲೇ ಇರುವುದು. ಇಂಥಾ ವಾಹನವನ್ನೇರಿ ಹೊರಟೆ. ಬರುತ ಬರುತಾ ಎತ್ತ ನೋಡಿದರೂ ಮರಳೇ ಕಾಣಿಸುತಿತ್ತು. ಒಂದು ಪ್ರಾಣಿಯ ಸಂಚಾರವೂ ಇಲ್ಲದೆ ನಾವೇ ನಾವಾಗಿದ್ದೆವು. ಸೂರ್ಯನು ನೆತ್ತೀಮೇಲಕ್ಕೆ ಬಂದನು. ಬಿಸಿಲಿನ ವೇಗವನ್ನು ತಡೆಯುವುದಕ್ಕೆ ಆಗಲಿಲ್ಲ. ನನಗೆ ಮೈಲೆಲ್ಲಾ ಉರಿ ಕಾಣಿಸಿತು. ವಿಪರೀತವಾದ ಬಾಯಾರಿಕೆ ಹತ್ತಿತು. ಎಷ್ಟು

ನೀರ ಕುಡಿದು ಬಾಯಿಯನ್ನು ತೇವಮಾಡಿಕೊಂಡರೂ ದಾಹ ಅಡಗ ಲಿಲ್ಲ. ಸಾಯಂಕಾಲದ ಹೊತ್ತಿಗೆ ಒಂದು ತಿಟ್ಟಿನ ಹತ್ತಿರ ಡೇರಾ ಹಾಕಿ ಇಳಿದುಕೊಂಡೆವು. ಅಲ್ಲಿ ಆ ರಾತ್ರೆ ತಂಗಿದ್ದು ಮಾರನೇ ದಿನ ಬೆಳಗ್ಗೆ ಹೊರಟೆವು. ಸ್ವಲ್ಪ ದೂರ ಹೊರಟ ಕೂಡಲೆ ಧೂಳು ಕಾಣಿ ಸಿತು. ಕೂಡಲೆ ಅರಬ್ಬರ ಒಂದು ಗುಂಪು ನಮ್ಮೆದುರಿಗೆ ಬಂತು. ಅವರೆಲ್ಲರೂ ಆಯುಧಪಾಣಿಗಳಾಗಿದ್ದರು. ಅವರೆಲ್ಲರೂ ಹತ್ತಿಕೊಂಡು ಬರುತಿದ್ದ ಉತ್ತಮವಾದ ಕುದುರೆಗಳು ಜಿಂಕೆಗಳ ಹಾಗೆ ಓಡಿ ಬರುತಿ ದ್ದವು. ಇವರು ಯುದ್ಧಕ್ಕಾಗಿಯೇ ಬಂದರು. ಆದರೆ ನಾವುಗಳು ಯಾವ ದುರಭಿಪ್ರಾಯವೂ ಇಲ್ಲದೆ ಸುಮ್ಮನೆ ಹೋಗುತಿರುವುದನ್ನು ಕಂಡು ಅವರು ಸ್ವಲ್ಪ ಹಿಂತೆಗೆದರು. ಅವರಲ್ಲಿ ಮುಖಂಡನಾಗಿ ತೋರಿದ ಒಬ್ಬ ಪುರುಷನು ನನ್ನನ್ನು ಕುರಿತು—ನೀವು ಯಾರು? ಎಲ್ಲಿಗೆ ಹೋಗುತೀರಿ? ಎಂದು ಕೇಳಿದನು. ಅರಬ್ಬಿ ಭಾಷೆಯನ್ನು ಸ್ವಲ್ಪ ಅಭ್ಯಾಸಮಾಡಿದ್ದ ನಾನು ನಮಗೆ ಯಾವ ವಿಧವಾದ ಕೆಟ್ಟ ಮನಸ್ಸೂ ಇಲ್ಲ. ಸುಮ್ಮನೆ ದೇಶವನ್ನು ನೋಡಿಕೊಂಡು ಹೋಗು ವುದಕ್ಕಾಗಿ ಬಂದೆನೆಂದು ಹೇಳಿದೆ. ಆಗ ಅವನು ನನ್ನ ಮುಖವನ್ನು ದೃಷ್ಟಿಸಿ ನೋಡುತಾ ನನ್ನಲ್ಲಿ ಏನೋ ಸುಗುಣವನ್ನು ಕಂಡವನಂತೆ, ನನ್ನಲ್ಲಿ ದಯವನ್ನು ಸೂಚಿಸುವನಹಾಗೆ ಹಸನ್ಮುಖಿಯಾಗಿ, ನನ್ನ ಕೈ ಹಿಡಿದುಕೊಂಡು ಹೇಳಿದ್ದೇನೆಂದರೆ :—

ಅಣ್ಣಯ್ಯ, ನೀನು ಭಯಪಡತಕ್ಕದ್ದಿಲ್ಲ. ನಮ್ಮಲ್ಲಿಗೆ ಅತಿಥಿ ಯಾಗಿ ಬಂದಮೇಲೆ ನೀನೂ ನಮಗೆ ಸಮಾನನೇ ಸರಿ. ನಾವು ಮರಟು ಜನರೆಂಬುದೇನೋ ನಿಜ, ಆದರೆ ಇತರ ಕಡೆ ಇರುವಂತೆ ನಮ್ಮಲ್ಲಿ ದ್ರೋಹವಿಲ್ಲ, ಧೈರ್ಯವಾಗಿರು. ಹೀಗೆಂದು ಹೇಳಿದಕೂಡಲೆ, ಆ ಗುಂಪಿನ ಜನರೆಲ್ಲರೂ ಬಂದು ನನ್ನೆದುರಿಗೆ ನಿಂತು, ನಾನು ಅವರ ದೊರೆಯೋ ಎನ್ನುವ ಹಾಗೆ ನನಗೆ ಸಲಾಂಮಾಡಿದರು. ಕೊನೆಗೆ ಅವರ ಮುಖಂಡನೋ ಅಥವಾ ದೊರೆಯೋ ಆಗಿದ್ದ ಪುರುಷನು ಮರ್ಯಾದೆಯಿಂದ ನನ್ನನ್ನು ಕರೆದುಕೊಂಡು ಹೋಗಿ ಅವರ ಪಾಳಯ ದಲ್ಲಿ ಇಳಿಸಿಕೊಂಡನು. ರೊಟ್ಟಿ, ಮಾಂಸ, ಹಣ್ಣುಗಳು ಇವುಗಳನ್ನು

ನನಗಾಗಿ ತಂದಿಟ್ಟರು. ಅವರ ರೊಟ್ಟಿ ಮಾಂಸಗಳನ್ನು ಬಿಟ್ಟು ನನ್ನ ರೊಟ್ಟಿಯನ್ನೂ ಅವರ ಹಾಲು ಹಣ್ಣುಗಳನ್ನೂ ನಾನು ತೆಗೆದುಕೊಂಡು ವಿಶ್ರಮಿಸಿಕೊಂಡೆ. ಅವರ ಆದರವನ್ನು ನಾನು ಕೈಗೊಳ್ಳುತಾ ಅಲ್ಲಿಯೇ ಕೆಲವು ದಿವಸಗಳನ್ನು ಕಳೆದೆ. ಆ ದೇಶದಲ್ಲಿ ಉಷ್ಣ ಹೆಚ್ಚು. ಸೂರ್ಯನ ವೇಗವನ್ನು ಸಹಿಸುವುದಕ್ಕೆ ಆಗುವುದೇ ಇಲ್ಲ. ಭೂಮಿಯೆಲ್ಲಾ ಬರೀ ಮರಳು. ನೆಲವನ್ನು ಉಳುವುದೇ ಇಲ್ಲ. ಬಿತ್ತನೆಯನ್ನು ಬಿತ್ತುವುದೇ ಇಲ್ಲ. ಖರ್ಜೂರ ಮೊದಲಾದ ಒಂದೆರಡು ಹಣ್ಣುಗಳು ವಿನಾ ಮತ್ತೆಯೇನೂ ಈ ಸೀಮೆಯಲ್ಲಿ ಬೆಳೆಯುವುದೇ ಇಲ್ಲ. ಕುರಿ, ಒಂಟೆ, ಕುದುರೆ ಇವುಗಳನ್ನು ಸಾಕುವುದು, ಕೆಲವು ವ್ಯಾಪಾರ ಮಾಡು ವುದು, ಇದೇ ಇಲ್ಲಿನ ಜನರ ವೃತ್ತಿ. ಹೋಕೆಯನ್ನು ಅರಿಯಲೇ ಅರಿಯರು. ಶಾಂತವಾಗಿದ್ದರೆ ದೇವತೆಗಳಿಗೆ ಸಮಾನರಾಗಿರುವರು. ಕೋಪ ಬಂದರೆ ದೊಡ್ಡ ರಾಕ್ಷಸರಿಗಿಂತಲೂ ಕಡೆಯಾಗುವರು.

ನಾನು ಅಲ್ಲಿರುವಾಗ ನೆರೇ ರಾಜ್ಯದ ಒಬ್ಬ ರಾಯಭಾರಿಯು ಅಲ್ಲಿಗೆ ಬಂದು ದೊರೆಯನ್ನು ಕಂಡನು. ತರುವಾಯ ತಮ್ಮ ದೊರೆಯ ಐಶ್ವರ್ಯವನ್ನೂ ಡಂಭವನ್ನೂ ಅವನ ಚತುರಂಗಗಳನ್ನೂ ಅವನ ಪರಾಕ್ರಮವನ್ನೂ ವಿಶೇಷವಾಗಿ ವಿವರಿಸಿ ಅಂಥಾ ದೊರೆಗೆ ಅಧೀನ ವಾಗಿದ್ದುಕೊಂಡು ಆತನ ಸಂರಕ್ಷಣೆಯನ್ನು ಪಡೆದು ಆತನಿಗೆ ಕಪ್ಪ ವನ್ನು ಕೊಡುತಾ ಸುಖವಾಗಿರಬಹುದು, ಎಂದು ವಿಸ್ತಾರವಾಗಿ ಅರಿಕೆ ಮಾಡಿಕೊಂಡನು.

ಡಂಭ ಎಂಬುದನ್ನೆ ಅರಿಯದ ಅರಬ್ಬರ ದೊರೆಯು ತನ್ನ ಡೇರೆಯ ಬಾಗಿಲಲ್ಲಿ ಕಾಲಮೇಲೆ ಕಾಲನ್ನು ಹಾಕಿಕೊಂಡು ಕೂತು ಕೊಂಡಿದ್ದನು. ಆ ರಾಯಭಾರಿಯ ಮಾತನ್ನು ಕೇಳಿ ಆತನ ಪರಿವಾರ ವೆಲ್ಲಾ ಕಿಡಿ ಕಿಡಿಯಾಯಿತು. ಆದರೆ ದೊರೆಯು ಕೋಪಗೊಳ್ಳದೆ. ನಿಧಾನವಾಗಿ ಆ ರಾಯಭಾರಿಯನ್ನು ಕುರಿತು ಆಡಿದ ಮಾತಿನ ಸರಣಿ ಹೇಗೆಂದರೆ :—

ಅಯ್ಯಾ, ವೃದ್ಧನಾಗಿಯೂ ವಿವೇಕಶಾಲಿಯಾಗಿಯೂ ಇರುವ ನೀನು ಬೇರೆ ಕೆಲಸಕ್ಕಾಗಿ ನಮ್ಮಲ್ಲಿಗೆ ಬಂದಿದ್ದರೆ ನಿನ್ನ ಸಾಮರ್ಥ್ಯಕ್ಕೂ

ನಿಮ್ಮ ದೊರೆಯ ಐಶ್ವರ್ಯಕ್ಕೂ ತಕ್ಕಂತೆ ಮರ್ಯಾದೆ ದೊರೆಯು ತಿತ್ತು. ನಿಮ್ಮ ದೊರೆಯ ಹತ್ತಿರಿರುವ ಚಿನ್ನ ಬೆಳ್ಳಿ ಜವಾಹಿರು ನಮ್ಮಲ್ಲಿಲ್ಲ. ಆದರೆ ಪರಾಕ್ರಮವೆಂಬ ಐಶ್ವರ್ಯ ಮಾತ್ರ ನಮ್ಮವರಲ್ಲಿದೆ. ಅರಬ್ಬರಾದ ನಾವುಗಳು ಈ ದೇಶ ಹುಟ್ಟಿದಾಗಿನಿಂದ ಇದುವರೆಗೆ ಯಾರಿಗೂ ಅಧೀನರಾಗಿರಲಿಲ್ಲ. ಮುಂದಕ್ಕೂ ಹೀಗೆಯೇ. ನಿಮ್ಮ ರಾಜನಿಗೆ ಈ ವಿಷಯವನ್ನು ತಿಳಿಸಬೇಕು. ನಿನ್ನ ಮುಖಾಂತರ ಅಂಬು ಬಿಲ್ಲನ್ನು ಹೊರತು ಮತ್ತೇನನ್ನೂ ನಸರಾಗಿ ಕಳುಹಿಸಲಾರೆವು. ಒಂದು ಪಕ್ಷದಲ್ಲಿ ನಮ್ಮನ್ನು ನೀವು ಜಯಿಸಿದಾಗ್ಯೂ ಈ ದೇಶದಿಂದ ನಿಮಗೆ ಪ್ರಯೋಜನವೇನೂ ಇಲ್ಲ. ನಮಗೆ ಶತ್ರುಗಳಾಗಿ ಬಂದವರು ನಮ್ಮ ಅಂಬಿನ ಪೆಟ್ಟಿಗೆ ತಲೆಯನ್ನು ತಪ್ಪಿಸಿಕೊಂಡರೂ, ಏನೂ ಸಿಕ್ಕದ ಈ ನಾಡಿನಲ್ಲಿ ಹಸಿವು ಬಾಯಾರಿಕೆಯಿಂದ ಪ್ರಾಣವನ್ನು ಬಿಡಬೇಕಾಗುವುದು. ಇದು ಖಂಡಿತವೆಂದು ನಿಮ್ಮ ಅರಸನಿಗೆ ಅರಿಕೆಮಾಡು.

ಇದಕ್ಕೆ ಮಲ್ಲನು—ಈ ಜನದ ಬಾಳು ಎಂಥಾ ಉತ್ತಮವಾದ್ದು! ಯಾವ ವೀರನೂ ಇವರ ಮುಂದೆ ಹಾಯಲಾರ. ನಮ್ಮ ದುರ್ನಡತೆಯೇ ನಮ್ಮನ್ನು ಮತ್ತೊಬ್ಬರಿಗೆ ಅಡಿಯಾಳಾಗಿ ಮಾಡುವುದೇ ಅಲ್ಲದೆ ಮತ್ತೆ ಯಾವುದೂ ಅಲ್ಲ.

ಚಾರುದತ್ತ—ಈ ಜನರ ವಿಷಯದಲ್ಲಿ ನಾನು ಪಟ್ಟ ಅಭಿಪ್ರಾಯವೂ ನಿನ್ನ ಅಭಿಪ್ರಾಯವೂ ಒಂದೇ ಆಗಿದೆ. ನನ್ನ ತಿಳಿವಳಿಕೆ ಈ ಭಾಗದಲ್ಲಿ ಸರಿಯಾದ್ದು ಹವುದೋ ಅಲ್ಲವೋ ತಿಳಿದುಕೊಳ್ಳೋಣವೆಂದೇ ಆ ದೇಶದ ಸ್ಥಿತಿಯನ್ನು ಸ್ವಲ್ಪ ವಿವರಿಸಿ ಹೇಳಿದೆ. ದುರ್ನಡತೆಯು ದೇಶಗಳನ್ನು ಹಾಳುಮಾಡಿದೆ. ಚಕ್ರಾಧೀಶ್ವರರನ್ನು ಸಿಂಹಾಸನದಿಂದ ಉರುಳಿಸಿದೆ. ನಮ್ಮ ನಡತೆ ಒಳ್ಳೇದಾಗಿದ್ದರೆ ನಮ್ಮನ್ನು ಯಾರೂ ಜಯಿಸಲಾರರು

ಇದುವರೆಗೂ ಈ ಕಥೆಯನ್ನು ಕೇಳುತಾ ಇದ್ದು ಸಾಕಾಗಿ ಕೊನೆಗೆ ತಡೆಯಲಾರದೆ ಮದನನು ರಾಮಜೋಯಿಸನನ್ನು ಕುರಿತು,

ಮ—ಜೋಯಿಸರೆ, ನಾನು ಒಂದು ಸಂಗತಿಯನ್ನು ಕೇಳಬೇಕು.

ಜೋ—ನಿನಗೆ ಮನಸ್ಸು ಬಂದದನ್ನು ಕೇಳು.

ಮ—ಬಡವರು ಭಾಗ್ಯವಂತರಿಗಿಂತ ಗುಣಾಢ್ಯರಾಗಿಯೂ, ಧೈರ್ಯ ಶಾಲಿಗಳಾಗಿಯೂ, ಉತ್ತಮರಾಗಿಯೂ ಇದಾರೆಂದು ಈ ಕಥೆಗಳಿಂದ ತೋರಿಬರುವುದು.

ಜೋ—ಒಂದೊಂದು ವೇಳೆ ಹೀಗಿರುವುದು ನಿಜ.

ಮ—ಇತರ ಕಡೆಯಲ್ಲಿರುವ ಹಾಗೆಯೇ ಇಲ್ಲಿಯೂ ಯಾಕೆ ಇರ ಬಾರದು? ಈ ದೇಶದಲ್ಲಿರತಕ್ಕ ಬಡವರೆಲ್ಲಾ ಭಾಗ್ಯವಂತರಿಗಿಂತಲೂ ಉತ್ತಮರೊ?

ಜೋ—ನೀನು ಹೀಗೆ ತಿಳಿದುಕೊಂಡು ಇದ್ದೀಯೆ ಎಂದು ನಾನು ಯೋಚಿಸುತೇನೆ. ಯಾಕೆಂದರೆ ಯಾವ ಕೆಲಸವಾಗಬೇಕಾದರೂ ನೀನು ಬಡವರಿಗೆ ಹೇಳುತೀಯಲ್ಲದೆ ಭಾಗ್ಯವಂತರಿಗೆ ಹೇಳುವುದಿಲ್ಲ.

ಮ—ಹವುದು. ಆದರೆ ಈ ಸಂಗತಿ ಬೇರೆ. ಭಾಗ್ಯವಂತರಿಗೆ ಮಾಡಿ ಅಭ್ಯಾಸವಿಲ್ಲದ ಅನೇಕ ಕೆಲಸಗಳನ್ನು ಬಡವರಿಗೆ ಮಾಡಿ ಅಭ್ಯಾಸವುಂಟು.

ಜೋ—ಅಂಥಾ ಕೆಲಸಗಳು ಉಪಯುಕ್ತವಾಗಿವೆಯೆ ಇಲ್ಲವೆ?

ಮ—ಬಡವರು ಮಾಡುವ ಅನೇಕ ಕೆಲಸಗಳು ಉಪಯುಕ್ತ ವಾದವುಗಳೇ ಸರಿ. ಅವರು ನೆಲವನ್ನು ಉಳುತಾರೆ, ಬೆಳೆ ಬೆಳೆಯು ತಾರೆ, ಕಬ್ಬಿಣ ಕೆಲಸವನ್ನು ಮಾಡುತಾರೆ, ಅಡಿಗೆ ಮಾಡುತಾರೆ, ಬಟ್ಟೆ ನೇಯುತಾರೆ, ಅದನ್ನು ಒಗೆಯುತಾರೆ, ದನ ಕಾಯುತಾರೆ, ಹಾಲಕರೆ ಯುತಾರೆ, ಮುಖ್ಯವಾಗಿ ನಮ್ಮ ಸೌಖ್ಯಕ್ಕೆ ಬೇಕಾದ ಅನೇಕ ಕಾರ್ಯ ಗಳನ್ನು ಮಾಡತಕ್ಕವರು ಅವರೇ.

ಜೋ—ಏನು, ಬಡವರು ಇದೆಲ್ಲವನ್ನೂ ಮಾಡುತಾರೆಯೆ?

ಮ—ಹವುದು, ಅವರು ಮಾಡದಿದ್ದರೆ ಮತ್ತೆ ಯಾರು ಮಾಡು ವವರು? ನೇಗಿಲ ಹಿಡಿದು ಉಳುವುದು, ಚಮ್ಮಟಿಗೆ ಹಿಡಿದು ಬಡಿಯು ವುದೂ, ಮಣ್ಣ ತುಳಿದು ಗೋಡೆಹಾಕುವುದೂ, ಇದೆಲ್ಲಾ ಭಾಗ್ಯವಂತರಿಗೆ ಮಾನವೊ?

ಜೋ—ಕೆಲವು ದಿವಸಗಳ ಕೆಳಗೆ ನಮ್ಮ ತೋಟದಲ್ಲಿ ನೀನು ಒಂದು ಗುಡಿಸಲನ್ನು ಕಟ್ಟಲಿಲ್ಲವೆ?

ಮ—ಅದೇನೋ ನಾನು ವಿನೋದಕ್ಕಾಗಿ ಕಟ್ಟಿದ್ದು. ಯಾರೂ ಅಲ್ಲಿ ವಾಸವಾಗಿರಬೇಕೆಂದು ಕಟ್ಟಿದ್ದಲ್ಲ.

ಜೋ—ಉಪಯೋಗಕರವಾದ ಕೆಲಸಗಳನ್ನು ಮಾಡದೇ ಇರುವುದು ಭಾಗ್ಯವಂತರಿಗೆ ಒಂದು ಯೋಗ್ಯತೆಯೆಂದು ನೀನು ಇನ್ನೂ ತಿಳಿದುಕೊಂಡಿದೀಯೆ. ಹಾಗೆ ಯಾರಾದರೂ ಒಳ್ಳೇ ಕೆಲಸಗಳನ್ನು ತಪ್ಪಿ ಮಾಡಿದರೆ ಅಂಥವನ ದೊಡ್ಡತನ ಹೋಗುವುದೆಂದು ಭಾವನೆಯೊ?

ಈ ಮಾತನ್ನು ಕೇಳಿ ಮದನನಿಗೆ ನಾಚಿಕೆ ಹುಟ್ಟಿತು. ಇದು ತನ್ನ ಅಭಿಪ್ರಾಯವಲ್ಲ ತಮ್ಮ ತಾಯಿ ಮೊದಲಾದ ರಾಣಿವಾಸದವರ ಅಭಿಪ್ರಾಯವೆಂದು ಮದನ ಹೇಳಿದ.

ಜೋ—ಉತ್ತಮರು ಯಾರು, ಬಡವರೆ ಭಾಗ್ಯವಂತರೆ? ಎಂದು ನೀನು ಈಗತಾನೆ ಪ್ರಶ್ನೆ ಮಾಡಿದೆಯಲ್ಲ. ಉಳುವುದು, ಬಿತ್ತುವುದು, ನೆಯ್ಯುವುದು, ಮನೆ ಕಟ್ಟುವುದು ಇಂಥಾದ್ದನ್ನೆಲ್ಲಾ ಬಡವರು ತಮಗೋಸ್ಕರ ಮಾಡಿಕೊಳ್ಳುವುದೇ ಅಲ್ಲದೆ, ಭಾಗ್ಯವಂತರಿಗೋಸ್ಕರವೂ ಮಾಡುತಾರೆ. ಆದ್ದರಿಂದ ಭಾಗ್ಯವಂತರು ಯಾವ ಕೆಲಸವನ್ನೂ ಮಾಡದೆ ಸುಮ್ಮನೆ ಕೂತಿದ್ದಮೇಲೆ, ಭಾಗ್ಯವಂತರಿಗಿಂತಲೂ ಬಡವರೇ ಉತ್ತಮರೆಂದು ಸ್ಪಷ್ಟವಾಗುವುದು.

ಮ—ಹವುದು. ಆದರೆ ಬಡವರು ಹಾಗೆ ಮಾಡುವುದು ಲೋಕೋಪಕಾರಕ್ಕಾಗಿ ಅಲ್ಲ. ಅವರು ಅದರಿಂದ ಜೀವನ ಮಾಡಿಕೊಳ್ಳುತಾರೆ.

ಜೋ—ಹಾಗಾದರೆ ಹೇಳು, ನಿನಗೆ ಎಂಥವರು ಇದ್ದರೆ ಉತ್ತಮ; ಜೀವನೋಪಾಯಕ್ಕಾದರೂ ಸರಿಯೆ, ಉಪಯೋಗಕರವಾದ ಕೆಲಸವನ್ನು ಮಾಡತಕ್ಕ ಬಡ ಜನರೆ ಅಥವಾ ಎಂದಿಗೂ ಉಪಯುಕ್ತವಾದ ಯಾವ ಕೆಲಸವನ್ನೂ ಮಾಡದ ಐಶ್ವರ್ಯವಂತರೆ?

ಮ—ನಾನು ತಮ್ಮನ್ನು ಈ ವಿಷಯದಲ್ಲಿ ಪ್ರಶ್ನೆ ಮಾಡಿದಾಗ ಐಶ್ವರ್ಯವಂತರು ಉಪಯುಕ್ತವಾದ ಕೆಲಸವನ್ನೇ ಮಾಡಬೇಕೆಂದು ನನ್ನ ತಾತ್ಪರ್ಯವಲ್ಲ. ಆಗ ನನಗೆ ತೋರದೆ ಹೋಯಿತು, ಈಗ ಹೇಳುತೇನೆ ಕೇಳಬೇಕು. ಐಶ್ವರ್ಯವಂತರು ಬಡವರಿಂದ ಸಾಮಾನು

ಗಳನ್ನು ಕೊಂಡುಕೊಳ್ಳುವುದರಿಂದ ಅವರಿಗೆ ಹಣವನ್ನು ಕೊಟ್ಟು ಎಷ್ಟೋ ಉಪಕಾರವನ್ನು ಮಾಡುತಾರೆ

ಜೋಯಿಸ—ಹಣವೆಂದರೇನು ?

ಮದನ—ಒಂದು ತಲೆ ಅಥವಾ ಮತ್ತೆ ಯಾವುದಾದರೂ ಒಂದು ಗುರುತು ಉಳ್ಳ ಚಿನ್ನದ ಮತ್ತು ಬೆಳ್ಳಿಯ ತುಂಡುಗಳು ಅಥವಾ ಬಿಲ್ಲೆಗಳು.

ಜೋಯಿಸ—ಅಂಥಾ ಚಿನ್ನ ಬೆಳ್ಳೀ ತುಂಡುಗಳಿಂದ ಉಪಯೋಗ ವೇನು ?

ಮದನ—ನಾವು ಹಣವನ್ನು ಕೊಟ್ಟರೆ ಎಲ್ಲರೂ ತೆಗೆದುಕೊಳ್ಳುತಾರೆ; ಅದಕ್ಕೆ ಬದಲಾಗಿ ನಮಗೆ ಬೇಕಾದ ಸಾಮಾನುಗಳನ್ನು ಕೊಡುತಾರೆ.

ಜೋಯಿಸ-ಈ ಹಣದ ಬಿಲ್ಲೆಗಳಿಂದಲೇ ನಿಜವಾದ ಪ್ರಯೋಜನ ಯಾವುದೂ ಇಲ್ಲ ; ಇಂಥಾ ಬಿಲ್ಲೆಗಳನ್ನು ಬಡವರಿಗೆ ಐಶ್ವರ್ಯವಂತರು ಕೊಟ್ಟು ಅವರಿಂದ ಮನೆ ಬಾಗಿಲು. ಬಟ್ಟೆಬರೆಗಳು, ತಿಂಡೀಸಾಮಾನುಗಳು, ಮೊದಲಾದ್ದನ್ನು ತೆಗೆದುಕೊಂಡು ತನ್ಮೂಲಕ ಬಡವರಿಗೆ ಉಪಕಾರವನ್ನು ಮಾಡುತಾರೆ ಎಂದಹಾಗಾಯಿತಷ್ಟೆ ?

ಮದನ—ಈ ಬಿಲ್ಲೆಗಳು ಪ್ರಯೋಜನಕ್ಕೆ ಬಾರದವುಗಳೆಂದು ಹೇಳಕೂಡದು. ಬಡವರು ಇವುಗಳನ್ನು ಕೊಟ್ಟು ತಮಗೆ ಬೇಕಾದ ಸಾಮಾನುಗಳನ್ನು ಕೊಂಡುಕೊಳ್ಳಬಹುದು.

ಜೋಯಿಸ-ಬಡವರ ಹತ್ತಿರ ಹಣವಿದ್ದರೆ ತಮಗೆ ಬೇಕಾದ್ದನ್ನು ಕೊಂಡುಕೊಳ್ಳಬಹುದು ಎಂತಲೊ ?

ಮದನ—ಹವುದು.

ಜೋಯಿಸ—ಹಾಗಾದರೆ ಬಡವರು ಅಂಥಾ ಉಪಯುಕ್ತವಾದ ಸಾಮಾನುಗಳನ್ನು ಯಾರಿಂದ ಕೊಂಡುಕೊಳ್ಳಬೇಕು ? ಐಶ್ವರ್ಯವಂತರು ಇಂಥಾ ಸಾಮಾನುಗಳು ಯಾವುದನ್ನೂ ಮಾಡುವುದಿಲ್ಲ. ನೀನು ಮೊದಲೇ ಹೇಳಿದ್ದೀಯೆ ; ಆದಕಾರಣ ಬಡವರು ತಮ್ಮ ತಮ್ಮಲ್ಲೇ ಒಬ್ಬರಿಂದೊಬ್ಬರು ಕೊಂಡುಕೊಳ್ಳಬೇಕಾಯಿತು.

ಮದನ—ಹಾಗೆ ಹೇಳುವುದಕ್ಕಾಗುವುದಿಲ್ಲ. ಯಾಕೆಂದರೆ ಬಹಳ ಐಶ್ವರ್ಯವಂತರಾದವರು ಬೇಕಾದ ಒಡವೆಗಳನ್ನು ಇಟ್ಟುಕೊಂಡು, ಉತ್ತಮವಾದ ಬಟ್ಟೆಗಳನ್ನಿಟ್ಟು ಅಂಗಡಿಗಳಲ್ಲಿ ಸಾಮಾನುಗಳನ್ನು ಮಾರುತ್ತಾ ಇರುವುದಿಲ್ಲವೆ ?

ಜೋಯಿಸ—ಆ ಸಾಮಾನುಗಳನ್ನೆಲ್ಲಾ ಅವರು ಮಾಡುವುದಿಲ್ಲ. ಇತರ ಬಡಜನರಿಂದ ಅವುಗಳನ್ನು ತಯಾರ್ಮಾಡಿಸಿ ಆ ಸಾಮಾನುಗಳನ್ನು ಅಂಗಡಿಯಲ್ಲಿಟ್ಟು ಮಾರುತಾರೆ. ಹೀಗೆ ಯೋಚಿಸಿದಾಗ್ಯೂ ಐಶ್ವರ್ಯವಂತರು ಉಪಯೋಗವಾದ ಯಾವ ಕೆಲಸವನ್ನೂ ಮಾಡುವುದಿಲ್ಲ, ಬಡವರು ನಿಜವಾಗಿ ಪ್ರಯೋಜನಕ್ಕೆ ಬರತಕ್ಕ ಸಾಮಾನುಗಳನ್ನೆಲ್ಲಾ ಮಾಡುತಾರೆ, ಎನ್ನುವ ಮಾತು ಖಂಡಿತವಾಯಿತು. ಒಂದು ಊರಿನಲ್ಲಿ ಬರೀ ಐಶ್ವರ್ಯವಂತರೇ ಇದ್ದರೆ, ಅವರು ಯಾವ ಕೆಲಸವನ್ನೂ ಮಾಡುವುದಿಲ್ಲವಾದ್ದರಿಂದ ಅವರೆಲ್ಲಾ ಹೊಟ್ಟೆಗಿಲ್ಲದೆ ಸಾಯಬೇಕಾಗುವುದು. ಅವರಲ್ಲಿ ಎಷ್ಟು ಹಣವಿದ್ದಾಗ್ಯೂ ಉಪಯೋಗವಿಲ್ಲ. ಒಂದು ಊರಿನಲ್ಲಿ ಬರೀ ಬಡವರೇ ಇದ್ದರೆ, ಅವರೆಲ್ಲಾ ಒಂದೊಂದು ಉದ್ಯೋಗವನ್ನು ಅನುಸರಿಸಿಕೊಂಡು ಯಾವಾಗಲೂ ಕೆಲಸ ಮಾಡುವುದರಿಂದ ಜನಕ್ಕೆ ಬೇಕಾದ ಸಾಮಾನುಗಳನ್ನೆಲ್ಲಾ ಅವರೇ ಮಾಡಿಕೊಳ್ಳುತಾರೆ; ಅವರಲ್ಲಿ ಹಣವಿಲ್ಲದಿದ್ದಾಗ್ಯೂ ಅವರು ಹಿಟ್ಟು ಬಟ್ಟೆಗಿಲ್ಲದೆ ಸಾಯುವುದಿಲ್ಲ. ಆದರೆ ಈ ದಿನ ಹೊತ್ತಾಯಿತು. ಈ ಮಾತು ಇಲ್ಲಿಗೆ ಸಾಕು. ಲಲಿತೆಯು ನಿಂತ ಕಥೆಯನ್ನು ನಾಳೆ ಹೇಳಲಿ—ಹೀಗೆಂದು ಎಲ್ಲರೂ ತಮ್ಮ ಕೆಲಸಕ್ಕೆ ಹೊರಟು ಹೋದರು.

---

## ೨೧ ನೆ ಅಧ್ಯಾಯ

ಆ ಮಾರನೆ ದಿನ ಬೆಳಗ್ಗೆ ಮದನನು ಹಾಸಿಗೆಯಿಂದ ಎದ್ದ ತರುವಾಯ, ಮುನ್ನಾದಿನ ಚಾರುದತ್ತನ ಕಥೆಯಲ್ಲಿ ಅರಬ್ಬರು ಕುದುರೆ ಸವಾರಿಮಾಡುವ ಸಂಗತಿಯನ್ನು ಕೇಳಿದ್ದನಾದಕಾರಣ, ಹಾಗೆಯೇ ತಾನೂ ಸವಾರಿಮಾಡಬೇಕೆಂದು ಯೋಚಿಸಿ ಅದರ ಮೇಲೆ ಹತ್ತಿಕೊಂಡು

ಹೊರಟನು. ಅದನ್ನು ವಿಶೇಷವಾಗಿ ಚಮುಕಾಯಿಸಲು ಕುದುರೆಯು ಅತಿ ವೇಗವಾಗಿ ಓಡಿ ಹೋಯಿತು. ದಾರಿಯಲ್ಲಿ ಒಂದು ಕಳ್ಳಬದಿಯ ಜೋರೆ ಸಿಕ್ಕಿತು. ಕುದುರೆಯು ಕಾಣದೆ ಅದರೊಳಕ್ಕೆ ಕಾಲನ್ನು ಇಡಲು, ಕಾಲು ಹೂತುಕೊಂಡಿತು. ಮೇಲಕ್ಕೆ ಎತ್ತುವುದಕ್ಕೆ ಆಗ ಲಿಲ್ಲ. ಕೂಡಲೆ ದೊರೆಮಗನು ಸ್ವಲ್ಪ ಜಾಗರೂಕನಾಗಿ ಕುದುರೆಯ ಒಂದು ಪಕ್ಕಕ್ಕೆ ಸರಿದುಕೊಂಡನು. ಆದರೆ ಇವನ ಮೈಯೆಲ್ಲಾ ಬದಿ ಯಾಯಿತು. ಆಗ ಅರಸುಮಗನು ಕೆಟ್ಟ ಮುಖವನ್ನು ಹಾಕಿಕೊಂಡು ಕಾಲುನಡಗೆಯಲ್ಲಿಯೇ ಮುಂದಕ್ಕೆ ಹೊರಟನು. ದಾರಿಯಲ್ಲಿ ಒಬ್ಬ ಭಿಕ್ಷದವನು ತನ್ನ ೪-೬ ವರುಷದ ೨ ಗಂಡು ಹುಡುಗರನ್ನು ಸಂಗಡ ನಡಸಿಕೊಂಡು ೬ ತಿಂಗಳ ಮಗು ಒಂದನ್ನು ಹೆಗಲ ವೇಲೆ ಮಲಗಿಸಿ ಕೊಂಡು ಬರುತಿದ್ದನು. ತಾನು ಒಂದು ಲಂಗೋಟಿಯನ್ನು ಹಾಕಿ ದ್ದನು. ಸಂಗಡ ಬರುತಿದ್ದ ಹುಡುಗರಿಬ್ಬರೂ ಬರೀಮೈಲಿದ್ದರು. ಚಿಂದಿ ಚಿಂದಿಯಾದ ಒಂದು ಮೊಳದ ತುಂಡನ್ನು ಮಾತ್ರ ಆ ಕೈಮಗುವಿಗೆ ಹೊದ್ದಿಸಿಕೊಂಡಿದ್ದನು. ಇಂಥಾ ಭಿಕ್ಷದವನು ದೊರೆ ಮಗನ ಮುಂದೆ ನಿಂತು ಸ್ವಾಮಿ, ತಮ್ಮ ಮುಖ ಲಕ್ಷಣವನ್ನು ನೋಡಿದರೆ ಪುಣ್ಯವಂತರ ಹಾಗೆ ಕಾಣುತೀರಿ, ಮೈಯೆಲ್ಲಾ ವಿಶೇಷ ಕೊಚ್ಚೆಯಾಗಿದೆ. ಇದೇನು ಕಾರಣ? ಎಂದು ಕೇಳಿ ತನ್ನ ಬಡತನವನ್ನು ತಿಳಿಸಿ, ಮಕ್ಕಳೆಲ್ಲರೂ ಹೊಟ್ಟೆಗೆ ತಿಂದು ೨ ದಿವಸವಾಯಿತು, ಕೈಮಗುವು ಚಳಿ ಜ್ವರ ಬಂದು ನಡುಗುತಿದೆ, ಸ್ವಾಮಿ ತಮ್ಮಿಂದ ಪ್ರಾಣ ಉಳಿಯಬೇಕು, ಎಂದು ಅತ್ಯಂತ ದೈನ್ಯದಿಂದ ಹೇಳಿಕೊಂಡನು. ಇವನ ಮಾತನ್ನೆಲ್ಲಾ ಕೇಳಿ ಇವನ ಸ್ಥಿತಿಯನ್ನು ನೋಡಿ ಮದನನಿಗೆ ಮರುಕಹುಟ್ಟಿತು. ಕೂಡಲೆ ಉದಾರ ಮನಸ್ಸುಳ್ಳ ರಾಜಕುಮಾರನು ತನ್ನ ಹತ್ತಿರಿದ್ದ ಒಂದು ಹಣವನ್ನು ಅವನಿಗೆ ಕೊಟ್ಟನು. ಆಗ ಆ ದರಿದ್ರನು ಮದನನನ್ನು ಹರಸಿ ಮುಂದಕ್ಕೆ ಹೊರಟನು. ಅಷ್ಟರಲ್ಲಿಯೇ ರಾಜಪುತ್ರನು ಮುಂದಕ್ಕೆ ಹತ್ತು ಮಾರು ನಡೆಯಲು ಅಲ್ಲಿ ಒಂದು ಕುರಿಮಂದೆ ಸಿಕ್ಕಿತು. ಅದರಲ್ಲಿದ್ದ ಒಂದು ಆಡನ್ನು ಸೀಳುನಾಯಿಯೊಂದು ಹರಿಸಿ ಕೊಂಡು ಹೋಗಿ ಅದನ್ನು ಗಾಯಮಾಡಿ ಕೊಲ್ಲುವುದಾಗಿತ್ತು. ಇಂಥಾ

ಘೋರಕೃತ್ಯವನ್ನು ಯಾವಾಗಲೂ ಸಹಿಸಲಾರದ ಮದನನು ಇದನ್ನು ಕಂಡು ನಾಯಿಯನ್ನು ಹೊಡೆಯುವದಕ್ಕೆ ಹೋಗಲು, ಅದು ಆಡನ್ನು ಬಿಟ್ಟು ಬೊಗಳುತಾ ಇವನ ಮುಂದೆ ಬಂದು ನಿಂತುಕೊಂಡಿತು. ಹುಡುಗನಾದ್ದರಿಂದ ಇವನಿಗೆ ಭಯಪಡದೆ ಶ್ವಾನವು ಇವನ ಬಟ್ಟೆಯನ್ನು ಕಚ್ಚಿ ಹರಿದು ಮೇಲೆಬಿದ್ದು ಮೈಯನ್ನು ಪರಚುತಿತ್ತು. ಇನ್ನೊಂದು ಅಡಿಕೇ ಕಡಿಯುವ ಹೊತ್ತಿನಲ್ಲಿ ಆ ಕೆಟ್ಟ ನಾಯಿಯು ಹುಡುಗನ ಮೈಯನ್ನೆಲ್ಲಾ ಕಚ್ಚಿ ಪ್ರಾಣವನ್ನೇ ಕಳೆಯುತಿತ್ತು. ಅಷ್ಟರಲ್ಲಿಯೇ ಆಗತಾನೆ ಮದನನಿಂದ ಭಿಕ್ಷೆವನ್ನು ಈಸುಕೊಂಡು ಮಕ್ಕಳನ್ನೂ ಕರೆದುಕೊಂಡು ಅತ್ತ ಹೋಗುತಿದ್ದ ತಿರುಕೆಯವನು ನಾಯಿಯ ಕೆಟ್ಟತನವನ್ನು ದೂರದಿಂದಲೇ ಹಿಂತಿರುಗಿ ನೋಡಿ ತನ್ನ ಕೈಮಗುವನ್ನು ಸಂಗಡ ಬರುತಿದ್ದ ೬ ವರುಷದ ಹುಡುಗನಾದ ತನ್ನ ದೊಡ್ಡ ಮಗನ ಕೈಗೆ ಕೊಟ್ಟು ಓಡಿಬಂದು ಹತ್ತಿರಿದ್ದ ಒಂದು ದೊಣ್ಣೆಯಿಂದ ಆ ಶ್ವಾನವನ್ನು ಚೆನ್ನಾಗಿ ಹೊಡೆದು ಹಿಂತಿರುಗಿ ಬರದಂತೆ ಆಚೆಗೆ ಅಟ್ಟಿದನು. ಆಮೇಲೆ ಮದನನು ಮುಂದಕ್ಕೆ ಹೊರಡಲು, ಅವನ ಎದುರಿಗೆ ರಾಮ ಜೋಯಿಸನು ಸ್ನಾನವನ್ನು ಮಾಡಿಕೊಂಡು ಒದ್ದೇ ಬಟ್ಟೆಯ ಹಿಂಡಿಕೆಯನ್ನು ಕಟ್ಟಿ ತಲೇ ಮೇಲೆ ಇರಿಸಿಕೊಂಡು ಒಂದು ಕೈಯಲ್ಲಿ ಹುವ್ವಿನ ಬುಟ್ಟಿಯನ್ನೂ ಇನ್ನೊಂದು ಕೈಯಲ್ಲಿ ಪಂಚಪಾತ್ರೆಯನ್ನೂ ಹಿಡಿದು ಮಂತ್ರವನ್ನು ಹೇಳುತಾ ಬರುತಿದ್ದನು. ಆತನನ್ನು ಕಂಡಕೂಡಲೆ, ಮದನನು ಏನೋ ಮಹಾಕಾರ್ಯನಿರ್ವಾಹ ಮಾಡಿದವನಂತೆ ಜಾಗ್ರತೆಯಾಗಿ ಉಪಾಧ್ಯಾಯನ ಹತ್ತಿರಕ್ಕೆ ಓಡಿಹೋಗಿ, ಇವನ ಮೈಯೆಲ್ಲಾ ಮಣ್ಣಾಗಿರುವುದನ್ನು ಕಂಡು ಆತ ಇದ್ಧೇನೆಂದು ಇವನನ್ನು ಪ್ರಶ್ನೆ ಮಾಡುವುದಕ್ಕೆ ಮುಂಚಿತವಾಗಿಯೇ—ಜೋಯಿಸರೆ, ಒಂದು ಕೆಟ್ಟ ಸೀಳುನಾಯಿ ನಮ್ಮ ಸುಮತಿಯ ಮೇಕೆಯನ್ನು ಕೊಂದುಹಾಕುತಿತ್ತು. ನಾನು ಅಷ್ಟರಲ್ಲಿಯೇ ಓಡಿಹೋಗಿ ಅದನ್ನು ಹೆದರಿಸಿ ಬಿಡಿಸದಿದ್ದರೆ ಮೇಕೆಬೇರೆ ಉಳಿಯುತಿರಲಿಲ್ಲ ಎಂದನು. ಜೋಯಿಸನ ಸಂಗಡಲೇ ಪಾದಚಾರಿಯಾಗಿ ಬರುತಿದ್ದ ಆ ದೊರೆಯು ಎರಡು ಮೂರು ದೂರದಲ್ಲಿ ಬರುತಿದ್ದ ಗೋಪಾಳದವನನ್ನು ನೋಡಿ—ಇವ ಯಾರು ? ನೋಡಿದರೆ

ಜೀವಶವವಾಗಿದಾನೆ- ಅವನ ಮಕ್ಕಳು ಅವನಿಗಿಂತಲೂ ಕೇಡಾಗಿವೆ. ಕಾಲನ್ನು ಎತ್ತಿ ಇರಿಸಲಾರವು, ಎಂದನು.

ಮದನ—ಅಪ್ಪಾಜಿ, ನಾಯಿಯನ್ನು ನಾನು ಹೊಡೆಯುವುದಕ್ಕೆ ಹೋದಾಗ ಅದು ನನ್ನ ಮೇಲೆ ಬಿದ್ದು ನನ್ನನ್ನು ಕೊಂದುಹಾಕುತಿತ್ತು. ಈತನು ನಾಯಿಯನ್ನು ಹೊಡೆದು ಓಡಿಸಿ ನನ್ನನ್ನು ಉಳಿಸಿದನು. ಆದ್ದರಿಂದ ೨ ದಿವಸದಿಂದ ಅನ್ನಕ್ಕೆ ಗತಿಯಿಲ್ಲದೆ ಉಪವಾಸವಾಗಿರುವ ಈ ಬಡವನನ್ನೂ ಇವನ ಮಕ್ಕಳನ್ನೂ ಕರೆದುಕೊಂಡು ಹೋಗಿ ನಮ್ಮ ಅರಮನೆಯಲ್ಲಿ ಒಂದು ದಿನ ಹೊಟ್ಟೆತುಂಬಾ ಅನ್ನವನ್ನು ಹಾಕಿ ಕಳುಹಿಸೋಣವೆಂದು ಇದ್ದೆ. ಇವನ ಎಳೇಮಗುವಿಗೆ ಚಳಿಬಂದು ನಡುಗುತಿದೆ. ಈಚೆಗೆ ನನ್ನ ನಡತೆ ಸರಿಯಾಗಿಲ್ಲ. ನನ್ನ ತಪ್ಪನ್ನೆಲಾ ಮರೆತು ಈ ಬಡವನಿಗೂ ಅವನ ಮಕ್ಕಳಿಗೂ ಒಂದು ದಿನ ಅನ್ನ ಹಾಕುವಂತೆ ಅಪ್ಪಣೆ ಮಾಡಬೇಕು, ಅಪ್ಪಾಜಿ.

ಇಷ್ಟರಲ್ಲಿಯೇ ಮದನನ ಕುದುರೇ ಆಳು ಓಡಿಬಂದು ಬದಿಯಲ್ಲಿ ಸಿಕ್ಕಿಕೊಂಡಿದ್ದ ಕುದುರೆಯನ್ನು ಈಚೆಗೆ ತೆಗೆದು ಅದನ್ನು ಹಿಡಿದು ಕೊಂಡು ಇವರೆಲ್ಲಾ ಮಾತನಾಡುತಾ ನಿಂತಿದ್ದೆಡೆಗೆ ಬಂದನು. ಆ ದೊರೆಯು ಅವನನ್ನು ಕಂಡು ಇದೇನೆಂದು ಕೇಳಲು, ಆಳು ಅರಸ ನನ್ನು ಕುರಿತು—ಪರಾಕು ಸ್ವಾಮಿ, ಚಿಕ್ಕ ಬುದ್ಧಿಯವರ ಅಪ್ಪಣೇ ಪ್ರಕಾರ ನಾನು ಕುದುರೆಯನ್ನು ಸವಾರಿಗೆ ಸಜ್ಜುಮಾಡಿದೆ. ಅವರು ಅದರ ಮೇಲೆ ಕೂತುಕೊಂಡು ಹೋಗುತಾ ಅರಬ್ಬರು ಸವಾರಿಮಾಡ ತಕ್ಕ ತರಹವನ್ನೆಲ್ಲಾ ಹೇಳುತಾ ಬರುತಿದ್ದರು. ಅಷ್ಟರಲ್ಲಿಯೇ ಕುದುರೆಯು ಹತೋಟಿತಪ್ಪಿ ಓಡುವುದಕ್ಕೆ ಮೊದಲುಮಾಡಿತು. ಮದನ ಕುಮಾರರು ಯಾವ ಕಡೆಗೆ ಹೋದರೊ ಅದು ನನ್ನ ಕಣ್ಣಿಗೆ ಕಾಣಿಸಲೇ ಇಲ್ಲ. ತರುವಾಯ ಕುದುರೆಯು ಸಿಕ್ಕಿತು. ಅದರ ಮೈಯೆಲ್ಲಾ ಕೊಚ್ಚೆಯಾಗಿತ್ತು, ಹೀಗೆಂದು ಸಂಗತಿಯನ್ನೆಲ್ಲಾ ಅರಿಕೆ ಮಾಡಿದನು. ಇದನ್ನು ಕೇಳಿ ದೊರೆಯು—ಈ ಕುದುರೆಯು ಯಾವಾಗಲೂ ಸಾದು ವಾಗಿಯೇ ಇರುವುದು. ಆದರೂ ಈ ಸಮಯದಲ್ಲಿ ಇಷ್ಟು ಆಭಾಸಕ್ಕೆ ಕಾರಣವೇನೋ ಗೊತ್ತಾಗಲಿಲ್ಲ, ಎಂದು ಹೇಳಿ, ಮದನನ ಕೈಲಿದ್ದ

ಚಾವಟಿಯನ್ನೂ ಅವನ ಕಾಲಿನಲ್ಲಿದ್ದ ಮುಮುರೇಜನ್ನೂ ಕಂಡು, ಈ ಆಯುಧಗಳ ತಂಟಿಯಿಂದ ಕುದುರೆಯು ಹತೋಟಿತಪ್ಪಿರಬೇಕೆಂದು ತಿಳಿದುಕೊಂಡನು. ಮದನನ ಅವಿವೇಕಕ್ಕೆ ಸ್ವಲ್ಪ ಕೋಪಬಂತು. ಆದರೆ ಅದನ್ನು ತೋರ್ಪಡಿಸದೆ, ಮದನ ಮಾಡಿದ ಅವಿವೇಕವನ್ನೂ ಅದರಿಂದ ಉಂಟಾಗುತಿದ್ದ ಅಪಾಯವನ್ನೂ ಮಗನಿಗೆ ತಿಳಿಸಿ, ಮುಂದಕ್ಕೆ ಹಾಗೆ ಮಾಡಬಾರದೆಂದು ಬುದ್ಧಿ ಹೇಳಿ, ಎಲ್ಲರನ್ನೂ ಕರೆದುಕೊಂಡು ಮನೆಗೆ ಬಂದು, ಸಂಗಡ ಬಂದಿದ್ದ ಬಡವನಿಗೂ ಅವನ ಮಕ್ಕಳಿಗೂ ಹೊಟ್ಟೆತುಂಬಾ ಊಟವನ್ನು ಮಾಡಿಸುವಂತೆ ಅಪ್ಪಣೆ ಮಾಡಿದನು. ಅವರೆಲ್ಲರೂ ತೃಪ್ತಿಯಾಗಿ ಭೋಜನಮಾಡಿ ದೊರೆಯ ಎದುರಿಗೆ ಬಂದು ನಿಂತರು. ಈ ಉಪಕಾರಕ್ಕಾಗಿ ಕೃತಜ್ಞತೆಯು ಅವರ ಮುಖಭಾವದಲ್ಲಿ ತೋರುತಿತ್ತು. ಅರಸನು ಅವರ ಮಾತಿನಿಂದ ಆ ಬಡವನು ಗಟ್ಟದ ಸೀಮೆಯವನಾಗಿರಬೇಕೆಂದು ಯೋಚಿಸಿ, ಆ ಮಕ್ಕಳಿಗೂ ಅವನಿಗೂ ಅಂಥಾ ಕಷ್ಟ ಯಾಕೆ ಪ್ರಾಪ್ತವಾಯಿತೆಂದು ವಿಚಾರಿಸಿದನು. ಅದಕ್ಕೆ ಅವ ಹೇಳಿದ್ದು ಏನೆಂದರೆ :—

## ಗಟ್ಟದ ಸೀಮೆಯವನ ಕಥೆ

ಮಹಾಸ್ವಾಮಿ, ತಾವು ಈ ದಿನ ನನ್ನ ಪ್ರಾಣವನ್ನೇ ಉಳಿಸಿದಿರಿ. ಇದನ್ನು ನಾನು ಎಂದೆಂದಿಗೂ ಮರೆಯಲಾರೆ. ನನ್ನ ಕಥೆಯನ್ನು ತಮಗಲ್ಲದೆ ಮತ್ತೆ ಯಾರಿಗೆ ಹೇಳಬೇಕು? ನಾನು ಗಟ್ಟದ ಸೀಮೆಯವನು. ನಮ್ಮ ದೇಶದಲ್ಲಿ ಎಲ್ಲಿ ನೋಡಿದಾಗ್ಲೂ ಕಲ್ಲುಗುಡ್ಡಗಳು ಬಂಡೆಗಳು ಇವೆ. ರಾಜ್ಯ ಅಷ್ಟು ಸುಭಿಕ್ಷವಾದ್ದಲ್ಲ. ಕಂಬು ಹುರಳಿ ಇವು ಹೊರತು ಮತ್ತೆ ಯಾವ ಧಾನ್ಯವೂ ಹೆಚ್ಚಾಗಿ ಬೆಳೆಯುವುದಿಲ್ಲ. ಎಷ್ಟು ಕಷ್ಟಪಟ್ಟು ಗೈಮೆ ಮಾಡಿದರೂ ಬೆಳೆ ಸ್ವಲ್ಪ. ಚಳಿ ಹೆಚ್ಚು. ಜನಬಡ. ಹೆಚ್ಚಾದ ಕಷ್ಟಕ್ಕೆ ಇವರ ದೇಹ ನುರುಗಿದೆ. ನಮ ದೇಶದ ಜನರಿಗೆ ತಂದೆತಾಯಿಗಳಲ್ಲಿಯೂ ಹಿರಿಯರು ಗುರುಗಳಲ್ಲಿಯೂ ಭಕ್ತಿಯೂ ಪ್ರೀತಿಯೂ ಅಧಿಕ. ತಮ್ಮ ದೇಶದ ಮೇಲೆ ವಿಶೇಷವಾದ ಅಭಿಮಾನವುಂಟು. ಆ ದೇಶದ ಒಂದು ಗ್ರಾಮದಲ್ಲಿ ನಮ್ಮದೊಂದು ಮೊಟ್ಟೆಮನೆ ಇದೆ. ನಮ್ಮ ತಂದೆತಾಯಿಗಳು ಆ ಊರಲ್ಲಿದಾರೆ.

ಅವರ ಸಂಸಾರ ಬಹು ದೊಡ್ಡದು. ನಾವು ಬಹು ಬಡವರು. ನಮ್ಮ ತಂದೆಯು ಸೇನೆಯಲ್ಲಿ ಸೇರಿ ೪ ವರುಷ ಚಾಕರಿ ಮಾಡಿದವನು. ಆತನ ಹಾಗೆಯೇ ನಾನೂ ದಂಡಿನಲ್ಲಿ ಚಾಕರಿಯನ್ನು ಮಾಡಬೇಕೆಂದು ವಿಶೇಷವಾಗಿ ಆಶೆಯಿತ್ತು. ನಾನು ಒಬ್ಬನೇ ಮಗನಾದ್ದರಿಂದ ನನ್ನನ್ನು ಕಳುಹಿಸುವುದಕ್ಕೆ ಆತನಿಗೆ ಇಷ್ಟವಿರಲಿಲ್ಲ.

ಒಂದು ದಿನ ರಾತ್ರೆ ಮುಪ್ಪಿನ ಮುದುಕರಾದ ನಮ್ಮ ತಂದೆ ತಾಯಿಗಳೂ ನಾವೂ ಮತ್ತು ಮನೆಯ ಇತರ ಜನರೂ ಎಲ್ಲರೂ ಸೇರಿ ನಮ್ಮ ಹಟ್ಟಿಯಲ್ಲಿ ದೊಡ್ಡ ಅಗ್ಗಿಷ್ಟಿಗೆಯನ್ನಿಟ್ಟು ಬೆಂಕಿಯನ್ನು ಕಾಸಿಕೊಳ್ಳುತಿದ್ದೆವು. ಆ ರಾತ್ರೆ ಜಾವಹೊತ್ತು ಆದಮೇಲೆ, ತಲೆಗೆ ಒಂದು ಕಿರೀಟವನ್ನಿಟ್ಟು, ಕತ್ತಿನಿಂದ ಸೊಂಟದವರೆಗೂ ಕಬ್ಬಿಣದ ಉಂಗುರದಿಂದ ಮಾಡಿದ ಕವಚವನ್ನು ತೊಟ್ಟು, ಮಂಡಿಯವರೆಗೂ ವೀರಕಾಶೆಯನ್ನು ಹಾಕಿದ ಪಂಚೆಯನ್ನುಟ್ಟು, ಸೊಂಟಕ್ಕೆ ಚಕ್ಕಳದ ನಡುಕಟ್ಟನ್ನು ಕಟ್ಟಿ, ಪಕ್ಕದಲ್ಲಿ ಕತ್ತಿಯನ್ನೂ ಗುರಾಣಿಯನ್ನೂ ಕಟ್ಟಿಕೊಂಡು, ಆಜಾನುಬಾಹುವಾಗಿದ್ದ ಒಬ್ಬ ವೀರನು ನಮ್ಮ ಮನೆಯೊಳಕ್ಕೆ ಬಂದು ನಮ್ಮ ತಂದೆಯ ಎದುರಿಗೆ ನಿಂತುಕೊಂಡು—ಏನೈ ಹುಲಿನಾಯಕ, ನನ್ನನ್ನು ಮರೆತುಬಿಟ್ಟೆಯಾ? ಎಂದು ಹಸನ್ಮುಖನಾಗಿ ಕೇಳಿದನು. ನಮ್ಮ ತಂದೆಯು ಆತನನ್ನು ದೃಷ್ಟಿಸಿ ನೋಡಿ—ಬುದ್ಧಿ, ಬುದ್ಧಿ ತಮ್ಮನ್ನು ಮರೆತೇನೆ, ನನ್ನೊಡೆಯನನ್ನ, ದಯಮಾಡಬೇಕು, ಎಂದು ಒಂದು ಮಣೆಯ ಮೇಲೆ ಆತನನ್ನು ಕೂರಿಸಿದನು. ಅವರಿಬ್ಬರೂ ಕುಶಲಪ್ರಶ್ನೆಗಳನ್ನು ಮಾಡಿ ಮಾತನಾಡಿಕೊಂಡ ತರುವಾಯ ಆ ವೀರನು—ಹುಲಿನಾಯಕ, ನಮ್ಮ ದಂಡಿನ ತುಕ್ಕಡಿ ಇಲ್ಲಿಗೆ ಒಂದು ಕೊಂಬಿನ ಕೂಗಿನಲ್ಲಿ ಬಂದು ಇಳಿದಿದೆ. ಇಂದಿಗೆ ಮೂರು ದಿವಸಕ್ಕೆ ನಮ್ಮ ಸೇನೆಯು ಕೊಡೆಯಾಲದ ರೇವಿನಲ್ಲಿ ಹಡಗನ್ನು ಹತ್ತಿ ಒಂದು ದ್ವೀಪಕ್ಕೆ ಹೊರಡಬೇಕು. ಅಲ್ಲಿನ ಜನರಿಗೂ ನಮ್ಮವರಿಗೂ ಸ್ವಲ್ಪ ವೈಷಮ್ಯಹುಟ್ಟಿದೆ. ನಾವು ಅವರನ್ನು ಜೈಸಬೇಕು, ಅಥವಾ ಅವರಲ್ಲಿ ಸ್ನೇಹವನ್ನು ಬೆಳಸಿಕೊಳ್ಳಬೇಕು. ಇದು ಹೊರತು ನಮ್ಮ ಹಡಗಿನವರಿಗೆ ಉಳಿಗಾಲವಿಲ್ಲವಾಗಿದೆ. ನಿನ್ನನ್ನು ನೋಡಿಕೊಂಡು

ಹೋಗುವುದಕ್ಕಾಗಿ ಬಂದೆ. ದಾರಿಯಲ್ಲಿ ಬರುತಾ ಮಳೆಯಿಂದ ನೆನೆದು ಚಳಿಯಾಗುತಿದೆ, ಹಸಿವೂ ಹೆಚ್ಚಾಗಿದೆ, ಎಂದು ಹೇಳಿದನು. ಆಗ ನಮ್ಮ ಯಜಮಾನನು—ಸ್ವಾಮಿ, ಈ ಬೆಂಕಿಯನ್ನು ಕಾಸಿಕೊಳ್ಳ ಬಹುದು. ತಾವು ಅರಸುಗಳು, ನಾವು ಬೇಡರು. ನಮ್ಮ ಮನೆಯಲ್ಲಿ ತಾವು ಊಟಮಾಡುವುದಿಲ್ಲ. ಸ್ವಾಮಿಗೆ ನಾನೇನ ಒಪ್ಪಿಸಲಿ, ಎಂದು ಹೇಳಿ, ಜೋಳದ ಆರಳನ್ನೂ ಅರ್ಧ ಸೇರು ಹಾಲನ್ನೂ ಬಹುಶ್ರಮ ದಿಂದ ತಂದು ಆತನಿಗೆ ಅರ್ಪಿಸಿ, ಐವತ್ತು ಅತ್ತೀಹಣ್ಣನ್ನು ಮುಂದಿಟ್ಟು ತೆಗೆದುಕೊಳ್ಳಬೇಕೆಂದು ಹೇಳಿದನು. ಆ ವೀರನು ಅಯ್ಯಾ, ಆದರ ದಿಂದ ನೀನು ಕೊಟ್ಟ ಈ ಆಹಾರದ ರುಚಿ ಎಂಥಾ ಭಕ್ಷ್ಯಭೋಜ್ಯಗಳಿಗೆ ತಾನೇ ಬಂದೀತು, ಸಂಕೋಚವನ್ನು ಮಾಡಿಕೊಳ್ಳಬೇಡ, ಎಂದು ಅವೆಲ್ಲವನ್ನೂ ಮೆದ್ದು ನಾವುಗಳು ಆತನಿಗಾಗಿ ಹಾಸಿದ ಚಾಪೆಮೇಲೆ ಮಲಗಿ ವಿಶ್ರಮಿಸಿಕೊಂಡನು. ಅದೆಲ್ಲವನ್ನೂ ನೋಡಿ ದಂಡಿನ ಚಾಕರಿ ಮಾಡಬೇಕೆಂದು ನನಗಿದ್ದ ಆಶೆ ಮತ್ತೂ ಅಧಿಕವಾಯಿತು. ಆತನ ಸಂಗಡಲೇ ನಾನೂ ಬರುತೇನೆಂದು ಆತನಿಗೆ ಹೇಳಿಕೊಂಡೆ. ಆತನು ದಂಡಿನ ಚಾಕರಿಯಲ್ಲಿ ಉಂಟಾಗತಕ್ಕ ವಿಧವಿಧವಾದ ಕಷ್ಟ ಗಳನ್ನು ವರ್ಣಿಸಿ ಹೇಳಿದನು: ಅನ್ನ ನೀರಿಲ್ಲದೇ ೩-೪ ದಿವಸಗಳಾ ದರೂ ಉಪವಾಸ ಇರಬೇಕಾದ ಸಂಭವ, ಅಲ್ಲಿ ಉಂಟಾಗತಕ್ಕ ರೋಗ, ಪ್ರಾಣಾಪಾಯಗಳು, ಪ್ರಾಣಿವಧೆಯಿಂದ ಉಂಟಾಗುವ ಪಾಪ, ಮಾರ್ಗಶ್ರಮ ಇವೇ ಮುಂತಾಗಿ ಅನೇಕ ವಿಧವಾದ ಕಷ್ಟಗಳನ್ನು ವಿಶದಪಡಿಸಿದನು. ಇದು ಯಾವುದೂ ನನ್ನ ಮನಸ್ಸಿಗೆ ಅಂಟಲಿಲ್ಲ. ಸೇನೆಯ ಚಾಕರಿಗೆ ಸೇರಿಕೊಂಡು ಆತನ ಸಂಗಡ ಹೋಗಲೇಬೇಕೆಂದು ನಿಶ್ಚೈಸಿಕೊಂಡೆ. ರಾತ್ರೆ ಮೊದಲುಕೋಳಿ ಕೂಗಿತು. ಆ ವೀರಭಟ ನಾದ ತುಕ್ಕಡೀದಾರನು ಎದ್ದು ದಂಡಿನ ಪಾಳಯಕ್ಕೆ ಹೊರಡಲು ಸಿದ್ಧ ವಾದನು. ನಾನೂ ಆತನ ಸಂಗಡಲೇ ತೆರಳುವುದಕ್ಕೆ ಸಜ್ಜುಮಾಡಿ ಕೊಂಡೆ. ಹೊರಡುವ ಸಮಯ ಬಂತು. ವೃದ್ಧಳಾದ ನಮ್ಮ ತಾಯಿ ಬಂದು ನನ್ನನ್ನು ತಬ್ಬಿಕೊಂಡು—ಅಯ್ಯೋ ಮಗನೇ ನೀನು ಒಬ್ಬನೇ ನನಗೆ ಗಂಡುಮಗ; ಉಳಿದ ಏಳು ಜನವೂ ಹೆಣ್ಣುಮಕ್ಕಳು, ನಿನ್ನಿಂದ

ನಮ್ಮ ಮನೆ ಬೆಳಕು ಕಾಣಬೇಕೆಂದು ಇದ್ದೆನಲ್ಲಪ್ಪಾ! ಹಾಳ ರಣಕ್ಕೆ ನಿನ್ನನ್ನು ಕಳುಹಿಸಿ ನಾನು ಹೇಗೆ ಹೊಟ್ಟೇಹಿಡಿಯಲಿ! ಎಂದು ವಿಧ ವಿಧದಲ್ಲಿ ಹಂಬಲಿಸಿಕೊಂಡು ಅಳುತಿದ್ದಳು. ನನ್ನ ತಂಗಿಯರೆಲ್ಲರೂ —ಅಯ್ಯೋ ಅಣ್ಣಾ, ಅಣ್ಣಾ ಹೋಗುತೀಯಾ! ನಮಗೆ ಯಾರು ಗತಿ! ಎಂದು ರೋದನ ಮಾಡುತಿದ್ದರು. ಅದೆಲ್ಲವನ್ನೂ ನೋಡಿ ನನಗೂ ಮನಸ್ಸು ಸ್ವಲ್ಪ ಕರಗಿತು, ಕಣ್ಣಿನಲ್ಲಿ ನೀರು ಬಂತು. ನಾನು ರಾತ್ರೆಮಾಡಿದ ಸಂಕಲ್ಪವನ್ನು ಬಿಟ್ಟುಬಿಡಲೇ ಎನ್ನುವಮಟ್ಟಿಗೂ ಮನ ಸ್ಸೆಲ್ಲಾ ಕಲಕಿ ಹೋಯಿತು. ನಮ್ಮ ತಂದೆಯ ಮುಖವನ್ನು ನೋಡಿದೆ. ಆತನ ಕಣ್ಣಿನಲ್ಲಿಯೂ ನೀರು ಬಂತು. ಅದನ್ನು ಸಹಿಸಿಕೊಂಡು ಹೆಂಡತಿಯನ್ನು ನೋಡಿ—ಅವನು ರಣಕ್ಕೆ ಹೋಗಲೇ ಬೇಕೆಂದು ಮುಷ್ಕರಮಾಡುತಾನೆ, ಅವನನ್ನು ಯಾಕೆ ತಡೆಯುತೀಯೆ? ಬಿಟ್ಟು ಬಿಡು. ಆಯುಸ್ಸಿದ್ದರೆ ಬದುಕಿಬರುತಾನೆ. ಇಲ್ಲದಿದ್ದರೆ ವೀರಸ್ವರ್ಗ ಬರುವುದು. ಎಷ್ಟು ದಿನವಿದ್ದರೂ ಸಾಯಲೇಬೇಕು, ಎಂದನು. ನಮ್ಮ ತಂದೆತಾಯಿಗಳಿಗೆ ನಾನು ನಮಸ್ಕಾರ ಮಾಡಿ, ಅವರ ಹರಕೆ ಯನ್ನು ಕೈಗೊಂಡು, ಹತ್ತಿರ ನಿಂತಿದ್ದ ತುಕ್ಕಡಿದಾರನಾದ ಆ ಭೀಮ ರಾಜನ ಸಂಗಡ ಹೊರಟೆ. ಆತನು ಸೇನೆಯಲ್ಲಿ ನನಗೆ ಒಂದು ಚಿಕ್ಕ ಅಧಿಕಾರವನ್ನು ಮಾಡಿಕೊಟ್ಟನು.

ತರುವಾಯ ಹಡಗನ್ನು ಏರಿ ಆ ದ್ವೀಪಕ್ಕೆ ಹೋಗಿ ಅಲ್ಲಿ ಪಾಳ ಯವನ್ನು ಹಾಕಿ ಇಳಿದುಕೊಂಡೆವು. ಸರ್ವ ಸೇನಾಪತಿಯಾಗಿದ್ದ ಆ ಭೀಮರಾಜನು ತನ್ನೊಳಗೆ ಯೋಚಿಸುತಾ ನಾಲ್ಕು ಉಪಾಯಗಳಲ್ಲಿ ದಾನೋಪಾಯವು ಪರಾಕ್ರಮಿಗಳಿಗೆ ತಕ್ಕದ್ದಲ್ಲ. ಶತ್ರುಗಳನ್ನು ಜೈಸುವುದಕ್ಕೆ ಸಾಮಭೇದೋಪಾಯಗಳನ್ನು ಮಾಡಬೇಕು. ಇದಕ್ಕೆ ಅವರು ಸಗ್ಗದಿದ್ದರೆ ಅಂಥಾ ಕಾಲದಲ್ಲಿ ದಂಡೋಪಾಯವನ್ನು ಅನುಸರಿಸ ಬೇಕೆಂದು ತಿಳಿದು, ನನ್ನನ್ನೂ ಇನ್ನೂ ಇಬ್ಬರನ್ನೂ ಸಂಗಡ ಕರೆದು ಕೊಂಡು, ಆ ದ್ವೀಪದ ಕಾಡುಜನರ ದೊರೆಯ ಹತ್ತಿರಕ್ಕೆ ಹೋಗಿ ಅವರ ಮಾತಿನಲ್ಲಿಯೇ ಸಂಭಾಷಣೆಯನ್ನು ಮಾಡಿ, ಆ ಜನರಲ್ಲಿ ಸ್ನೇಹವನ್ನು ಮಾಡಿಕೊಂಡನು.

ಈ ರೀತಿಯಲ್ಲಿ ಸ್ನೇಹ ಬೆಳೆಯಿತಲ್ಲಾ ಎಂಬ ಸಂತೋಷವನ್ನು ತೋರ್ಪಡಿಸುವುದಕ್ಕಾಗಿ ಆ ಕಾಡುಜನರ ಮುಖಂಡರಾದ ಪ್ರಭುಗಳೆಲ್ಲರೂ ಕಾತರರಾಗಿದ್ದರು. ಅವರಲ್ಲಿ ಒಬ್ಬ ಆಯಗಾರನು ಹೊರಕ್ಕೆ ಬಂದು ನಿಂತು ಇತರರನ್ನು ಕುರಿತು—ಎಲ ಅಪ್ಪಾ, ಅಣ್ಣಂದಿರಾ, ಬನ್ನಿ. ನಮ್ಮ ಮನಸ್ಸಿಗೆ ಈ ಸಮಯದಲ್ಲಿ ಉಂಟಾದ ಹರ್ಷವನ್ನು ನಮ್ಮವರಲ್ಲಿ ರೂಢಿಯಾಗಿರುವ ಕುಣಿದಾಟದಿಂದ ತೋರಿಸೋಣ, ಎಂದು ತನ್ನ ಕತ್ತಿಯನ್ನು ಝಳಪಿಸುತಾ ಕೂಗಿದನು. ಆಗ ಆ ಕಾಡುಜನರೆಲ್ಲಾ ತಮ್ಮ ಆಯುಧಗಳನ್ನು ಹಿಡಿದುಕೊಂಡು ಹುಚ್ಚು ಹುಚ್ಚಾಗಿ ಅರಚಿಕೊಳ್ಳುತಾ ಕಾಡಕುಣಿತವನ್ನು ಕುಣಿದರು. ತರುವಾಯ ಅವರ ಪದ್ಧತಿಪ್ರಕಾರ ನಮ್ಮಗಳಿಗೆ ಉಪಚಾರವನ್ನು ಮಾಡಿ ನಮ್ಮನ್ನು ಕಳುಹಿಸಿಕೊಟ್ಟರು. ಇದುವರೆಗೆ ಎಲ್ಲಾ ಹುವ್ವಿನ ಸರವನ್ನು ಎತ್ತಿದಹಾಗೆ ಸುಲಲಿತವಾಗಿಯೇ ಸಾಗಿತು. ದಂಡಿನವರು ಮಾಡುವ ಕಾರ್ಯನಿರ್ವಾಹವೆಲ್ಲವೂ ಕಷ್ಟವಿಲ್ಲದೆ ನಡೆಯತಕ್ಕದ್ದೆಂದು ನನಗೆ ತೋರಿತು. ಆದರೆ ಒಂದೆರಡು ದಿನಗಳಲ್ಲಿಯೇ ನನಗೆ ಅನುಭವ ಸಾಲದೆಂದು ಗೊತ್ತಾಯಿತು.

ಆ ಜನರಲ್ಲಿ ಸ್ನೇಹವನ್ನು ಮಾಡಿಕೊಂಡು ಅವರು ನಮ್ಮದೊರೆಗೆ ಕಪ್ಪ ಮೊದಲಾದ್ದನ್ನು ಕೊಡತಕ್ಕದ್ದೆಂಬ ನಿಷ್ಕರ್ಷೆಯಿಂದ ಭೀಮರಾಜರು ಆ ಸೇನೆಯೊಡನೆ ಆ ಊರನ್ನು ಬಿಟ್ಟು ಹೊರಟರು. ನಾನೂ ಅವರ ಸಂಗಡಲೇ ಇದ್ದೆ. ಒಂದು ದಿನ ಮಧ್ಯಾಹ್ನದ ಪೈಣ ಆದ ತರುವಾಯ ನಮಗೆ ದಾರಿತಪ್ಪಿ ಹೋಯಿತು ಎಲ್ಲಿ ನೋಡಿದರೂ ಗಟ್ಟಬೆಟ್ಟಗಳು, ದಾರಿಕಟ್ಟಿಕೊಂಡು ತುಂಬಿ ಹರಿಯುವ ಕಳ್ಳತೊರೆಗಳು, ಕೊಲ್ಲಿಗಳು, ಒಂದು ಕಡೆ ನೋಡಿದರೆ ಆಕಾಶಕ್ಕೆ ಊರೇ ಕೊಟ್ಟಂತೆ ಕಾಣಿಸುವ ಬಹು ಎತ್ತರವಾದ ಮರಗಳು, ಇನ್ನೊಂದು ಕಡೆ ಎಷ್ಟು ದೂರ ನೋಡಿದಾಗ್ಯೂ ಹೆಜ್ಜೆಯನ್ನು ಇಡುವದಕ್ಕೆ ಸಹಿತವಾಗಿ ಸ್ಥಳವಿಲ್ಲದೆ ಇರುವ ಹಾಗೆ ದಟ್ಟವಾಗಿ ಬೆಳೆದು ಹಣೆದುಕೊಂಡಿರುವ ಮುಳ್ಳು ಪೊದೆಗಳು, ಇವುಗಳೆಲ್ಲಾ ಸಿಕ್ಕಿದವು. ಕೈಲಿದ್ದ ಆಯುಧಗಳಿಂದ ಕೈಲಾದಮಟ್ಟಿಗೂ ಮರಮುಂಡಿಗೆಯನ್ನು ಕಡಿದುಕೊಂಡು

ದಾರಿಯನ್ನು ಮಾಡಿಕೊಂಡು ಹೊರಟೆವು. ನಾವು ಮಾಡಿದ ಅಪ ರಾಧಕ್ಕೆ ಈ ಕಷ್ಟ ಸಾಲದೆಂದು ದೇವರ ಮನಸ್ಸಿಗೆ ತೋರಿತೋ ಏನೋ! ಸ್ವಲ್ಪ ದೂರ ಇಂಥಾ ಘೋರಾರಣ್ಯದಲ್ಲಿ ನಾವು ಹೊರಡಲು, ನಾಲ್ಕು ಕಡೆಯಿಂದಲೂ ಕವಣೇಕಲ್ಲು ಬಂದು ಬೀಳುವುದಕ್ಕೆ ಮೊದ ಲಾಯಿತು. ಕೂಡಲೆ ಸರಳುಗಳೂ ಬಂದು ಬೀಳುವುದಕ್ಕೆ ಮೊದಲಾ ದವು. ಎಲ್ಲಾ ದಿಕ್ಕಿನಿಂದಲೂ ಇಂಥಾ ಮೃತ್ಯುವಿನ ಮಳೆ ಸುರಿಯುತ್ತಾ ಬಂತು. ನಮ್ಮ ಸೇನೆಯಲ್ಲಿ ಅನೇಕರು ಪೆಟ್ಟು ತಗಲಿ ಸತ್ತು ಹೋದರು. ಯಾರು ಎಲ್ಲಿ ಅವಿತುಕೊಂಡರೆ ಅವರು ಅಲ್ಲಿಯೇ ಪೆಟ್ಟು ತಗಲಿ ಒರಗು ತಿದ್ದರು. ನಮ್ಮ ಸೇನೆಯವರೂ ದಿಕ್ಕು ದಿಕ್ಕಿಗೆ ಕೋವಿಯನ್ನು ಹಾರಿಸಿದರು. ಆದರೆ ಪ್ರಯೋಜನವೇನು? ನಮ್ಮ ಏಟು ಯಾರಿಗೂ ತಗಲಲಿಲ್ಲ. ಆದ್ದರಿಂದ ಯಾರೂ ಸಾಯಲಿಲ್ಲ. ದಿಕ್ಕುಗಳೂ ಆಕಾಶವೂ ನಮ್ಮ ಮೇಲೆ ಮುನಿದಂತೆ ತೋರಿತು. ಕಣ್ಣಿಗೆ ಕಾಣದ ಕೈಗಳಿಂದ ಬರುವ ಪೆಟ್ಟನ್ನು ತಪ್ಪಿಸಿಕೊಳ್ಳುವದು ಹೇಗೆ? ನಮ್ಮ ಮಂದಿಯೆಲ್ಲಾ ಛಿನ್ನಭಿನ್ನವಾಗಿ ಹೋಯಿತು. ಕೊನೆಗೆ ನಮಗೆ ಬಂದ ದುರ್ದಶೆ ಯನ್ನು ಏನೆಂದು ಹೇಳಲಿ! ಭೀಮರಾಜರ ಕಾಲಿಗೆ ಒಂದು ಅಂಬು ತಗಲಿತು. ಅವರ ಕುದುರೆಯು ಏಟು ಬಿದ್ದು ಸತ್ತು ಹೋಯಿತು. ಅಡಿಕೇ ಕಡಿಯುವಷ್ಟು ಹೊತ್ತಿನಲ್ಲಿಯೇ ಅವರ ಪಕ್ಕೆಗೆ ಒಂದು ಬಾಣ ತಗಲಿತು. ನಾನೂ ಅವರೂ ಮುಂದೆ ಓಡುವದಕ್ಕೆ ಮೊದಲು ಮಾಡಿ ದೆವು. ಆದರೆ ಅವರಿಗೆ ರಕ್ತ ಬಹಳವಾಗಿ ಸುರಿದು ಹೋಗಿತ್ತು. ನಿತ್ರಾಣವಾಗಿ ಅವರು ನೆಲಕ್ಕೆ ಬಿದ್ದುಬಿಟ್ಟರು.

ಆ ಸಮಯದಲ್ಲಿ ಅಲ್ಲಿನ ಕಾಡುಜನರಲ್ಲಿ ಒಬ್ಬಿಬ್ಬರು ಮರದ ಪೊಟ್ಟರೆಗಳಿಂದಲೂ ಹೊದರುಗಳಿಂದಲೂ ತಲೆಯನ್ನು ಈಚೆಗೆ ಹಾಕಿ ದರು. ಅವರ ಮುಖವನ್ನು ಕಂಡ ಕೂಡಲೆ ನನಗೆ ಅತ್ಯಾಗ್ರಹವುಂ ಟಾಯಿತು. ಕೈಲಿದ್ದ ಕತ್ತಿಯನ್ನು ಝಳಪಿಸುತ್ತಾ ಹೊರಟೆ. ಆ ಹೇಡಿಗಳು ಓಡುವದಕ್ಕೆ ಆರಂಭಿಸಿದರು. ನಾನು ಅವರ ಬೆನ್ನಹತ್ತಿ ೪-೫ ಜನರನ್ನು ತುಕ್ಕಡತುಕ್ಕಡ ಮಾಡಿದೆ. ಕೂಡಲೆ ಅಲ್ಲಿದ್ದ ಒಂದೊಂದು ಹೊದರಿನಿಂದಲೂ ಹತ್ತು ಹತ್ತು ಕತ್ತೆ ಕಿರಿಚಿದ ಹಾಗೆ

ಕಿರಚಲು, ಹೊರಟಿತು. ಪ್ರತಿಧ್ವನಿಯಿಂದ ಸದ್ದು ಇನ್ನೂ ಅತಿ ಭಯಂಕರವಾಗಿ ತೋರಿತು. ಅಲ್ಲಿ ಅವಿತುಕೊಂಡಿದ್ದ ಆ ಕಾಡುಜನ ರೆಲ್ಲಾ ನನ್ನ ಒಬ್ಬನಿಗೆ ಹೆದರಿ ನನ್ನ ಕೈಗೆ ಸಿಕ್ಕದ ಹಾಗೆ ಓಡಿ ಹೋದರು. ಈ ನೀಚರಿಂದಲೇ ಇಷ್ಟೊಂದು ನಷ್ಟಕ್ಕೆ ಕಾರಣವಾಯಿ ತೆಂದು ತಿಳಿದುಕೊಂಡೆ. ಬಂದ ಭಾಗ್ಯವೇನು? ನಾನು ಎಷ್ಟು ಕಾದಿ ಜಯವನ್ನು ಹೊಂದಿದರೂ ನೋಡಿ ಸಂತೋಷಪಡುವ ಕಣ್ಣು ಮುಚ್ಚಿ ಹೋಗುತಾ ಇತ್ತು. ಭೀಮರಾಜರ ಪ್ರಾಣವೆಲ್ಲಾ ಉಡುಗಿ ಹೋಯಿತು. ಪ್ರಾಣವು ಅರೆಗಳಿಗೆಯಲ್ಲಿ ಹೋಗುವದಾಗಿತ್ತು. ನಾನು ಅವರ ಸಮೀಪಕ್ಕೆ ಹೋಗಿ ಕೂತುಕೊಂಡೆ. ಅವರ ಸ್ಥಿತಿಯನ್ನು ನೋಡಿ ನನಗೆ ಬಹು ದುಃಖ ಬಂತು. ಅಂಥಾ ವೀರರಾದ ಗುಣಾಢ್ಯರಾದ ಪುರುಷರು ಲೋಕದಲ್ಲಿ ಸಿಕ್ಕುವದು ಕಷ್ಟ. ಅವರು ನನ್ನ ಮುಖವನ್ನು ನೋಡಿ—ಅಯ್ಯಾ, ಅಳಬೇಡ; ನನ್ನ ಗತಿ ನನಗಾಯಿತು. ನೀನು ತಲೆತಪ್ಪಿಸಿ ಕೊಂಡು ಊರಿಗೆ ನಡೆ. ನಿಮ್ಮ ತಂದೆ ಹುಲಿನಾಯಕನ ಮುಪ್ಪಿನ ಕಾಲದಲ್ಲಿ ಪಿತೃಸೇವೆಯನ್ನು ಮಾಡಿಕೊಂಡಿದ್ದು ಅವನನ್ನು ಒಪ್ಪ ಮಾಡು. ಹುಲಿನಾಯಕ ಬಹು ಸತ್ಯವಂತ. ಅವನಿಂದ ಒಂದಾ ನೊಂದು ಕಾಲದಲ್ಲಿ ನನ್ನ ಪ್ರಾಣ ಉಳಿಯಿತು. ಪುನಃ ನನ್ನ ಕೊನೆ ಗಾಲಕ್ಕೆ ನೀನು ಆದೆ. ತಂದೆಮಕ್ಕಳಾದ ನಿಮ್ಮ ಉಪಕಾರವನ್ನು ಹೇಗೆ ಮರೆಯಲಿ? ಶಿವ ಶಿವಾ!—ಹೀಗೆನ್ನುತಾ ಇರುವಾಗ ಪ್ರಾಣ ಹೋಯಿತು.

ಶತ್ರುಗಳ ಭಯದಿಂದ ಆತನ ಶರೀರಕ್ಕೆ ಮತ್ತೆ ಯಾವ ವಿಧ ವಾದ ಸಾರ್ಥಕ್ಯವನ್ನೂ ಮಾಡುವದಕ್ಕಾಗದೆ ಅಲ್ಲಿಯೇ ಆತನಿಗೆ ಕಲ್ಲು ಮಲ್ಲಯ್ಯನನ್ನು ಮಾಡಿ ಮುಂದಕ್ಕೆ ಹೊರಟೆ.

(ಈ ಮಾತನ್ನು ಹೇಳುವಾಗ ಆ ಗಟ್ಟದ ಕೆಳಗಿನವನ ಕಣ್ಣಿನಲ್ಲಿ ನೀರು ಬಂತು. ಆಗಲೇ ಲಲಿತೆಯ ಕಣ್ಣಿನಲ್ಲಿಯೂ ಗುಳಗುಳನೆ ಕಂಬನಿಗಳು ಹೊರಟವು. ಬಿಕ್ಕಳಿಸಿಕೊಂಡು ಆಕೆ ಅಳುವಳೋ, ಎನ್ನುವ ಹಾಗೆ ತೋರಿತು. ಆದರೆ ಅಷ್ಟರಲ್ಲಿಯೇ ತನ್ನ ಸೆರಗಿನಿಂದ ಕಣ್ಣನ್ನು ಒರೆಸಿಕೊಂಡು ದುಃಖವನ್ನು ತಡೆದುಕೊಂಡಳು).

ಗಟ್ಟದ ಕೆಳಗಿನವನು— ಆಗ ನನಗೆ ಬಿದ್ದಿದ್ದ ಪೆಟ್ಟಿನ ಯಾತನೆ ಸ್ವಲ್ಪ ತೋರಿತು. ಯಾವುದೋ ಒಂದು ಬಗೆಯ ಕಾಡುಸೊಪ್ಪನ್ನು ತರೆದು ಕಲ್ಲಮೇಲೆ ಅರೆದು ಅದನ್ನು ನನ್ನ ಗಾಯಕ್ಕೆ ಮೆತ್ತಿದೆ.— ಅಲ್ಲಿದ್ದ ಕಾಡುಗೆಡ್ಡೆಯನ್ನೂ ಹಣ್ಣುಗಳನ್ನೂ ಕಿತ್ತು ತಿಂದೆ. ಕತ್ತಲೆ ಯಾಯಿತು. ಅತ್ಯಂತ ಆಯಾಸದಿಂದಲೂ ಬಹು ದಿನಗಳಿಂದ ನಿದ್ರೆ ಇಲ್ಲದ್ದರಿಂದಲೂ ಒಂದು ಮರದ ಕೆಳಗೆ ಮಲಗಿಕೊಂಡೆ. ಎಚ್ಚರವೇ ಇಲ್ಲದೆ ನಿದ್ರೆ ಬಂತು. ಬೆಳಗ್ಗೆ ಎದ್ದು ನೋಡುವಲ್ಲಿ ಗಾಯದ ಯಾತನೆ ಸ್ವಲ್ಪ ಕಡಮೆಯಾಗಿತ್ತು. ಹೀಗೆಯೇ ಕಾಡಿನಲ್ಲಿ ಹೋಗುತಿರುವಾಗ ಒಂದು ನದಿ ಕಾಣಿಸಿತು. ಅದರ ತೀರದಲ್ಲಿ ಕಾಡುಜನರ ಗುಡಿಸಲಿನ ಗುಂಪು ಕಾಣಿಸಿತು. ಅದನ್ನು ಕಂಡಕೂಡಲೆ ನನಗೆ ಭಯವುಂಟಾ ಯಿತು. ಶತ್ರುಗಳ ದೆಸೆಯಿಂದ ಭಯ ಪಟ್ಟು ಪಟ್ಟು, ಅವರ ಪೆಟ್ಟನ್ನು ಸಹಿಸಿ ಸಹಿಸಿ, ಸಾಕಾಗಿ, ಕಳೆದ ಮೂರು ದಿವಸದಿಂದ ಸ್ವಲ್ಪ ಭೀತಿ ತಪ್ಪಿತ್ತು. ಈಗ ಪುನಃ ಇವರ ಗುಂಪಿಗೆ ಹೋಗಿ ಅವರಿಗೆ ಪ್ರಾಣ ವನ್ನು ಒಪ್ಪಿಸಲೆ? ಅಥವಾ ಕಾಡಬಿದ್ದು ಹಿಂದಕ್ಕೆ ಹೊರಟು ಹೋಗಲೆ? ಈ ಯೋಚನೆ ಬಹಳವಾಗಿ ಮನಸಿಗೆ ಹತ್ತಿತು. ಆದರೆ ಏಕಾಕಿ ಯಾಗಿದ್ದು ಕಾಡಿನಲ್ಲಿ ಮೃಗಾದಿಗಳ ಭಯದಿಂದಲೂ ಆಹಾರಾದಿಗಳು ಇಲ್ಲದೆ ಉಂಟಾದ ಕಷ್ಟದಿಂದಲೂ ಪೇಚಾಡಿ ಸಾಕಾಗಿದ್ದ ಕಾರಣ, ಈ ಕಾಡುಜನಗಳ ಕೈಲಿ ನನ್ನ ಪ್ರಾಣ ಹೋದರೂ ಹೋಗಲಿ, ಜನರ ಗೋಷ್ಠಿಯಲ್ಲಿ ಇರಲೇ ಬೇಕೆಂಬ ಆಶೆಯು ಹುಟ್ಟಿತು. ಆದ್ದರಿಂದ ಆ ಗುಡಿಸಲುಗಳಿದ್ದ ಸ್ಥಳಕ್ಕೆ ಹೋಗಿ ಒಂದು ಗುಡಿಸಲಿನೊಳಕ್ಕೆ ನುಗ್ಗಿ ದೆನು. ಒಳಗಿನಿಂದ ಒಬ್ಬ ಮುದುಕನು ಈಚೆಗೆ ಬಂದು ನನ್ನನ್ನು ಕಂಡು ಒಳಕ್ಕೆ ಕರೆದುಕೊಂಡು ಹೋಗಿ ಕೂರಿಸಿಕೊಂಡು ಅವರ ಮಾತಿ ನಲ್ಲಿ ನನ್ನ ಪೂರ್ವೋತ್ತರವನ್ನು ವಿಚಾರಿಸಿದನು. ನನಗೆ ಆ ಭಾಷೆ ಸ್ವಲ್ಪ ಗೊತ್ತಿದ್ದಕಾರಣ, ಅಲ್ಲಿಯೊಂದು ಇಲ್ಲಿಯೊಂದು ಮಾತನಾಡಿ ಆ ಮುದುಕ ಕೇಳಿದ ಪ್ರಶ್ನೆಗಳಿಗೆ ಉತ್ತರವನ್ನು ಕೊಟ್ಟೆನು. ತರುವಾಯ ಇದ್ದದನ್ನು ನನಗೆ ಇಕ್ಕಿ ತಾವು ಉಪವಾಸವಾಗಿರುತಾ, ಸಾಯಂಕಾಲದ ಹೊತ್ತಿಗೆ ಕಾಡು ಮೃಗಗಳನ್ನೂ ಹಕ್ಕಿಗಳನ್ನೂ ಹೊಡೆದುಕೊಂಡು

ಬಂದು ತಾವು ತಿನ್ನುತಿದ್ದರು. ತಮ್ಮ ಪಾಡು ಹೀಗೆ ಅಹನ್ಯಹನಿ ಕಾಲಕ್ಷೇಪವಾಗಿದ್ದಾಗ್ಗೂ ಅತಿಥಿಯಾದ ನನ್ನ ಉಪಚಾರದಲ್ಲಿ ಸ್ವಲ್ಪವೂ ಕೊರತೆ ಮಾಡುತಿರಲಿಲ್ಲ.

ಅವರಿಗೆ ಉಪಪತ್ತಿಯ ವಿಷಯದಲ್ಲಿ ಬಡತನವೇ ಹೊರತು, ಒಳ್ಳೇತನದಲ್ಲಿ ಬಡತನವಿಲ್ಲ. ಸಿಕ್ಕಿದ ಕಾಡು ಮೃಗಗಳನ್ನೆಲ್ಲಾ ಹೊಡೆದು ತಿನ್ನುವದು ಶುದ್ಧವಾದ ಒಳ್ಳೇತನವೆಂದು ನಾನು ಹೇಳಿ ಬರಲಿಲ್ಲ. ಯುದ್ಧದಲ್ಲಿ ಹೇಗೆ ಹಿಂಸೆಯೂ ಪ್ರಾಣಿವಧೆಯೂ ತುಂಬಿರುವದೋ ಹಾಗೆಯೇ ಬೇಟೆಯಾಡುವದರಲ್ಲಿಯೂ ಇರುವದರಿಂದ, ಬೇಟೆಯೂ ಕಾಡುಮೃಗಗಳ ಮೇಲೆ ಮಾಡುವ ಯುದ್ಧವೆಂತಲೇ ಹೇಳಬೇಕು. ಇದರಿಂದ ಪಾಪಸಂಘಟನೆಗೇನೂ ಸಂದೇಹವಿಲ್ಲ. ಆದರೆ ಬಡತನವೂ ಅಜ್ಞಾನವೂ ಈ ದೋಷದ ವೇಗವನ್ನು ಸ್ವಲ್ಪ ಕಡಮೆ ಮಾಡುವುದು. ಧರ್ಮಸೂಕ್ಷ್ಮಗಳನ್ನು ತಿಳಿಯದೆ ಬಡತನದಿಂದ ಪೀಡಿತರಾಗಿದ್ದ ಆ ಜನಗಳು ಬೇಟೆಯಾಡುವದು ಕೆಟ್ಟದೆಂದು ತಿಳಿದಿರಲಿಲ್ಲ. ಅದನ್ನು ಬಿಟ್ಟರೆ ಅವರಿಗೆ ಗತಿಯೂ ಇರಲಿಲ್ಲ. ಆದಾಗ್ಗೂ ಅವರ ಯೋಗ್ಯತೆ ಇದ್ದಮಟ್ಟಿಗೆ ಅವರ ನಡತೆಯು ಬಹಳ ಸಮರ್ಪಕವಾಗಿತ್ತು.

ಈ ಜನಗಳಿಗೂ ಕೆಲವು ಶತ್ರುಗಳಿದ್ದರು. ಅವರಿಗೂ ಇವರಿಗೂ ಆಗಾಗ್ಗೆ ಜಗಳವಿದ್ದೇ ಇತ್ತು. ಈ ಜಗಳದಲ್ಲಿ ನಾನು ಈ ಜನರಿಗೆ ಮಾಡಿದ ಸಹಾಯದಿಂದ ಅವರಿಗೆ ಜಯವುಂಟಾಯಿತು. ಅವರ ಸಂಗಡ ಸೇರಿ ನಾನೂ ಅನೇಕ ಯುದ್ಧಗಳನ್ನು ಮಾಡಿದೆ. ಬಹು ಶ್ರಮಪಟ್ಟೆ. ಇದೆಲ್ಲಾದರಿಂದಲೂ ವಿವೇಕವೇನೋ ಸ್ವಲ್ಪ ಉಂಟಾಯಿತು. ಆದರೆ ಒಂದಕ್ಕೆ ಹತ್ತರಷ್ಟು ನಷ್ಟಪಟ್ಟೆ. ಆ ಜನರ ದಯಕ್ಕೆ ನಾನು ಪಾತ್ರನಾಗಿದ್ದೆನಾದಕಾರಣ, ನೆವನೆವದಲ್ಲಿ ನನಗೆ ಬೇಕಾದ ಇನಾಮುಗಳನ್ನು ಅವರು ಕೊಟ್ಟರು. ಆ ಸೀಮೆಯಲ್ಲಿ ಚಿನ್ನವೂ ಬೆಳ್ಳಿಯೂ ವಿಶೇಷವಾಗಿ ಸಿಕ್ಕುತಿದ್ದವು. ನಾವುಗಳು ಈ ಲೋಹಗಳಿಗೆ ಯಾವ ಬೆಲೆ ಇದೆ ಎಂದು ತಿಳಿದುಕೊಂಡಿದೇವೆಯೊ ಆ ಅರ್ಥದಲ್ಲಿ ಅವರು ತಿಳಿದಿರಲಿಲ್ಲ. ಇತರ ಲೋಹಗಳಂತೆಯೇ ಚಿನ್ನ ಬೆಳ್ಳಿಯೂ

ಒಂದೊಂದು ಲೋಹಗಳು, ಎಂದು ತಿಳಿದಿದ್ದರು. ಆದರೆ ಚಿನ್ನ ಬೆಳ್ಳಿ ಗಳನ್ನು ಕಂಡಾಗಲೆಲ್ಲಾ ಹೆಚ್ಚಾದ ಆಸ್ಥೆಯನ್ನೂ ಆಶೆಯನ್ನೂ ನಾನು ತೋರ್ಪಡಿಸಿದ್ದರಿಂದ, ನನ್ನನ್ನು ನೋಡುವದಕ್ಕೆ ಬಂದವರೆಲ್ಲಾ ಒಂದು ಚಿನ್ನದ ಮುರುಕನ್ನಾಗಲಿ ಬೆಳ್ಳೀ ಮುರುಕನ್ನಾಗಲಿ ನನಗೆ ಉಪಹಾರ ವಾಗಿ ತಂದು ಕೊಡುತಿದ್ದರು. ಇದೆಲ್ಲವನ್ನೂ ಕೂಡಿದಮಟ್ಟಿಗೂ ಸಂಪಾದಿಸಿಕೊಂಡು ನಾನು ಊರಿಗೆ ಬಂದು ಸೇರಿದೆ. ಹಣ್ಣುಹಣ್ಣು ಮುದುಕರಾಗಿದ್ದ ನಮ್ಮ ತಂದೆತಾಯಿಗಳಿಬ್ಬರೂ ಬದುಕಿದ್ದರು. ನನ್ನನ್ನು ಕಂಡಕೂಡಲೆ ಅವರಿಗೆ ವಿಪರೀತವಾಗಿ ಆನಂದ ಉಂಟಾ ಯಿತು. ಸ್ವಲ್ಪ ದಿವಸದ ಮೇಲೆ ಮದುವೆಯಾದೆ. ಭಾಗ್ಯಹೀನರಾದ ಈ ಮಕ್ಕಳು ಹುಟ್ಟಿದರು. ಸ್ವಲ್ಪ ಭೂಮಿಕಾಣಿಗಳನ್ನು ಮಾಡಿಕೊಂಡು ಆರಂಬವನ್ನು ಮಾಡುತಾ, ಇದ್ದದರಲ್ಲಿ ನೆಮ್ಮದಿ ಕುಳವೆನ್ನಿಸಿಕೊಂಡೆ. ಹೀಗೆ ಎರಡು ವರ್ಷ ಸುಖವಾಗಿದ್ದೆ. ದೊಡ್ಡರೋಗದಿಂದ ನನ್ನ ದನಗಳೆಲ್ಲಾ ಸತ್ತು ಹೋದವು. ನನ್ನ ಬದುಕೆಲ್ಲಾ ಹಾಳಾಯಿತು. ಸರ್ಕಾರದ ಕಂದಾಯಕಾಣಿಕೆಗಾಗಿ ನನ್ನ ಸ್ವತ್ತೆಲ್ಲಾ ಹೋಯಿತು. ಹೆಚ್ಚಿನ ಬಡತನ ಬಂತು. ವೃದ್ಧರಾದ ನಮ್ಮ ತಂದೆತಾಯಿಗಳು ಹೊಟ್ಟೆಗೆ ಗತಿ ಇಲ್ಲದೆ ಮೂರು ದಿನ ಉಪವಾಸವಾಗಿ ನರಳಿ ಪ್ರಾಣ ಬಿಟ್ಟರು. ಈ ಕಷ್ಟದಿಂದಲೇ ನನ್ನ ಹೆಂಡತಿಯೂ ಸತ್ತಳು. ಇಂದಿಗೆ ನಾಲ್ಕು ದಿನವಾಯಿತು. ನಾನು ಮಾಡಿದ ಪಾಪ ಹರಿಯಲಿಲ್ಲ. ಈ ತಬ್ಬಲಿ ಮಕ್ಕಳನ್ನು ಕಟ್ಟಿಕೊಂಡು ಈ ಹಾಳ ಜನ್ಮವನ್ನು ಕಳೆಯ ಬೇಕಾಗಿದೆ. ದೇಶಾಂತರಕ್ಕಾದರೂ ಹೋಗೋಣವೆಂದು ಮಕ್ಕಳನ್ನೂ ಕರೆದುಕೊಂಡು ಹೊರಟೆ.

---

## ೨೨ ನೆ ಅಧ್ಯಾಯ

ಈ ಕಥೆಯನ್ನು ಕೇಳಿ ಅಲ್ಲಿದ್ದವರ ಮನಸ್ಸೆಲ್ಲಾ ಕರಗಿತು. ಎಲ್ಲರ ಕಣ್ಣಿನಲ್ಲಿಯೂ ನೀರು ಬಂತು. ತಾವುಗಳು ಅವನಿಗೆ ಸಹಾಯ ಮಾಡುವದಾಗಿ ಅಲ್ಲಿದ್ದವರೆಲ್ಲರೂ ಧೈರ್ಯ ಹೇಳಿದರು. ಆಗ ಅಲ್ಲಿದ್ದ ಲಲಿತೆಯು ಇತರರಿಗಿಂತಲೂ ಅಧಿಕವಾದ ದುಃಖದಿಂದ ಪೀಡಿತಳಾ

ದಾಗ್ಗೂ, ಉಕ್ಕಿ ಉಕ್ಕಿ ಬರುವ ಕಣ್ಣೀರನ್ನು ಸೆರಗಿನಿಂದ ಒರಸಿ ಕೊಳ್ಳುತಾ, ವ್ಯಸನವನ್ನು ತಡೆದುಕೊಂಡು—ಏನೈ, ನಿನ್ನ ಹೆಸರು ಕಪನಿನಾಯಕನೆಂತಲೆ? ಎಂದು ಕೇಳಿದಳು. ಆ ಮಾತಿಗೆ ಆ ಗಟ್ಟದ ಕೆಳಗಿನವನು ಬೆರಗಾಗಿ—ಹವುದು ತಾಯೆ, ಎಂದನು. ಲಲಿತೆಯು—ಹಾಗಾದರೆ ನಿನಗೆ ಯಾರೂ ದಿಕ್ಕಿಲ್ಲವೆಂದು ತಿಳಿಯಬೇಡ, ಭೀಮರಾಜರಿಗೆ ಸಮಾನರಾದ ಮತ್ತೊಬ್ಬರು ಇದಾರೆ. ಅವರ ಪರಿಚಯ ನಿನಗೆ ಇಲ್ಲದಿದ್ದರೂ ಅವರು ನಿನಗೆ ಉಪಕಾರ ಮಾಡದೇ ಇರರು. ನೀನು ಹೇಳುವ ಭೀಮರಾಜರು ನಮ್ಮ ತಂದೆಗೆ ಅಣ್ಣ, ಆದ್ದರಿಂದ ನನಗೆ ದೊಡ್ಡಪ್ಪನಾಗಬೇಕು. ಸತ್ಯವಂತರಾದ ಭೀಮರಾಜರು ಹೋದ ಕ್ಕಾಗಿ ಈ ಸೀಮೆಗೆ ಸೀಮೆಯೇ ಅಳುತಿದೆ. ಅವರಿಗೆ ಸಂಭವಿಸಿದ ಅಕಾಲಮರಣವು ನಮ್ಮ ಮನೆಗೇ ಮೃತ್ಯುಬಡಿದ ಹಾಗಾಯಿತು, ಎಂದು ಆಗಾಗ್ಗೆ ಹಲುಬುತಿರುವದಲ್ಲದೆ ತಮ್ಮ ಚಿಕ್ಕಪ್ಪನವರು ತಮ್ಮ ಅಣ್ಣನಾದ ಭೀಮರಾಜರಿಂದ ಬಂದ ಕಾಗದಗಳನ್ನು ಕಣ್ಣೀರಸುರಿಸುತಾ ಒಮ್ಮಿಂದೊಮ್ಮೆ ಓದಿಯೋದಿ ಸಂಕಟಪಡುವರು. ಆ ಕಾಗದಗಳನ್ನು ನಾನು ಓದಿದೇನೆ. ಒಂದೊಂದರಲ್ಲಿಯೂ—ನನ್ನ ಸಂಗಡ ಬಂದಿರುವ ಕಪನಿನಾಯಕನೆಂಬ ಗಟ್ಟದ ಕೆಳಗಿನ ಹುಡುಗನು ಬಹಳ ನಂಬಿಕೆಯುಳ್ಳವನು. ಅವನಿಂದ ನಾನು ಬಹುವಾಗಿ ಉಪಕೃತಿಯನ್ನು ಹೊಂದಿದೇನೆ. ಅವನಿಗೆ ಯಾವ ಪ್ರತ್ಯುಪಕಾರವನ್ನು ಮಾಡಲಿ ಎನ್ನುವುದನ್ನೇ ಸದಾ ಯೋಚಿಸುತಿದೇನೆ. ಈ ಅರ್ಥಕ್ಕೆ ಬರೆದಿದೆ: ಹೀಗೆಂಬದಾಗಿ ಲಲಿತೆಯು ನುಡಿದಳು.

ಇದು ಕಿವಿಗೆ ಬಿದ್ದ ಕೂಡಲೆ ಗಟ್ಟದ ಕೆಳಗಿನವನು ಅತ್ಯಾನಂದದಿಂದ ತಟ್ಟನೆ ಎದ್ದು ವೈಮರೆತು, ಲಲಿತೆಯನ್ನು ಕಂಕುಳಿಗೆ ಎತ್ತಿಕೊಂಡು ಅವಳ ತಲೆಯನ್ನು ತಡವರಿಸುತಾ,—ಅಮ್ಮಾ, ಇಂದಿಗೆ ನಾನು ಧನ್ಯನಾದೆ; ನಿಮ್ಮ ದರುಶನವಾದ ಈ ದಿನವೇ ಸುದಿನ. ಆ ಪುಣ್ಯಾತ್ಮರಾದ ನನ್ನೊಡೆಯ ಭೀಮರಾಜರ ವಂಶದಲ್ಲಿ ಒಂದು ಕೊನೆಯನ್ನು ನೋಡಿದೆನಲ್ಲಾ! ಇದು ನನ್ನ ಭಾಗ್ಯವೇ ಸರಿ, ನನ್ನ ಬಡತನದಿಂದ ನಾನು ಈ ಕಡೆಗೆ ಬಂದು ತಮ್ಮ ಭೇಟಿಮಾಡಿದೆನಾದ್ದರಿಂದ

ನನ್ನ ಬಡತನವೂ ನನಗೆ ಎಷ್ಟೋ ಹಿತವಾಗಿದೆ, ಎಂದನು. ಆ ಕ್ಷಣದಲ್ಲಿಯೇ ತನ್ನ ನಡತೆಯನ್ನು ಕಂಡು, ಲಲಿತೆಯು ನಾಚಿಕೆ ಯಿಂದಲೂ ಗಾಬರಿಯಿಂದಲೂ ಪೀಡಿತಳಾಗಿದಾಳೆಂದು ಯೋಚಿಸುತಾ, ಆ ಕಪನಿನಾಯಕನು— ತಾಯಿ ಕೋಪಕೆಲಸವಿಲ್ಲ. ಮೇರೆದಪ್ಪಿ ನಡೆದ ನನ್ನ ನಡತೆಯನ್ನು ಕ್ಷಮಿಸಬೇಕು. ನನಗೆ ಎರಡನೇ ತಂದೆ ಎಂದು ನಾನು ಭಾವಿಸಿದ್ದ ನಮ್ಮ ಭೀಮರಸರ ವಂಶಕ್ಕೆ ಒಂದು ಕೊನೆ ಇದೆ ಯಲ್ಲಾ ಎಂಬ ಪರಮಾನಂದವು ಪ್ರಜ್ಞೆತಪ್ಪಿ ಮಾಡುವಂಥಾ ಕಾರ್ಯ ವನ್ನು ನನ್ನಿಂದ ಮಾಡಿಸಿತು. ಇದು ನನ್ನ ಅಪರಾಧ;—ಹೀಗೆಂದು ಕ್ಷಮಾಪಣೆಯನ್ನು ಬೇಡಿಕೊಂಡನು. ಜನರ ಸ್ವಭಾವವನ್ನರಿತ ಲಲಿತೆಯು ಆ ಕಪನಿನಾಯಕನು ದೋಷರಹಿತನೆಂದು ತಿಳಿದು ತನ್ನ ದೊಡ್ಡಪ್ಪನ ಸಂಗತಿಗಳನ್ನು ಸವಿಸ್ತಾರವಾಗಿ ಕೇಳಿ ತಿಳಿದುಕೊಳ್ಳುವ ದಕ್ಕೆ ಒಬ್ಬ ಸಿಕ್ಕಿದನಲ್ಲಾ ಎಂಬ ಸಂತೋಷದಿಂದ ಸುಮ್ಮನಾದಳು.

ಆಗ ಹೊತ್ತಾಯಿತು. ಅಲ್ಲಿದ್ದ ಜನರೆಲ್ಲರೂ ಎದ್ದು ಹೊರಟು ಹೋದರು. ಉದ್ದಕ್ಕೂ ಈ ಕಥೆಯನ್ನು ಗಮನವಿಟ್ಟು ಕೇಳುತಿದ್ದ ಮದನನು ರಾಮಜೋಯಿಸರ ಹಿಂದೆಯೇ ಹೊರಟು ಏನೋ ಒಂದು ವಿಶೇಷ ಸಂಗತಿಯನ್ನು ಮಾತನಾಡಬೇಕೆಂಬ ಇಷ್ಟ ತನಗಿವೆ ಎಂದು ತೋರ್ಪಡಿಸಿಕೊಂಡನು. ಆಗ ರಾಮಜೋಯಿಸನು ಇವನ ಮುಖ ರಸದ ಅಭಿಪ್ರಾಯವನ್ನು ತಿಳಿದು ಮದನನನ್ನು ಕುರಿತು ಅತ್ಯಂತ ಪ್ರೀತಿಯಿಂದ ಅವನ ತಲೆಯನ್ನು ತಡವರಿಸುತಾ—ಮತ್ತೇನೈ, ಏನ ಮಾತನಾಡಬೇಕೆಂದು ಬಂದೆ? ಎಂದನು.

ಮದನ—(ಕಣ್ಣಿನಲ್ಲಿ ನೀರನ್ನು ತಂದುಕೊಂಡು) ಉಪಾಧ್ಯಾ ಯರೆ, ಬಾಯಿಂದ ಹೇಳಲಾರೆ. ನಾನು ಬಹು ಕೆಟ್ಟ ಹುಡುಗನಾದೆ. ನಾನು ಕೃತಘ್ನ, ಪೂರ್ವದಲ್ಲಿ ತಮಗೆ ನನ್ನ ಮೇಲೆ ಇದ್ದ ಪ್ರೀತಿ ಈಗ ಇಲ್ಲವೆಂದು ತೋರುತ್ತೆ.

ಜೋಯಿಸ—ನಿನ್ನ ತಪ್ಪು ನಿನಗೆ ತಿಳಿದರೆ, ಬುದ್ಧಿವಂತನಾದ್ದಕ್ಕೆ ಅದು ಒಂದು ಗುರುತು. ನಿನ್ನ ಮನಸ್ಸಿನಲ್ಲಿ ಇರುವದೇನು, ಹೇಳು. ಯಾಕೆ ಪೇಚಾಡುತೀಯೆ?

ಮದನ—ನಾನು ತಮ್ಮ ಕೋಪಕ್ಕೆ ಪಾತ್ರನಾಗುವುದಕ್ಕೆ ಮಾಡ ತಕ್ಕಂಥಾ ಕೆಟ್ಟ ಕೆಲಸವನ್ನು ಮಾಡಿದೇನೆ. ತಾವು ನನ್ನ ಮೇಲೆ ಆಗ್ರಹವನ್ನು ತೋರಿಸುವುದಕ್ಕೆ ಬದಲಾಗಿ ಒಳ್ಳೇ ಮಾತನ್ನೇ ಆಡುತಾ ಇದೀರಲ್ಲಾ ; ಇದರಿಂದ ನನಗೆ ಇನ್ನೂ ಹೆಚ್ಚಾಗಿ ದುಃಖಬರುವುದು.

ಜೋಯಿಸ—ನೀನು ಏನಾದರೂ ಅಪರಾಧವನ್ನು ಮಾಡಿದ್ದರೆ, ಇನ್ನು ಮೇಲೆ ಅಂಥಾದ್ದನ್ನು ಮಾಡುವದಿಲ್ಲವೆಂದು ಮನಸ್ಸಿನಲ್ಲಿ ನಿಶ್ಚೈಸಿಕೊಳ್ಳುವನಾಗು. ಏನಾದರೂ ಒಂದು ತಪ್ಪನ್ನು ಯಾರಾದರೂ ಯಾವಾಗಲಾದರೂ ಮಾಡಲೇ ಮಾಡುತಾರೆ. ಅದನ್ನು ತಿಳಿದು ಅಂಥಾ ಕಾರ್ಯವನ್ನು ಉತ್ತರೋತ್ತರ ಮಾಡುವದಿಲ್ಲವೆಂಬದಾಗಿ ಖಂಡಿತಮಾಡಿಕೊಳ್ಳಬೇಕು.

ಮದನ—ಗುರುಗಳೆ, ತಾವು ನನಗೆ ಅಪ್ಪಣೆ ಕೊಡಿಸಿದ್ದು ಬುದ್ಧಿ ವಾದವೇ ಸರಿ. ನನ್ನ ಮನಸ್ಸಿನಲ್ಲಿ ಸೇರಿಕೊಂಡು ಒಳಗೆ ಚುಚ್ಚುತಾ ನನ್ನನ್ನು ತಳಮಳಗುಟ್ಟಿಸುತಿರುವ ಸಂಗತಿಯನ್ನು ತಮಗೆ ಅರಿಕೆ ಮಾಡುತೇನೆ. ತಾವು ನನ್ನನ್ನು ತಮ್ಮ ಮನೆಯಲ್ಲಿಟ್ಟುಕೊಂಡು ಪೋಷಣೆಮಾಡಿದಿರಿ, ವಿದ್ಯವನ್ನು ಕಲಿಸಿದಿರಿ, ಬುದ್ಧಿಯನ್ನು ಹೇಳಿದಿರಿ, ನನ್ನ ನಡತೆಯನ್ನು ತಿದ್ದಿದಿರಿ. ಇಷ್ಟಾದಾಗ್ಯೂ ತಮ್ಮ ದೃಷ್ಟಿ ಸ್ವಲ್ಪ ಮರೆಯಾದಕೂಡಲೆ ನನಗೆ ಇಲ್ಲದ ಕೆಟ್ಟತನವೆಲ್ಲಾ ಬಂತು.

ಜೋಯಿಸ— ನಿನ್ನ ವಿಷಯವಾಗಿ ಯಾಕೆ ಇಷ್ಟು ನೈಚ್ಯವನ್ನು ಹೇಳಿಕೊಳ್ಳುತೀಯೆ ? ಬುದ್ಧಿ ಕಡಮೆಯಾಗಿ ಸ್ವಲ್ಪ ಗರ್ವ ಉಂಟಾ ಗಿತ್ತೋ ಏನೋ, ಅದಕ್ಕಾಗಿ ಇಷ್ಟು ಪೇಚಾಟವೇಕೆ ? ಈ ದೋಷ ನಿನ್ನಲ್ಲಿ ಯಾವಾಗಲೂ ಇತ್ತೇ ಇತ್ತು.

ಮದನ—ನನ್ನಲ್ಲಿ ಅರೆಗರ್ವದ ದೋಷವೂ ಬುದ್ಧಿಲೋಪವೂ ಇರುವುದೇನೋ ನಿಜ. ಆದರೆ ಇದಕ್ಕಿಂತಲೂ ಹೆಚ್ಚಿನ ದೋಷ ನನ್ನಲ್ಲಿ ಹುಟ್ಟಿದೆ ; ಅದು ಯಾವುದೆಂದರೆ ಕೃತಘ್ನತೆ.

ಜೋಯಿಸ—ಇಂಥಾ ಅಪರಾಧ ನಿನ್ನಲ್ಲಿ ಹುಟ್ಟುವುದು ಸಾಧ್ಯವೆ? ಇದು ನಿಜವೆ ?

ಮದನ—ನಡೆದುದನ್ನೆಲ್ಲಾ ತಮ್ಮಲ್ಲಿ ಅರಿಕೇಮಾಡುತೇನೆ.

ತಾವೇ ಯೋಚಿಸಬೇಕು. ತಮ್ಮ ಮನೆಗೆ ನಾನು ಆರಂಭದಲ್ಲಿ ವಿದ್ಯಾಭ್ಯಾಸಕ್ಕಾಗಿ ಬಂದಾಗ, ನಾನು ದೊರೆಮಗನೆಂತಲೂ, ಯಲ್ಲರಿಗಿಂತಲೂ ದೊಡ್ಡವನೆಂತಲೂ ಉಳಿದವರೆಲ್ಲಾ ಅಲ್ಪರೆಂತಲೂ, ತಿಳಿದಿದ್ದೆ.

ಜೋಯಿಸ—ಈ ಎರಡು ಅವಿವೇಕಗಳೂ ಮೊದಲಿನಿಂದಲೂ ನಿನ್ನಲ್ಲಿ ಇದ್ದೇ ಇತ್ತು, ಇದು ನಿಜ.

ಮದನ—ತಮ್ಮಲ್ಲಿ ಯಾವ ಗುಣವಿಲ್ಲದಿದ್ದರೂ ತಾವು ಇತರರಿಗಿಂತಲೂ ದೊಡ್ಡವರೆಂದು ಜನರು ತಿಳಿದುಕೊಂಡಿರತಕ್ಕದ್ದು ಶುದ್ಧ ಅವಿವೇಕವೆಂದು ನೀವು ಹೇಳಿ ಬುದ್ಧೀ ಕಲಿಸಿದ್ದಿರಿ. ಅಲ್ಪರೆಂದು ನಾನು ತಿರಸ್ಕಾರ ಮಾಡುತಿದ್ದ ಜನರೆಲ್ಲರೂ ನನಗಿಂತಲೂ ಎಷ್ಟೋ ಉಪಯುಕ್ತವಾದ ಕೆಲಸಗಳನ್ನು ಮಾಡುತಿದ್ದರು. ನಾನೇ ದೊಡ್ಡವನೆಂದು ತಿಳಿದಿದ್ದ ನಾನು ನನ್ನ ಅವಿವೇಕವನ್ನು ತಿಳಿದು ನಾಚಿಕೊಂಡು ಇರುತಿದ್ದೆನಷ್ಟೆ. ಅರಮನೆಗೆ ಪ್ರಸ್ತಕ್ಕಾಗಿ ಬಂದಾಗಿನಿಂದ ಅಹಂಕಾರದಲ್ಲಿ ಮೆರೆಯುತಿದ್ದ ಅರಸುಮಕ್ಕಳುಗಳಲ್ಲಿಯೂ ಅರಸಿತ್ತಿಯವರಲ್ಲಿಯೂ ನಾನು ಓಡಿಯಾಡುತ್ತಲೇ ಇದ್ದೆ. ನಾನು ತಮ್ಮಿಂದ ಕಲಿತಿದ್ದ ವಿವೇಕವನ್ನೆಲ್ಲಾ ಮರೆತುಬಿಡುವಹಾಗೆ ಈ ಜನರು ಮಾಡಿಬಿಟ್ಟರು.

ಜೋಯಿಸ—ಅದನ್ನು ಹೇಗೆ ಹೇಳುವುದು? ಒಳ್ಳೇ ಕೆಲಸಗಳನ್ನು ಮಾಡುವುದೇ ಲೋಕದಲ್ಲಿ ಉತ್ತಮೋತ್ತಮವಾದ ಗುಣವೆಂದು ನಿನಗೆ ನಾನು ತಿಳಿಯದೇ ಹೇಳಿಕೊಟ್ಟೆನೋ ಏನೋ, ಆ ರಾಜಕುಮಾರರೂ ಅರಸಿತ್ತಿಯರೂ ನನಗಿಂತಲೂ ಬುದ್ಧಿವಂತರಾಗಿರಬಹುದು. ಅವರು ಒಳ್ಳೇ ಮಾತನ್ನೇ ಹೇಳಿಕೊಟ್ಟಿರಬಹುದು.

ಮದನ—ಗುರುಗಳೆ, ಹಾಗಲ್ಲ. ಅವರು ಬುದ್ಧಿವಂತರೂ ಅಲ್ಲ. ಒಳ್ಳೆಯವರೂ ಅಲ್ಲ. ಅವರಿಗೆ ಇದು ಯಾವುದೂ ಬಾರದು. ಆದರೆ ಬೇಕಾದ ಒಡವೆಯನ್ನಿಟ್ಟುಕೊಳ್ಳುವುದು, ಬೇಕಾದ ಬಟ್ಟೆಯ ಧರಿಸಿಕೊಳ್ಳುವುದು, ಹೆಂಗಸು ಗಂಡಸು ಎಂಬ ಭೇದವಿಲ್ಲದೆ ಕ್ಷೌರದಕತ್ತಿಯನ್ನು ಹಿಡಿದು ಮುಖಕ್ಷೌರವನ್ನು ಮಾಡಿಕೊಳ್ಳುವುದು, ಹುಬ್ಬನ್ನೂ ಪನ್ನೆಯನ್ನೂ ತಿದ್ದಿಕೊಳ್ಳುವುದು, ಕೆಲಸಕ್ಕೆ ಬಾರದ ಹರಟೆಯನ್ನು ಹರಟುವುದು, ಜೂಜು ಮೊದಲಾದ ದುಷ್ಕಾರ್ಯಗಳಲ್ಲಿ ಕಾಲವನು

ಕಳೆಯುವುದು, ಇವುಗಳನ್ನು ಮಾತ್ರ ಬಲ್ಲರು. ಆದರೆ ನಡೆನುಡಿಗಳಲ್ಲಿ ಮರ್ಯಾದೆಯಾಗಿರಬೇಕೆಂದುಮಾತ್ರ ಹೇಳಿಕೊಟ್ಟರು. ನಾನು ಅವರ ಮಾತನ್ನು ನಂಬಿದೆ.

ಜೋಯಿಸ—ಇದು ಒಳ್ಳೇ ಮಾತು. ಎಲ್ಲರೂ ಮರ್ಯಾದೆ ಯಾಗಿರಬೇಕು. ಇದನ್ನು ನಿನಗೆ ಅವರು ಹೇಳಿಕೊಟ್ಟದ್ದರಿಂದ ಉಪಕಾರಮಾಡಿದರೆಂದು ತಿಳಿ. ಇದು ಅಪಕಾರವಲ್ಲ.

ಮದನ—ಹಾಗೆ ಹೇಳಲಾಗದು. ಮರ್ಯಾದೆಯುಳ್ಳವನಾಗಿಯೂ ಇರಬೇಕೆಂದು ಅವರು ನನಗೆ ಹೇಳಿಕೊಟ್ಟದ್ದರೆ ಸರಿಯಾಗಿತ್ತು. ಇವರು ಹೇಳಿದ ಬುದ್ಧಿವಾದದಿಂದ ನನ್ನ ಪರಟುತನ ಹೆಚ್ಚಿತು.

ಜೋಯಿಸ—ಹಾಗಾದರೆ ತಮಗೆ ತಿಳಿಯದ ಅಂಶವನ್ನು ಈ ಅರಸುಮಕ್ಕಳೂ ಅರಸಿತ್ತಿಯರೂ ನಿನಗೆ ಹೇಳಿಕೊಟ್ಟಹಾಗಾಯಿತು.

ಮದನ—ಹಾಗೇಸರಿ. ನನ್ನ ಬುದ್ಧಿ ಮೋಸಹೋಯಿತು. ಅವರು ಆಡಿದ ಹಾಗೆಲ್ಲಾ ನಾನು ಆಡುವುದಕ್ಕೆ ಮೊದಲು ಮಾಡಿದೆ. ನಮ್ಮ ಸುಮತಿಯನ್ನು ಅವರು ನೋಡಿ ಹಾಸ್ಯಮಾಡಿದರು. ನಾನೂ ಅವರ ಜೊತೆಗೆ ಸೇರಿಕೊಂಡೆ. ಸುಮತಿಯು ಸಂಗವನ್ನು ಬಿಟ್ಟುಬಿಟ್ಟೆ.

ಜೋಯಿಸ-ಅಯ್ಯೋ ಪಾಪ! ಸುಮತಿ ಯೇನೋ ನಿನ್ನಲ್ಲಿ ವಿಶೇಷ ವಾಗಿ ಪ್ರೀತಿಯನ್ನು ಇಟ್ಟುಕೊಂಡಿದಾನೆ. ಆದರೂ ಚಿಂತೆಯಿಲ್ಲ. ಅವನಿಗೆ ಬೇರೆ ಕೆಲಸವಿದೆ. ನೀನು ಎಷ್ಟೇ ಬುದ್ಧಿಶಾಲಿಯಾಗಿದ್ದಾಗ್ಯೂ ನಿನ್ನ ಸಂಗಡ ಸೇರಿ ಹರಟೇ ಬಡಿದುಕೊಂಡು ಕೂತಿದ್ದರೆ ಅವನ ಹೊಟ್ಟೆ ಹೇಗೆ ತುಂಬಬೇಕು? ಅವನ ಆರಂಬದ ಕೆಲಸವನ್ನು ಅವನೇ ನೋಡಿ ಕೊಂಡು ಅರಸುಮಕ್ಕಳ ಸಹಾಯಕ್ಕೆ ನಿನ್ನನ್ನು ಬಿಟ್ಟುಬಿಡಬೇಕು. ಅವನ ಇಷ್ಟವೂ ಹಾಗೆಯೇ ಇದೆ. ನಿಮ್ಮ ಅಪ್ಪಾಜಿಯವರು ಬಲವಂತ ಮಾಡದಿದ್ದರೆ ಅವನು ನಿನ್ನ ಸಂಗಡ ಬರುತಿರಲಿಲ್ಲ. ನಿನಗೇನೋ ದೊರೆಮಕ್ಕಳ ಸಂಗ ಸಿಕ್ಕಿತು. ಇನ್ನು ಅವನಿಂದೇನು?

ಮದನ—ತಾವು ಹಾಗೆ ತಿಳಿಯಕೂಡದು. ಸುಮತಿಯು ನನ್ನ ಅಪರಾಧವನ್ನೆಲ್ಲಾ ಕ್ಷಮಿಸಿ, ಪೂರ್ವದಂತೆಯೇ ನನ್ನ ಸಂಗಡ ಸಲಿಗೆ ಯಾಗಿ ಮಾತನಾಡಿಕೊಂಡಿರುವತನಕ ನನ್ನ ಮನಸ್ಸು ಸಮಾಧಾನ

ವಾಗಿರಲಾರದು. ಇದಕ್ಕಾಗಿ ನಾನು ಏನಬೇಕಾದರೂ ಮಾಡುತೇನೆ.

ಜೋಯಿಸ—ಹಾಗಾದರೆ ದೊಡ್ಡ ಅರಸುಮಕ್ಕಳ ಸಂಗವೆಲ್ಲಾ ನಿನಗೆ ತಪ್ಪಿ ಹೋಗುವದಲ್ಲಾ.

ಮದನ—ಅದನ್ನೆಲ್ಲಾ ನಾನು ಲಕ್ಷ್ಯಮಾಡುವುದಿಲ್ಲ. (ಈ ರೀತಿಯಲ್ಲಿ ಮದನನು ಹೇಳಿ ತಾನು ಸುಮತಿಯನ್ನು ಹೊಡೆದದ್ದೇ ಮೊದಲಾಗಿ ಎಲ್ಲಾ ಸಂಗತಿಯನ್ನೂ ವಿಸ್ತಾರವಾಗಿ ಗುರುವಿಗೆ ಅರಿಕೆ ಮಾಡಿದನು.)

ಜೋಯಿಸ—ನಿನ್ನ ಅಪರಾಧವೇನೋ ಅಲ್ಪವಾದ್ದಲ್ಲ. ಈ ಅಭಿಪ್ರಾಯವನ್ನು ನಿನಗೆ ಹೇಳದೆ ನಾನು ಮರೆಮಾಚಲಾರೆ. ಆದರೂ ಸುಮತಿಯು ಬಹು ದಯಾಳುವಾದ್ದರಿಂದ ನಿನ್ನ ದುರ್ನಡತೆಯನ್ನು ಅವನು ಕ್ಷಮಿಸುವನೆಂಬ ಭಾಗದಲ್ಲಿ ನನಗೇನೂ ಸಂದೇಹ ತೋರುವುದೇ ಇಲ್ಲ.

ಮದನ—ಹಾಗಾದರೆ ಸುಮತಿಯನ್ನು ತಾವು ಇಲ್ಲಿಗೆ ಕರೆದು ತರುತೀರ?

ಜೋಯಿಸ—ಸುಮತಿ ಇಲ್ಲಿಗೆ ಯಾಕೆ ಬರಬೇಕು? ಅವನಿಗೆ ನೀನು ಅವಮಾನ ಮಾಡಲಿಲ್ಲವೆ? ಬೈಲಿಲ್ಲವೆ? ಕೊನೆಗೆ ಹೊಡೆಯಲೂ ಇಲ್ಲವೆ? ಇಷ್ಟೂ ಯಾತಕ್ಕೋಸ್ಕರ? ನಿನಗೆ ವಿವೇಕವಾದ ಮಾತನ್ನು ಹೇಳಿಕೊಟ್ಟು ನಿನಗೆ ಆಗುತಿದ್ದ ಅಪಾಯವನ್ನು ತಪ್ಪಿಸಬೇಕೆಂದು ಯತ್ನಮಾಡಿದ್ದಕ್ಕೋಸ್ಕರ. ಹೀಗಿರುವಾಗ್ಗೆ ಯಾರಾದರೂ ನಿನ್ನ ಸಮಿಾಪಕ್ಕೆ ಬಂದಾರೆಂದು ತಿಳಿದು ಇದ್ದೀಯ?

ಮದನ—ಹಾಗಾದರೆ ನಾನು ಏನಮಾಡಲಿ?

ಜೋಯಿಸ—ನಿನಗೆ ಮತ್ತೆ ಸುಮತಿಯ ಸಂಗ ಬೇಕಾದರೆ ಅವರ ಮನೆಗೆ ಹೋಗಿ ಅವನಿಗೆ ಉಪಚಾರವನ್ನು ಹೇಳಿ ಕ್ಷಮಾಪಣೆಯನ್ನು ಬೇಡಿಕೊಳ್ಳಬೇಕು.

ಮದನ—ಏನು, ಆ ಬಡ ಹಾರವರ ಮನೆಗೆ ಹೋಗಿ ಅವರ ಮನೇ ಜನದ ಎದುರಿಗೆಲ್ಲಾ ನನ್ನ ಸಂಗತಿಯನ್ನು ಹರಪೆಮಾಡಿಕೊಳ್ಳಲಿ?

ಜೋಯಿಸ—ಇದಕ್ಕಾಗಿ ನಾನು ಏನಬೇಕಾದರೂ ಮಾಡುತೇನೆ ಎಂದು ಈಗತಾನೆ ನೀನು ಎಂದೆಯಲ್ಲಾ? ಈಗ ನಿನ್ನ ಸ್ನೇಹಿತನ ಮನೆಗೆ ಹೋಗಿ ಅವನನ್ನು ನೋಡುವುದಕ್ಕೆ ನನ್ನ ಕೈಲಾಗದು ಎನ್ನು ತೀಯೆ. ಒಬ್ಬ ಮನುಷ್ಯ ಕೆಟ್ಟ ಕೆಲಸ ಮಾಡಿದಾಗ್ಗೂ ಅದು ಅವಮಾನ ವಲ್ಲವೊ? ಅದರಿಂದ ಹರಪೆಯಾಗಲಿಲ್ಲವೊ? ಅದನ್ನು ತಾನು ಮಾಡಿದೆ ನೆಂದು ಒಪ್ಪಿಕೊಂಡು ತಪ್ಪನ್ನು ಸರಿಮಾಡಿಕೊಂಡಮಾತ್ರಕ್ಕೆ ಅದು ಹರಪೆಯಾಯಿತೊ?

ಮದನ—ದೊರೆಮಗನಾದ ನನ್ನಂಥವನು ಆ ಬಡ ಹಾರವರ ಮನೆಗೆ ಹೋಗಿ ನನ್ನಿಂದ ತಪ್ಪಾಯಿತು, ಎಂದು ಆ ಹಾರವ ಹುಡು ಗನ ಮುಂದೆ ನಿಂತು ಒಪ್ಪಿಕೊಂಡರೆ, ಜನರು ಏನೆಂದಾರು?

ಜೋಯಿಸ—ಏನೆನ್ನುತಾರೆಯೆ? ನೀನು ಬುದ್ಧಿವಂತ, ಒಳ್ಳೆಯ ವನು, ಕೃತಜ್ಞ ಎನ್ನುತಾರೆ. ಯಾವುದು ಹೇಗಾದರೂ ಇರಲಿ; ನಿನ್ನ ಮನಸ್ಸು ಬಂದಹಾಗೆ ಮಾಡು; ನಾನು ಏನನ್ನೂ ಹೇಳುವುದಿಲ್ಲ. ಸುಮತಿ ನಿನಗೆ ಸಂಗಾತಿಯಾಗುವುದಕ್ಕೆ ಅಯೋಗ್ಯ ಎಂದು ಇನ್ನೂ ತಿಳಿದುಕೊಂಡಿದ್ದೀಯೆ. ಹಾಗೆಯೇ ಆಗಲಿ. ನಿನ್ನ ಹೊಸ ಸಂಗಾತಿ ಗಳಾದ ಅರಸುಮಕ್ಕಳ ಸ್ನೇಹವನ್ನೇ ಮಾಡಿಕೊಂಡಿರು.

ಮದನ—(ಅಳುತ್ತಾ) ತಾವು ನಿಂತುಕೊಳ್ಳದೆ ಹೊರಟು ಹೋಗು ತೀರಲ್ಲಾ!

ಜೋಯಿಸ—ನನಗೆ ತೋರಿದ ಮಾತನ್ನು ನಾನು ಹೇಳಿದೆ. ನನ್ನ ಮಾತನ್ನು ಕೇಳದೇ ಇದ್ದರೆ ನಿನ್ನ ಮನಸ್ಸು ಬಂದಹಾಗೆ ಮಾಡು. ನಾವು ಆಡುತಿದ್ದ ಮಾತು ಇಲ್ಲಿಗೆ ಮುಗಿಯಿತು. ಇನ್ನು ನಾನು ಹೊರಡುತೇನೆ.

ಮದನ—ತಾವು ಹೋಗಬೇಡಿ. ಸುಮತಿಗೆ ನಾನು ಹಾಗೆಲ್ಲಾ ಮಾಡಿದ್ದಕ್ಕಾಗಿ ನಮ್ಮ ಅಪ್ಪಾಜಿ ಮೊದಲೇ ಕೋಪವಾಗಿದಾರೆ. ತಾವೂ ನನ್ನ ಬಿಟ್ಟು ಹೊರಟು ಹೋದರೆ, ನನಗೆ ಇತ್ತ ಬಾ ಎನ್ನುವ ವರೇ ಇಲ್ಲದ ಹಾಗಾಗುವುದು.

ಜೋಯಿಸ--ಅದು ನಿನ್ನ ತಪ್ಪೇ. ಮಾಡಿದ ತಪ್ಪನ್ನು ಒಪ್ಪಿ

ಕೊಂಡು ಎಲ್ಲರಿಗೂ ಒಳ್ಳೆಯವನಾಗುವುದು ನಿನ್ನ ಕೈಲಿದೆ. ಹಾಗೆ ನೀನು ಮಾಡಿದರೆ, ನಿಮ್ಮ ಅಪ್ಪಾಜಿಯವರಿಗೆ ಸಂತೋಷವಾಗುವುದು, ಸುಮತಿಯು ನಿನ್ನ ಅಪರಾಧವನ್ನು ಕ್ಷಮಿಸಿ ಎಂದಿನಂತೆ ನಿನಗೆ ಸಂಗಾತಿಯಾಗಿರುವನು, ಪೂರ್ವದಲ್ಲಿ ನಾನು ತಿಳಿದಿದ್ದ ಹಾಗೆಯೇ ಈಗಲೂ ನೀನು ಸ್ವಲ್ಪ ಮಟ್ಟಿಗೆ ಗುಣಾಢ್ಯನೆಂದು ನಾನು ತಿಳಿಯುವೆನು.

ಮದನ—ನನ್ನ ದುರ್ಗುಣಗಳನ್ನೆಲ್ಲಾ ತಾವು ಕೇಳಿದಮೇಲೆಯೂ ನನ್ನ ವಿಷಯದಲ್ಲಿ ಒಳ್ಳೇ ಅಭಿಪ್ರಾಯವನ್ನು ತಾವು ಇಟ್ಟುಕೊಂಡಿರ ಬಹುದೆ ?

ಜೋಯಿಸ—ನಿನ್ನಲ್ಲಿ ಹೆಮ್ಮೆಯೂ ಅಜಾಗರೂಕತೆಯೂ ಇವೆ. ಆದರೆ ಸ್ವಲ್ಪ ಒಳ್ಳೇತನವೂ ಧಾರಾಳವಾದ ಮನಸ್ಸೂ ನಿನಗೆ ಉಂಟೆಂದು ತಿಳಿದಿದ್ದೆ. ಮೇಲೆ ಕಂಡ ದುರ್ಗುಣಗಳಿಂದ ನಿನ್ನ ದೋಷ ವನ್ನು ನಿನಗೆ ತೋರಿಸಿ ಮೇಲೆ ಕಂಡ ಸುಗುಣದ ದೆಸೆಯಿಂದ ನಿನ್ನ ತಪ್ಪನ್ನು ತಿದ್ದಬಹುದೆಂದು ತಿಳಿದಿದ್ದೆ. ಆದಕಾರಣ, ಸುಮತಿಯ ಸಂಗಡ ನೀನು ಜಗಳವಾಡಿದ್ದಕ್ಕಾಗಿ ಬಹಳವಾಗಿ ಪೇಚಾಡುತಿದ್ದ ನಿಮ್ಮಪ್ಪಾಜಿಯವರ ಸಂಗಡ ನಿನಗೆ ಅನುಕೂಲವಾಗಿಯೇ ಮಾತ ನಾಡಿದೆ. ಅಕಸ್ಮಾತ್ತಾಗಿ ಕೋಪಬಂದು ಜಗಳ ಹುಟ್ಟಿರಬಹುದೇ ಹೊರತು, ಸಂದರ್ಭಗಳನ್ನೆಲ್ಲಾ ನಿದಾನವಾಗಿ ಯೋಚಿಸಿದರೆ, ನನಗೆ ಬೇರೆ ಅಭಿಪ್ರಾಯ ಉಂಟಾಗುವುದೆಂತಲೂ; ನಿನ್ನ ದೋಷವು ನಿನಗೇ ತಿಳಿದು ನೀನು ಅದನ್ನು ಒಪ್ಪಿಕೊಳ್ಳುತಿದ್ದೆ ಎಂತಲೂ: ರಾಜರ ಸಂಗಡ ನಾನು ಹೇಳಿದೆ. ನಿನ್ನ ನಡತೆ ಹೀಗೆ ಇದೆ ಎಂದು ತಿಳಿದಿದ್ದರೆ, ನಿನ್ನ ಪರವಾಗಿ ನಾನು ಎಂದಿಗೂ ಮಾತನಾಡುತಿರಲಿಲ್ಲ. ನೀನು ಸುಮತಿಯ ಮೇಕೇಮರಿಯನ್ನು ಬಿಡಿಸಿಕೊಂಡು ಬಂದದ್ದೂ, ಗಟ್ಟದ ಕೆಳಗಿನವನ ಕಥೆಯನ್ನು ಕೇಳಿ ಪರಿತಾಪಪಟ್ಟದ್ದೂ; ಇವುಗಳನ್ನೆಲ್ಲಾ ನೋಡಿ ನಿನ್ನಲ್ಲಿ ಸುಗುಣವಿದೆ ಎಂಬದಾಗಿಯೂ, ಆದಕಾರಣ ನೀನು ದುರ್ಮಾರ್ಗವನ್ನೇ ಯಾವಾಗಲೂ ಹಿಡಿಯಲಾರೆ ಎಂಬದಾಗಿಯೂ, ಮಾಡಿದ ಅಪರಾಧವನ್ನು ಒಪ್ಪಿಕೊಳ್ಳುವ ಧಾರಾಳವಾದ ಮನಸ್ಸು, ನಿನ್ನಲ್ಲಿ ಉಂಟೆಂಬುದಾಗಿಯೂ ನಾನು ಹೇಳಿದೆ. ಇಂಥಾ ಸುಗುಣ

ಗಳಿರುವುದೇ ಉತ್ತಮಪುರುಷರ ಲಕ್ಷಣ, ಕೆಟ್ಟ ದಾರಿಯನ್ನು ಹಿಡಿದು ನೀಚರಾಗುವುದೇ ಅಧಮರ ಲಕ್ಷಣ.

ಮದನ—ಜೋಯಿಸರೆ, ತಾವು ಅಪ್ಪಣೆಕೊಡಿಸಿದ್ದು ನನ್ನ ಮನಸ್ಸಿಗೆ ಬಂತು. ನಾನು ಸುಮತಿಯ ಮನೆಗೆ ಹೋಗಿ ನನ್ನ ತಪ್ಪನ್ನು ಕ್ಷಮಿಸಬೇಕೆಂದು ಆತನನ್ನು ಬೇಡಿಕೊಳ್ಳುತೇನೆ, ತಾವೂ ನನ್ನ ಸಂಗಡ ದಯಮಾಡುತೀರ?

ಜೋಯಿಸ—ತಾಳು, ತಾಳು ನಿದಾನಿಸಿಕೊ. ನಾನು ಹೇಳಿದ ಬುದ್ಧಿಮಾತು ನಿನ್ನ ಮನಸ್ಸಿಗೆ ತಟ್ಟಿದ್ದು ಸಂತೋಷವೇ ಸರಿ. ಆದರೆ ನೀನು ಯಾವ ಕೆಲಸವನ್ನು ಮಾಡಬೇಕಾದರೂ ದುಡುಕು ಹೆಚ್ಚು. ತಾಳು, ಸುಮತಿಯ ಮನೆಗೆ ನೀನು ಹೊರಡುವುದಕ್ಕೆ ಮುಂಚೆ ನಿಮ್ಮ ಅಪ್ಪಾಜಿಯನ್ನೂ ಅಮ್ಮೈಯ್ಯನನ್ನೂ ಕೇಳಿ ಅವರ ಅಪ್ಪಣೆಯನ್ನು ಪಡೆಯಬೇಕು. ಈ ಮಧ್ಯೆ ಸುಮತಿಯ ತಂದೆಯಾದ ಸೂರ್ಯಭಟ್ಟನ ಮನೆಗೆ ಹೋಗಿ ಸುಮತಿಯ ಯೋಗಕ್ಷೇಮವನ್ನು ವಿಚಾರಿಸಿಕೊಂಡು ಬರುತೇನೆ.

ಮದನ—ಹಾಗೇ ಆಗಲಿ. ನಾನು ಸುಮತಿಯ ಕ್ಷೇಮಲಾಭವನ್ನು ವಿಚಾರಿಸಿದೆನೆಂದು ಅವನಿಗೆ ಹೇಳಿ, ಅವನನ್ನು ನೋಡುವ ತನಕ ನನಗೆ ಮನಸ್ಸು ಸಮಾಧಾನಕ್ಕೆ ಬರುವುದಿಲ್ಲ. ಗೂಳಿ ಹಾಯುತಿದ್ದಾಗ ಸುಮತಿಯು ಪ್ರಾಣವನ್ನು ಉಳಿಸಿದ ಮನುಷ್ಯನಿಗೂ ನಾನು ಏನಾದರೂ ಉಪಕಾರವನ್ನು ಮಾಡಬೇಕು.

ಈ ಮಾತನ್ನು ಕೇಳಿ ಸುಮತಿಯ ಒಳ್ಳೇತನಕ್ಕೆ ಸಂತೋಷಪಡುತಾ, ರಾಮಜೋಯಿಸನು ಹೋಗಿ, ಅನಂಗರಾಜನನ್ನು ಕಂಡು ನಡೆದ ಸಂಗತಿಯನ್ನೆಲ್ಲಾ ಹೇಳಿದನು. ಅನಂಗರಾಜನು ತನ್ನ ಮಗನಿಗೆ ವಿವೇಕವು ಉದಯಿಸುತ್ತಿರುವುದನ್ನು ಕೇಳಿ ಸಂತೋಷಪಟ್ಟನು. ಮತ್ತು ತನ್ನ ಮಗನು ಸುಮತಿಯ ಮನೆಗೆ ಹೋಗಿ ಅವನ ಕ್ಷಮೆಯನ್ನು ಬೇಡಿಕೊಂಡು ಎಂದಿನಂತೆ ಅವನ ಸ್ನೇಹವನ್ನು ಬೆಳೆಯಿಸಿದರೆ ಸಾಕೆಂದು ಕೋರಿದನು.

## ೨೩ನೆ ಅಧ್ಯಾಯ

ತರುವಾಯ, ಸೂರ್ಯಭಟ್ಟನು ತನ್ನ ತುಡಿಕೇಮನೆಯಲ್ಲಿ ಇದಾನೆಂದು ಕೇಳಿ, ರಾಮಜೋಯಿಸನು ಅಲ್ಲಿಗೆ ಕಾಲನಡಗೆಯಲ್ಲಿಯೇ ಹೊರಟನು. ಆ ಮನೆಯು ಒಂದು ಬೆಟ್ಟದ ಕಿಬ್ಬಿಯಲ್ಲಿತ್ತು. ಸಮೀಪದಲ್ಲಿಯೇ ಒಂದು ಚಿಕ್ಕನದಿ ಹರಿಯುತಿತ್ತು. ಜೋಯಿಸನು ಅಲ್ಲಿಗೆ ಹೋಗಿ ತಲಪಿದಾಗ, ಸೂರ್ಯಭಟ್ಟನು ತೋಟದಲ್ಲಿ ಅಗತೆ ಮೊದಲಾದ್ದನ್ನು ಮಾಡುತಿದ್ದನು. ತಂದೆಯು ಕೆಲಸಮಾಡುತ್ತಾ ಮಗನಿಗೆ ವೇದವನ್ನು ಸಂಥೆ ಹೇಳುತಾ ಕೆಲವು ಸೂಕ್ತಗಳನ್ನೂ ಸ್ತೋತ್ರಗಳನ್ನೂ ಹೇಳಿ ಕೊಡುತಾ ಇದ್ದನು. ಸುಮತಿಯು ರಾಮಜೋಯಿಸನನ್ನು ದೂರದಲ್ಲಿಯೇ ಕಂಡಕೂಡಲೆ ಬೇಗ ಆತನ ಸಮೀಪಕ್ಕೆ ಓಡಿಹೋಗಿ ಆತನಿಗೆ ನಮಸ್ಕಾರವನ್ನು ಮಾಡಿ ಅವರ ಕುಶಲವನ್ನು ವಿಚಾರಿಸಿದನು. ತರುವಾಯ

ಸುಮತಿ—ಗುರುಗಳೆ, ತಾವು ಬರುವ ದಾರಿಯನ್ನು ನೋಡಿದರೆ, ತಾವು ದೊರೆಯ ಅರಮನೆಯಿಂದ ಬರುವಹಾಗೆ ಕಾಣುತ್ತೆ.

ಜೋಯಿಸ—ಹವುದು. ಆದರೆ ನೀನೂ ಮದನನೂ ಪೂರ್ವದಂತೆ ಸ್ನೇಹಿತರಾಗಿಲ್ಲವೆಂದು ತೋರುತ್ತೆ.

ಸುಮತಿ—ನನಗೂ ಅದೇ ಚಿಂತೆಯಾಗಿದೆ. ಮದನನು ತನ್ನ ನಡತೆಯನ್ನು ಬದಲಾಯಿಸಿಕೊಂಡು ನನ್ನ ಸಂಗವನ್ನು ಬಿಡುವುದಕ್ಕೆ ಕಾರಣ ನನ್ನಿಂದ ಉಂಟಾಗಲಿಲ್ಲ. ಹೇಗಾದರೂ ಆಗಲಿ, ಅವನು ಕ್ಷೇಮವಾಗಿದ್ದರೆ ಸಾಕು. ಅದೇ ನನಗೆ ಬೇಕಾದ್ದು.

ಜೋಯಿಸ—ನೀನು ಅರಮನೆಯಲ್ಲಿಯೇ ಇದ್ದರೆ ಅವನ ಕ್ಷೇಮ ಗೊತ್ತಾಗುತ್ತಿತ್ತು. ಯಾರಿಗೂ ತಿಳಿಸದೆ ನಿನ್ನಲ್ಲಿ, ಎಷ್ಟೋ ಪ್ರೀತಿಯನ್ನಿಟ್ಟುಕೊಂಡಿರುವ ಧೊರೆಗೂ ಹೋಗಿಬರುತ್ತೇನೆಂದು ಹೇಳದೆ ನೀನು ಬಂದುಬಿಟ್ಟೆಯಲ್ಲ.

ಸುಮತಿ—ಅಪ್ಪಣೆಯಾದರೆ ನಡೆದ ಸಂಗತಿಯನ್ನು ನಡೆದ ಹಾಗೆಯೇ ಅರಿಕೆಮಾಡುತ್ತೇನೆ. ಮದನನಮೇಲೆ ದೋಷಾರೋಪಣೆ

ಮಾಡುವುದಕ್ಕೆ ಇಷ್ಟವಿಲ್ಲ. ಆದರೆ ನಿಶ್ಚಯವನ್ನು ಹೇಳಬೇಕು. ಅರಮನೆಗೆ ಹೋಗುವುದಕ್ಕೆ ನನಗೆ ಮೊದಲೇ ಇಷ್ಟವಿರಲಿಲ್ಲವೆಂಬ ಸಂಗತಿ ತಮಗೆ ಗೋಚರವೇ ಇತ್ತು. ಧೊರೆಮಕ್ಕಳೂ ರಾಣಿವಾಸ ದವರೂ ನನ್ನ ಬಟ್ಟೆಬರೆಯನ್ನೂ ನಡತೆಯನ್ನೂ ನೋಡಿ ಹಾಸ್ಯಮಾಡ ಬಹುದೆಂದು ನನಗೆ ಭಯವಿದ್ದೇ ಇತ್ತು. ಮದನ ನನ್ನ ಸಂಗಾತಿ ಯಾಗಿದ್ದಾಗ್ಗೂ ಅವನು ಅವರ ಮನೆಗೆ ಹೋದರೆ ನನ್ನಸಂಗ ಮಾಡಿದ್ದ ಕ್ಕಾಗಿ ನಾಚಿಕೊಳ್ಳುತ್ತಾನೆಂದು, ನಾನು ತಿಳಿದುಕೊಂಡೇ ಇದ್ದೆ.

ಜೋಯಿಸ—ಆಶ್ಚರ್ಯವೇನು? ಅವರು ದೊಡ್ಡವರು, ನೀವು ಬಡವರು.

ಸುಮತಿ—ದೊಡ್ಡವರು ಬಡವರನ್ನು ಕಂಡರೆ ಲಕ್ಷ್ಯವಿಲ್ಲದೆ, ಅವ ರಿಗೆ ಅವಮಾನಮಾಡುತ್ತಾರೆಂದು ನಾನು ಬಲ್ಲೆ. ಆದರೆ ಈ ಸಂದರ್ಭ ಬೇರೆ. ನಿನ್ನ ಜೊತೆಗೆ ನನ್ನನ್ನು ಸೇರಿಸಿಕೊ, ಎಂದು ಮದನನನ್ನು ನಾನು ಬೇಡಿಕೊಳ್ಳಲಿಲ್ಲ. ನಾವೇನೋ ಬಡವರು ಹವುದು. ತಾವು ನನ್ನನ್ನು ತಮ್ಮ ಮನೆಗೆ ಕರೆದುಕೊಂಡು ಹೋದಿರಿ. ಮದನನೂ ಅಲ್ಲಿಗೆ ಬಂದು ತಾನಾಗಿಯೇ ನನ್ನ ಸಂಗವನ್ನು ಬಯಸಿ ಬಯಸಿ ಮಾಡಿ ಕೊಂಡನು. ನಾನು ಅವನನ್ನು ಕಂಡರೆ ಮರ್ಯಾದೆಯಾಗಿಯೇ ಇದ್ದೆ.

ಜೋಯಿಸ—ನಿನ್ನ ಆಟಪಾಟಗಳಲ್ಲಿ ನೀನು ತಾಳ್ಮೆಯಿಂದಲೇ ಇದ್ದದ್ದು ನಿಜ.

ಸುಮತಿ—ಮದನನಲ್ಲಿ ನನಗೆ ಪ್ರೀತಿ ಇದ್ದಾಗ್ಗೂ ನಾನೇನೂ ಅವರ ಮನೆಗೆ ಬೇಕೆಂದು ಹೋದವನಲ್ಲ. ಬೇಕಾದ ಸಿಸ್ತನ್ನು ಮಾಡಿ ಕೊಂಡು ಮೆರೆಯುತ್ತಿದ್ದ ಆ ರಾಜಬಂಧುಗಳ ಮಂಡಲಿಯಲ್ಲಿ ನನ್ನಂಥಾ ಒರಟು ಹುಡುಗ ದೃಷ್ಟಿಪರಿಹಾರಕ್ಕಾಗಿ ಇರತಕ್ಕದ್ದೇ ಹೊರತು ಬೇರೆ ಇಲ್ಲ. ಎಲ್ಲರೂ ನನ್ನನ್ನು ನೋಡಿ ನಕ್ಕರು, ಹಾಸ್ಯಮಾಡಿದರು, ಆಟದ ಕೋಡಂಗಿಯನ್ನು ಕಂಡಹಾಗೆ ಗೇಲಿಮಾಡಿದರು. ಅವರು ಒಡವೆ, ಸಿಸ್ತು, ಜೂಜು, ಇಂಥಾ ಅಲ್ಪವಾದ ವಿಷಯದಲ್ಲಿ ಹರಟೆಯನ್ನು ಹರ ಟುತಿದ್ದರೇ ಅಲ್ಲದೆ, 'ನಾರಾಯಣ, ಕೃಷ್ಣ' ಎಂತಲಾಗಲಿ, ತಂದೆ ತಾಯಿಗಳು ಹೇಳಿದಹಾಗೆ ಕೇಳಬೇಕೆಂತಲಾಗಲಿ, ಬಡವರಿಗೆ ಉಪ

ಕಾರಮಾಡಿ ಅವರನ್ನು ಕಾಪಾಡಬೇಕು ಎಂತಲೇ ಆಗಲಿ ಅವರ ಬಾಯಿ ನೊಳಗಾಗಿ ಬರುತಿರಲಿಲ್ಲ.

ಜೋಯಿಸ—ನೀನು ಎಲ್ಲವನ್ನೂ ಸಹಿಸಿಕೊಂಡು ಸ್ವಲ್ಪ ಸುಮ್ಮ ನಿರಬೇಕಾಗಿತ್ತು. ನೀನು ಯಾಕೆ ಜಗಳಕ್ಕೆ ಹೋದೆ?

ಸುಮತಿ—ನನಗೇನೋ ಸ್ವಲ್ಪ ಕೋಪ ಬಂತು. ಕ್ಷಮಿಸಬೇಕು. ಒಬ್ಬ ಬುದ್ಧಿಶಾಲಿನಿಯಾದ ಹುಡುಗಿ ಆ ಮಂಡಲಿಯಲ್ಲಿದ್ದಳು. ಅವಳು ನನಗೆ ಒಳ್ಳೇಮಾತನಾಡಿ ಉಪಚಾರಮಾಡಿದ್ದಕ್ಕಾಗಿ ಅವಳನ್ನು ಎಲ್ಲರೂ ಲೇವಡಿಹತ್ತಿಸುವುದಕ್ಕೆ ಪ್ರಾರಂಭಿಸಿದರು. ನಾನು ಅವಳ ಪರ ವಾಗಿ ಎರಡು ಮಾತನ್ನಾಡಬೇಕಾಯಿತು. ಇತರರು ನಮ್ಮನ್ನು ಕೆಣ ಕಿದರೆ ಆತ್ಮಸಂರಕ್ಷಣೆ ಮಾಡಿಕೊಳ್ಳಬಹುದೆಂದು ತಾವೇ ಹೇಳಿಕೊಟ್ಟಿ ದ್ದೀರಷ್ಟೇ?

ಜೋಯಿಸ-ನಿನ್ನಿಂದ ಅಷ್ಟೊಂದು ತಪ್ಪಿತ ನಡೆಯಿತೆಂದು ನಾನು ಹೇಳಬರಲಿಲ್ಲ. ಅಂತು ನೀನು ಧೊರೆಯನ್ನು ಕಂಡು ಆತನ ಅಪ್ಪಣೆ ಯನ್ನು ತೆಗೆದುಕೊಂಡು ಬರಬೇಕಾಗಿತ್ತು.

ಸುಮತಿ—ನನಗೂ ಆ ಭಾಗದಲ್ಲಿ ಸ್ವಲ್ಪ ಚಿಂತೆಯಾಗಿಯೇ ಇದೆ. ಆದರೆ ಗೂಳಿಕಾಳಗಕ್ಕೆ ಹೋಗಬೇಡವೆಂದು ನಾನು ಹೇಳಿದಮಾತ್ರಕ್ಕೆ ಮದನನು ನನ್ನನ್ನು ಬೈದು ಹೊಡೆದದ್ದು ಸರಿಯಲ್ಲ. ಅವನ ಮೇಲೆ ನನಗಿದ್ದ ಪ್ರೀತಿಯಿಂದ ನಾನು ಅವನನ್ನು ಹಿಂತಿರುಗಿ ಹೊಡೆಯದೆ ಸುಮ್ಮನಾದೆ.

ಜೋಯಿಸ—ಧೊರೆಯೇನೋ ನಿನ್ನ ನಡತೆಯನ್ನು ಕೊಂಡಾಡಿ ದನು. ಅದು ಹಾಗಿರಲಿ. ಮದನನನ್ನು ಗೂಳಿ ಹಾಯುವುದಕ್ಕೆ ಬಂದಾಗ ನೀನು ಅವನ ಪ್ರಾಣವನ್ನು ಉಳಿಸಿದೆಯಂತಲ್ಲಾ?

ಸುಮತಿ—ಅಂಥಾ ಸಂದರ್ಭದಲ್ಲಿ ಇನ್ನು ಯಾರಿಗಾದರೂ ನಾನು ಹಾಗೆಯೇ ಮಾಡುತಿದ್ದೆ.

ಜೋಯಿಸ—ನೀನು ಗುಣವಂತ. ಆದರೆ ಮದನನ ಸಂಗ ವನ್ನು ಬಿಟ್ಟೇಬಿಡುತ್ತೀಯ?

ಸುಮತಿ—ಅವರು ದೊಡ್ಡವರು, ದೊಡ್ಡವರ ಸಂಗವೇ ಅವನಿ

ಗಿರಲಿ. ನಾವು ಬಡವರು, ನಮ್ಮಪಾಡಿಗೆ ನಾವು ಇರುತ್ತೇವೆ. ನಾನು ಅವನ ಸಂಗ ಬಿಟ್ಟವನಲ್ಲ, ಅವನಾಗಿಯೇ ನನ್ನನ್ನು ಬಿಟ್ಟುಬಿಟ್ಟ.

ಜೋಯಿಸ— ಅವನು ತನ್ನಿಂದ ತಪ್ಪಾಯಿತೆಂದು ಒಪ್ಪಿಕೊಂಡರೆ?

ಸುಮತಿ— ಹಾಗಾದರೆ ಏನಿದ್ದರೂ ನಾನು ಮರೆತುಬಿಡುತೇನೆ. ಮದನ ಸ್ವಲ್ಪ ಮುಂಗೋಪಿ. ಆದರೆ ಅವನ ಹೃದಯ ಒಳ್ಳೇದು. ತುಂಟಹುಡುಗರ ಸಹವಾಸದಿಂದ ಅವನು ಹಾಗೆ ಕೆಟ್ಟುಹೋದ.

ಜೋಯಿಸ— ಮದನನು ತನ್ನ ತಪ್ಪನ್ನೂ ಒಪ್ಪಿಕೊಳ್ಳುತ್ತಾನೆ. ನಿನ್ನನ್ನು ಕಾಣುವತನಕ ಅವನಿಗೆ ಮನಸ್ಸು ಸಮಾಧಾನವಿಲ್ಲ.

ಸುಮತಿ— ಅವನು ಇನ್ನು ಎಷ್ಟುಸಾರಿ ನನ್ನನ್ನು ಹೊಡೆದರೂ ಚಿಂತೆಇಲ್ಲ. ಮದನನನ್ನು ನೋಡುವುದಕ್ಕೆ ನಿಮ್ಮಸಂಗಡ ಬರಲಿ?

ಜೋಯಿಸ— ಅದೇನೂ ಅಗತ್ಯವಿಲ್ಲ. ತಪ್ಪು ಅವನದಾದ್ದರಿಂದ ಅವನೇ ಇಲ್ಲಿಗೆ ಬರುತಾನೆ, ಸುಮ್ಮನಿರು. ಇದು ಹಾಗಿರಲಿ. ನಿನ್ನ ಪ್ರಾಣವನ್ನು ಉಳಿಸಿದ ಹಬ್ಬಸಿಯವನು ಎಲ್ಲಿ? ಧೊರೆಯು ಅವನ ಸಂಗತಿಯನ್ನು ಕೇಳಿಕೊಂಡು ಬರಹೇಳಿದ.

ಸುಮತಿ— ಅವನು ನಮ್ಮ ಮನೆಯಲ್ಲಿಯೇ ಇದಾನೆ. ಇಲ್ಲಿಯೇ ಊಟಮಾಡಿಕೊಂಡು ನಮ್ಮ ಕೊಟ್ಟಿಗೆಯಲ್ಲಿ ಮಲಗಿಕೊಳ್ಳುತ್ತಾನೆ. ಬಹಳ ಒಳ್ಳೆಯವನು. ಯಾವ ಕೆಲಸವನ್ನಾದರೂ ಮಾಡುತಾನೆ. ಅವನಿಗೆ ಪಾಲುಮಾರಿಕೆ ಸ್ವಲ್ಪವೂ ಇಲ್ಲ.

ಈ ಪ್ರಕಾರ ಮಾತನಾಡಿಕೊಂಡು ಜೋಯಿಸನು ಧೊರೇಮನೆಯ ಕಡೆಗೆ ಹೊರಟನು.

ಅತ್ತ ಅರಮನೆಯಲ್ಲಿ, ಲಲಿತೆಯ ಚಿಕ್ಕಪ್ಪನು ಪ್ರಸ್ತಕ್ಕಾಗಿ ಬಂದಿದ್ದ ತನ್ನ ಹೆಣ್ಣುಮಗಳನ್ನೂ (ಲಲಿತೆಯನ್ನು) ಕರೆದುಕೊಂಡು ಹೋಗುವುದಕ್ಕಾಗಿ ಬಂದಿದ್ದನು. ಅಲ್ಲಿ ಗಟ್ಟದಕೆಳಗಿನವರ ಚರಿತ್ರೆಯನ್ನು ಕೇಳಿ ಆತನಿಗೂ ಬಹು ವ್ಯಸನಉಂಟಾಯಿತು. ಈ ಅರಸು ತಮ್ಮಂಣನಾದ ಭೀಮರಾಜನಿಂದ ಬಂದಿದ್ದ ಕಾಗದಗಳ ಒಕ್ಕಣೆಗಳನ್ನು ನೆನಿಸಿಕೊಂಡು ಸಂಕಟಪಡುತ್ತಾ, ದೀನನಾದ ಆ ಮನುಷ್ಯನಿಗೆ ಸಹಾಯಮಾಡಬೇಕೆಂದು ಅವನನ್ನು ಕುರಿತು— ಎಲೈ ಕಪನಿನಾಯಕ.

ನಮ್ಮ ಜಹಗೀರಿನಲ್ಲಿ ನಿನಗೆ ಭೂಮಿಯ ಕೊಡಿಸುತ್ತೇನೆ, ಅದನ್ನು ವ್ಯವಸಾಯ ಮಾಡಿಕೊಂಡು ಸುಖವಾಗಿರು, ಎಂದನು. ಆಗ ಅನಂಗ ರಾಜನು ಆ ಬಡವನಿಗೆ ಒಂದು ಮನೆಯನ್ನೂ, ಎರಡು ಜೋಡಿ ಎತ್ತನ್ನೂ, ಮತ್ತು ಬೇಕಾದ ಇತರ ಸಾಮಾನುಗಳನ್ನೂ ತೆಗೆದುಕೊಡು ವುದಾಗಿ ಹೇಳಿದನು. ಈ ಸಮಯಕ್ಕೆ ಸರಿಯಾಗಿ ಸೂರ್ಯಭಟ್ಟನ ಮನೆ ಯಿಂದ ಅರಮನೆಗೆ ಬಂದ ರಾಮಜೋಯಿಸನು—ತಾವುಗಳೆಲ್ಲಾ ದೊಡ್ಡವರು, ದೊಡ್ಡವನಿಗೆ ಸಹಾಯ ಮಾಡುತ್ತೀರಿ, ನಾನು ಬಡವ ನಾದ್ದರಿಂದ ಆ ಬಡ ಎಳೇ ಮಕ್ಕಳಿಗೆ ಹಾಲಾಗುವಂತೆ ಎರಡು ಹಸು ವನ್ನೂ ಐದು ಮೇಕೆಯನ್ನೂ ಕೊಡುತ್ತೇನೆ, ಎಂದು ನುಡಿದನು. ಈ ಪ್ರಕಾರ ಲಕ್ಷ್ಮೀ ಕಟಾಕ್ಷ ಒದಗಿದ್ದನ್ನು ಕಂಡು ಕಪನಿನಾಯಕನು ಆನಂದದಿಂದ ಎಲ್ಲರಿಗೂ ನಮಸ್ಕಾರವನ್ನು ಮಾಡಿದನು.

ಲಲಿತೆಯು ಅರ್ಧಾಂತಕವಾಗಿ ಓದಿ ನಿಲ್ಲಿಸಿದ್ದ ಹೊಲ್ಲಮಲ್ಲರ ಕಥೆಯು ಕೆಟ್ಟುಹೋಗಿದ್ದ ತನ್ನ ಮಗನ ಬುದ್ಧಿಯನ್ನು ಸರಿಮಾಡಿತಾದ ಕಾರಣ, ಅದನ್ನು ಮದನನು ಪೂರ್ತಿಯಾಗಿ ಕೇಳಲೆಂದು ಧೊರೆಯು ಯೋಚಿಸಿ, ಆದಿನ ರಾತ್ರೆ ಭೋಜನವಾಗಿ ಎಲ್ಲರೂ ಎಲೆ ಅಡಕೆಯನ್ನು ಹಾಕಿಕೊಳ್ಳುತ್ತಾ ಕೂತುಕೊಂಡಾಗ, ರಾಮಜೋಯಿಸನನ್ನೂ ಕರೆ ಯಿಸಿ ಕೂರಿಸಿಕೊಂಡು ಲಲಿತೆಯ ಕೈಲಿ ಆ ಕಥೆಯನ್ನು ಪೂರ್ತಿಯಾಗಿ ಓದಿಸಿದನು.

---

## ೨೪ನೆ ಅಧ್ಯಾಯ

ಹೊಲ್ಲಮಲ್ಲರಕಥೆ ಮುಂದಕ್ಕೆ ಸಾಗಿದ್ದು—

ಹೊಲ್ಲಮಲ್ಲರ ಕಥೆಯಲ್ಲಿ ಬರುವ ಚಾರುದತ್ತನ ಚರಿತ್ರೆಯನ್ನು ಲಲಿತೆಯು ಮುಂದಕ್ಕೆ ಓದಿ ಸಾಗಿಸಿದ್ದು ಏನೆಂದರೆ:—ಚಾರುದತ್ತ ಹೇಳುತ್ತಾನೆ.

ಅನೇಕ ತಿಂಗಳವರೆಗೂ ನಾನು ಅರಬ್ಬರದೇಶದಲ್ಲಿಯೇ ಇದ್ದೆ. ಡಂಭವಿಲ್ಲದೆ ಸಜ್ಜನರಾಗಿದ್ದ ಆ ಮಂದಿಯ ಸಹವಾಸದಲ್ಲಿಯೇ ನಾನು

ಇದ್ದರೆ ಆಗಿತ್ತು, ಹಾಗಾಗಿದ್ದರೆ, ನಮ್ಮ ದೇಶವೂ ನಮ್ಮ ಜನರೂ ಹಾಳಾದ ದುಃಖವನ್ನು ಈ ಪಾಪಿಕಣ್ಣಿನಲ್ಲಿ ನಾನು ನೋಡದೆ ಸೌಖ್ಯ ವಾಗಿರುತಿದ್ದೆ. ಆದರೆ ನಾನು ಪಡೆದು ತಂದದ್ದಕ್ಕೆ ಹೊಣೆಯಾರು? ಕೊನೆಗೆ ನಾನು ಆ ದೇಶವನ್ನು ಬಿಟ್ಟುಹೊರಟೆ. ಆ ಜನರೆಲ್ಲಾ ನನ್ನನ್ನು ಎಷ್ಟೋ ಆದರದಿಂದ ಕಂಡರು; ಅವರ ಸೀಮೆಯ ಉತ್ತಮ ವಾದ ತೇಜಿಯೊಂದನ್ನು ಇತರ ಉಪಹಾರಗಳ ಸಂಗಡ ನನಗೆ ಕೊಟ್ಟರು; ಬಹಳದೂರ ಬಂದು ನನಗೆ ದಾರಿತೋರಿಸಿ ಸಾಗಕಳುಹಿಸಿ ದರು. ನಾನು ನಮ್ಮ ಊರಿಗೆ ಬಂದುತಲಪಿದೆ. ನಿರ್ಮಾನುಷ್ಯವಾದ ಸ್ಥಳದಲ್ಲಿದ್ದುಕೊಂಡು ದೇವರಧ್ಯಾನದಲ್ಲಿ ನಿಂತ ಆಯುಸ್ಸನ್ನೆಲ್ಲಾ ಕಳೆಯ ಬೇಕೆಂದು ದೃಢಮಾಡಿಕೊಂಡೆ. ನಾನು ನೋಡಿದ್ದರಲ್ಲಿ ನನಗೆ ತೋರು ವುದೇನೆಂದರೆ, ಯಾವ ಮನುಷ್ಯನು ಯಾವ ತಂಟೆಗೂ ಹೋಗದೆ ಲೋಕದ ಚರ್ಯಗಳನ್ನೆಲ್ಲಾ ನೋಡುತ್ತಾ, ದೇವರಧ್ಯಾನದಲ್ಲಿ ಕಾಲವನ್ನು ಕಳೆಯುತ್ತಾನೆಯೋ ಅವನೇ ಧನ್ಯ. ಅನೇಕ ಧೊರೆಗಳು ಎಷ್ಟು ಐಶ್ವರ್ಯವಿದ್ದರೂ ಸಮಾಧಾನವಿಲ್ಲದೆ ತಮ್ಮ ಬಾಳಿಗಿಂತಲೂ ಒಬ್ಬ ಬಡ ಜೋಗಿಯ ಬಾಳು ಉತ್ತಮವಾದದ್ದು, ಎಂದು ವ್ಯಸನಪಡುತ್ತಿದ್ದದ್ದನ್ನು ನಾನು ನೋಡಿದೇನೆ. ಜನಬಾಹುಳ್ಯವಿದ್ದಷ್ಟೂ ಲೋಕದಲ್ಲಿ ಶ್ರಮವೂ ದುಃಖವೂ ಹೆಚ್ಚು. ಆದ್ದರಿಂದ ಒಂದು ನದೀತೀರದಲ್ಲಿ ನಿರ್ಮಾನುಷ್ಯ ಪ್ರದೇಶವನ್ನು ಹುಡುಕಿ ಅಲ್ಲಿ ಒಂದು ಗುಡಿಸಲನ್ನು ಕಟ್ಟಿಕೊಂಡು, ಸ್ವಲ್ಪ ತೋಟವನ್ನು ಮಾಡಿಕೊಂಡು ವಾಸವಾಗಿದ್ದೆ.

ಯೋಗ್ಯಳಾದ ಒಬ್ಬ ಹೆಂಗಸನ್ನು ಮದುವೆಯಾದೆ. ಏಳುವರುಷ ಆಕೆಯೊಡನೆ ಸಂಸಾರಮಾಡಿಕೊಂಡಿದ್ದೆ. ಈ ಹುಡುಗಿ ಹುಟ್ಟಿದಳು. ತರುವಾಯ ನನ್ನ ಹೆಂಡತಿ ಸತ್ತಳು. ನನ್ನ ಮಗಳನ್ನು ನೋಡಿ ಕೊಂಡು ಅವಳನ್ನು ಸಾಕುವುದರಲ್ಲಿ ಆ ದುಃಖವನ್ನು ಮರೆತೆ. ಇವಳು ಉಪಯುಕ್ತವಾದ ಮನೆಗೆಲಸಗಳನ್ನು ಮಾಡಿಕೊಂಡಿರುವುದರಲ್ಲಿಯೂ ಅಲ್ಪಸ್ವಲ್ಪಕಾಲ ಉಳಿದರೆ ಉತ್ತಮವಾದ ಗ್ರಂಥಗಳನ್ನು ಓದುವುದ ರಲ್ಲಿಯೂ ನಿರತಳಾಗಿದ್ದಳು. ಇಲ್ಲದ ಸಿಸ್ತನ್ನು ಮಾಡಿಕೊಳ್ಳುವದರ ಲ್ಲಿಯೂ, ಇಲ್ಲದ ಒಡವೆಯನ್ನು ಹೇರಿಕೊಳ್ಳುವುದರಲ್ಲಿಯೂ, ಜಡತ್ವ

ದಿಂದ ಕೂತಿರುವುದರಲ್ಲಿಯೂ, ಸಂಗೀತವನ್ನು ಹಾಡುವುದರಲ್ಲಿಯೂ, ಒಲಪನ್ನು ಬೀರಿ ಬಿನ್ನಣವನ್ನು ತೋರುವುದರಲ್ಲಿಯೂ, ಅವಳನ್ನು ತಯಾರುಮಾಡಲಿಲ್ಲ. ಹೆಂಗಸಿನಲ್ಲಿ ಇಂಥಾ ದುರ್ಗುಣಗಳಿದ್ದರೆ ಆ ಮನೆಯೇ ನಾಶವಾಗುವುದು. ಇಂಥಾ ಸ್ತ್ರೀಯರು ಎಷ್ಟು ಹೆಚ್ಚಿದರೆ ರಾಜ್ಯಕ್ಕೆ ಅಷ್ಟು ಕ್ಷೋಭೆಯುಂಟಾಗುವುದು. ಈ ಮಧ್ಯೆ ನಾನು ಗ್ರಂಥಕಾಲಕ್ಷೇಪವನ್ನು ಮಾಡುತ್ತಾ ಬ್ರಹ್ಮಸೃಷ್ಟಿಯಲ್ಲಿರುವ ಚರಾ ಚರವಸ್ತುಗಳನ್ನು ನೋಡಿ ಸಂತೋಷಪಡುತ್ತಾ ಇದ್ದೆನು. ಹೀಗಿರುವಲ್ಲಿ ಒಂದುದಿನ ಸಾಯಂಕಾಲ ಅಸ್ತಂಗತನಾಗುತ್ತಿರುವ ಸೂರ್ಯನ ಕಿರಣದದೆಸೆ ಯಿಂದ ವಿಚಿತ್ರವಾಗಿ ಕಾಣುತಿದ್ದ ಆಕಾಶವನ್ನು ನೋಡುತ್ತಾ ನಾನು ನನ್ನ ಪರ್ಣಶಾಲೆಯ ಬಾಗಿಲಲ್ಲಿ ಕೂತಿದ್ದೆ. ಎತ್ತರವಾಗಿ, ಗೌರವಶಾಲಿ ಯಾಗಿ, ಮುಖದಲ್ಲಿ ಸ್ವಲ್ಪ ಕ್ರೌರ್ಯವನ್ನುಳ್ಳ ಒಬ್ಬ ಪುರುಷಶ್ರೇಷ್ಠನು ಮಿತವಾದ ಪರಿವಾರದೊಡನೆ ನನ್ನ ಸಮೀಪವೃತ್ತಿಗೆ ಬಂದನು. ಕೂಡಲೆ ಪುಷ್ಪಗಳಿಂದಲೂ ಫಲಗಳಿಂದಲೂ ಭರಿತವಾಗಿ ನಗುತ್ತಿದ್ದ ನನ್ನ ತೋಟವನ್ನು ನೋಡಿ ಮೆಚ್ಚಿಗೆಯಿಂದ ತಲೆಯನ್ನು ತೂಗಿದನು. ಆಗ ನಾನು—ಸ್ವಾಮಿ, ಈ ತೋಟದಲ್ಲಿ ತಾವೂ ತಮ್ಮಕಡೆಯವರೂ ಸ್ವಲ್ಪ ವಿಶ್ರಮಿಸಿಕೊಂಡು ಅಲ್ಲಿನ ಫಲಗಳಿಂದ ತಮ್ಮ ಕ್ಷುತ್ತನ್ನು ಪರಿಹ ರಿಸಿಕೊಂಡು ದಯಮಾಡಬಹುದಲ್ಲ, ಎಂದು ಕೇಳಿಕೊಂಡೆ. ಆತನು ಹಾಗೆಯೇಮಾಡಿ ಕೊಂಚಹೊತ್ತು ಇದ್ದು ಹೊರಡುವ ಸಮಯದಲ್ಲಿ ನನ್ನನ್ನು ಕುರಿತು—ಅಯ್ಯಾ, ನಿನ್ನಿಂದ ನಾನು ಉಪಕೃತನಾದೆ; ನಿನಗೆ ಏನು ಬೇಕು? ಕೇಳಿಕೊ. ನನ್ನ ಪದವಿಗೂ ನಾನು ನಿನಗೆ ತೋರಿಸಬೇಕಾದ ಕೃತಜ್ಞತೆಗೂ ಏನ ಕೇಳಿದರೂ ಸ್ವಲ್ಪವೇ ಸರಿ, ಎಂದನು. ನಮ್ಮ ದೇಶವನ್ನು ಜೈಸಿಕೊಳ್ಳುತ್ತಾ ಎಲ್ಲೆಲ್ಲಿಯೂ ಹರಡಿ ಕೊಳ್ಳುತಿದ್ದ ಶಕರಿಗೆ ಆತನು ಅಧಿಪತಿಎಂದು ಅರಿತು, ನಾನು ಹೇಳಿ ದ್ದೇನೆಂದರೆ :—

ಚಾರುದತ್ತ—ಹಾಗೆ ತಮ್ಮ ಅಧಿಕಾರಕ್ಕೆ ಯಾವುದು ದೊಡ್ಡದಲ್ಲ ದಿದ್ದರೆ, ಯುದ್ಧಾದಿಗಳಿಲ್ಲದಂತೆ ಸಮಾಧಾನವನ್ನೂ, ನಮ್ಮ ದೇಶೀ ಯರು ಪರರಿಗೆ ಅಧೀನವಾಗಿರದಂತೆ ಸ್ವಾತಂತ್ರ್ಯವನ್ನೂ, ಕೊಟ್ಟು

ಕಾಪಾಡಬೇಕು.

ಶಕಾಧಿಪತಿ—ಯುದ್ಧಾದಿಗಳೆಲ್ಲಾ ನಿಂತು ಹೋಯಿತಾದ್ದರಿಂದ ಮೊದಲನೇದನ್ನೇನೋ ನಾನು ಕೊಟ್ಟೇ ಇದೇನೆ: ದೇಹಶ್ರಮಪಡದೆ ಜಡತ್ವದಲ್ಲಿಯೂ ನೀತಿಮಾರ್ಗವಿಲ್ಲದೆ ದುರ್ಮಾರ್ಗದಲ್ಲಿಯೂ ಪರಾಕ್ರಮವಿಲ್ಲದೆ ಹೇಡಿತನದಲ್ಲಿಯೂ ಇಳಿಯಮುಳುಗಿರುವ ನಿಮ್ಮ ದೇಶದ ಜನರಿಗೆ ಎರಡನೇದು (ಸ್ವಾತಂತ್ರ್ಯ) ದೊರೆಯುವುದು ಅಸಾಧ್ಯ. ನಮ್ಮ ಸೇನೆಯೊಡನೆ ನಾನು ನಮ್ಮ ದೇಶಕ್ಕೆ ಹೊರಟು ಹೋದಾಗ್ಯೂ ಮತ್ತೆ ಯಾರಾದರೂ ಬಂದು ನಿಮ್ಮ ದೇಶವನ್ನು ಜೈಸಲೇ ಜೈಸುತ್ತಾರೆ. ಈ ವಿಷಯವನ್ನು ಬಿಡು. ನಿನ್ನ ಮಟ್ಟಿಗೆ ನಿನಗೇನು ಬೇಕೋ ಕೇಳಿಕೊಳ್ಳುವನಾಗು.

ಚಾರುದತ್ತ—(ನಗುತ್ತಾ) ನನಗೆ ಬೇಕಾದ್ದೆಲ್ಲಾ ಇದ್ದೇ ಇದೆ. ಆದರೆ ನಾನು ಈ ತೋಟದಲ್ಲಿ ಹೊಸದಾಗಿ ಅಗತೆಮಾಡಿ ಗಿಡವನ್ನು ಹಾಕಿರುವ ಪ್ರದೇಶವನ್ನು ನಿನ್ನವರು ತುಳಿಯದಂತೆ ನೀನು ಆಜ್ಞೆ ಮಾಡಿದರೆ ಅದೇ ನಿನ್ನಿಂದ ನನಗೆ ಆಗಬೇಕಾದ ದೊಡ್ಡ ಉಪಕಾರ.

ಶಕಾಧಿಪತಿ—(ತನ್ನ ಪರಿವಾರದವರ ಕಡೆಗೆ ತಿರುಗಿ) ಅಃ! ಎಂಥಾ ಮಾತು! ಈತನ ಮನೋನಿಶ್ಚಯದಲ್ಲಿಯೂ ಆಶಾರಾಹಿತ್ಯದಲ್ಲಿಯೂ ದೇವಾಂಶವಿದೆ ಎಂದು ತಿಳಿಯಿರಿ. ಈತನು ಸಾಧಾರಣನಲ್ಲ, ನಾನು ಈ ಚಾರುದತ್ತನಾಗಿ ಹುಟ್ಟಿದ್ದರಾಗಿತ್ತು. (ತರುವಾಯ ಚಾರುದತ್ತನ ಕಡೆಗೆ ತಿರುಗಿ) ಅಯ್ಯಾ, ನಾಳೇ ಮಧ್ಯಾಹ್ನ ನೀನು ನನ್ನನ್ನು ಬಂದು ಕಾಣು.

ಹೀಗೆ ಹೇಳಿ ತನ್ನ ವೀರಭಟರು ಯಾರೂ ನನ್ನ ಗೋಜಿಗೆ ಬರಕೂಡದೆಂದು ಆಜ್ಞಾಪಿಸಿ, ಶಕಾಧಿಪನು ಹೊರಟು ಹೋದನು. ಅದೇ ಪ್ರಕಾರ ಆತನು ಹೇಳಿದ್ದ ಹೊತ್ತಿಗೆ ಸರಿಯಾಗಿ ನಾನು ಶಕಸೇನೆಯ ಪಾಳಯಕ್ಕೆ ಹೋದೆ. ಈ ಜನರು ಉತ್ತರ ಪ್ರಾಂತ್ಯದಿಂದ ಬಂದವರು, ಇವರ ದೇಶವು ಶುದ್ಧವಾಗಿ ಕಾಡುರಾಜ್ಯ. ಅಲ್ಲಿ ಹುಲ್ಲು ಹೊರತು ಮತ್ತೆಯೇನೂ ಬೆಳೆಯುವುದಿಲ್ಲ. ಇವರು ವ್ಯವಸಾಯ ಮಾಡುವುದನ್ನು ಅರಿಯರು. ದನ, ಕುದುರೆ, ಒಂಟೆ, ಇವುಗಳನ್ನು

ಕಾಯುವುದೆ, ಇವರ ಮುಖ್ಯವೃತ್ತಿ. ಈ ಜಂತುಗಳ ಹಾಲಿನಲ್ಲಿ ಆದ ಹುಳಿಮೊಸರು, ಬೇಟೆಯಾಡಿ ತಂದ ಕಾಡುಮೃಗಗಳ ಮಾಂಸ, ಇವುಗಳೇ ಇವರ ಆಹಾರ. ಎರಡು ಕಂಬವನ್ನು ನಿಲ್ಲಿಸಿ ಅದಕ್ಕೆ ಒಂದು ಅಡ್ಡಕಡ್ಡಿಯನ್ನು ಕಟ್ಟಿ ಅದರ ಮೇಲಿನಿಂದ ದಪ್ಪವಾದ ಬಟ್ಟೆಯನ್ನು ಎರಡು ಕಡೆಗೂ ಇಳಿಜಾರಾಗಿ ಕಟ್ಟುವರು. ಇದೇ ಇವರ ಮನೆ. ಕುದುರೇ ಸವಾರಿಯಲ್ಲಿ ಈ ಜನರು ಅರಬ್ಬರ ಹಾಗೇ ಬಹು ಸಮರ್ಥರು. ಲಗಾಮು ಇಲ್ಲದೆ ಒಂದು ಹಗ್ಗವೂ ಇಲ್ಲದೆ ಇವರು ಎಷ್ಟು ದೂರವಾದರೂ ಬೆತ್ತಲ ಕುದುರೆಯ ಮೇಲೆ ಹೋಗಬಲ್ಲರು. ಧೈರ್ಯದಲ್ಲಿಯೂ ಇವರು ಅರಬ್ಬರಿಗೆ ಸಮಾನರು. ಈಟಿ, ಅಂಬು, ಬಿಲ್ಲುಗಳೇ ಇವರ ಆಯುಧ. ಕುದುರೇ ಮೇಲೆ ಎಷ್ಟು ದಿನವಾದರೂ ಹಗಲು ರಾತ್ರೆ ಎನ್ನದೆ ಇರಬಲ್ಲರು. ಪ್ರಪಂಚದ ದೇಶಗಳನ್ನೆಲ್ಲಾ ಜೈಸುವುದಕ್ಕೆ ಈ ಜನರ ವಿನಾ ಮತ್ತೆ ಯಾರೂ ತಕ್ಕವರಲ್ಲ. ಇವರನ್ನು ಜೈಸಿ ಅಡಗಿಸಬೇಕೆಂದು ಯಾರು ಪ್ರಯತ್ನಮಾಡಿದರೂ ಸಾಗಲಿಲ್ಲ.

ಪಾರಸೀಕಪತಿಗಳಲ್ಲಿ ದರವೇಶಗುಸ್ತಾಸ್ಪನೆಂಬುವನೇ ಬಹು ಖ್ಯಾತಿವಂತನು. ಈ ಶಕರನ್ನು ಅಡಗಮೆಟ್ಟಿ ಅಡಿಯಾಳಾಗಿ ಮಾಡಿಕೊಳ್ಳಬೇಕೆಂದು ಇವನಿಗೆ ತೋರಿತು. ಅದಕ್ಕಾಗಿ ದರವೇಶನು ಬಹು ದೊಡ್ಡ ದಂಡಿನೊಡನೆ ಶಕರ ರಾಜ್ಯದ ಮೇಲೆ ತೆರಳಿದನು. ಶಕಾಧಿರಾಜನು ತನ್ನ ಜನರನ್ನು ಸಜ್ಜುಮಾಡಿಕೊಂಡು ಹೊರಟನು. ಶಕರು ಕುದುರೆಗಳನ್ನೇರಿ ಶತ್ರುಗಳು ಬರುವುದನ್ನು ಕಂಡು ಅವರಿಗೆ ಹೆದರಿ ಓಡಿ ಹೋದವರಂತೆ ಕಾಡಿನೊಳಕ್ಕೆ ಓಡಿ ಹೋದರು. ಪಾರಸೀಕರೂ ಇವರ ಬೆನ್ನಹತ್ತಿ ಅನೇಕ ಗಾವುದಗಳು ಹೋದರು. ಕೊನೆಗೆ ಪಾರಸೀಕರ ಕಣ್ಣಿಗೆ ಶಕರಲ್ಲೊಬ್ಬನಾಗಲಿ ಕಾಣಿಸಲಿಲ್ಲ. ಎತ್ತ ನೋಡಿದರೂ ಮರಳಕಾಡು, ಒಂದು ಗಿಡವಿಲ್ಲ, ಒಂದು ಸೆರೆ ನೀರಿಗೂ ಗತಿ ಇಲ್ಲ. ಪಾರಸಿ ಸೇನೆ ಬಹು ಆಯಾಸಪಟ್ಟು ನಷ್ಟವಾಯಿತು. ದರವೇಶನಿಗೆ ದಿಕ್ಕೇ ತೋಚದೇ ಹೋಯಿತು. ಹಗೆಗಳನ್ನು ಹೀಗೆ ಕಾಡಿನ ಮಧ್ಯೆ ತಂದುಬಿಟ್ಟು ಇನ್ನು ಯಾವ ವಿಧದಲ್ಲಿಯೂ ತಮ್ಮ ಮೇಲೆ ಅವರ ಕೈನಡೆಯಲಾರದೆಂದು ತಿಳಿದು, ಶಕರು ಧೈರ್ಯಮಾಡಿಕೊಂಡರು.

ಇಂಥಾ ಕಷ್ಟ ಬಂತಲ್ಲಾ ! ಏನು ಮಾಡಬೇಕೆಂದು ದರವೇಶನು ತನ್ನ ಮಂತ್ರಿಗಳೊಡನೆ ಆಲೋಚನೆ ಮಾಡುತ್ತಾ ಕೂತಿರುವಲ್ಲಿ, ಒಬ್ಬ ಭಟನು ಬಂದು ಮಹಾ ತೇಜಿಯನ್ನೇರಿ ಅತಿ ವೇಗವಾಗಿ ದರವೇಶನ ಪಾಳಯಕ್ಕೆ ನುಗ್ಗಿ, ಆ ದೊರೆಯ ಮುಂದೆ ಬಂದು ನಿಂತು ಒಂದು ಗಂಟನ್ನು ಆತನ ಮುಂದೆ ಇರಿಸಿ, ಕೂಡಲೆ ಅಶ್ವಾರೂಢನಾಗಿ ಕಣ್ಣ ಮುಚ್ಚಿ ಬಿಡುವುದರೊಳಗಾಗಿ ಹೊರಟು ಹೋದನು. ಪಾರಸೀಕರೆಲ್ಲ ರಿಗೂ ಗಾಬರಿಯಾಯಿತು. ದೊರೆಯು ಆಶ್ಚರ್ಯಪಡುತ್ತಾ ಆ ಗಂಟನ್ನು ಬಿಚ್ಚಿಸಿ ನೋಡುವಾಗ ಅದರಲ್ಲಿ ಒಂದು ಇಲಿ, ಒಂದು ಹಕ್ಕಿ, ಒಂದು ಮೀನು, ಒಂದು ಕಟ್ಟು ಅಂಬು, ಇಷ್ಟು ಇದ್ದವು. ಇದನ್ನು ಕಂಡ ಕೂಡಲೆ ಅಲ್ಲಿದ್ದವರಿಗೆಲ್ಲಾ ಆಶ್ಚರ್ಯದಿಂದ ವಾಕ್‌ಸ್ತಂಭ ವಾಯಿತು. ಆಗ ದೊರೆಯು—ಶಕನು ನಮಗೆ ಕಳುಹಿಸಿರುವ ಉಪ ಹಾರಕ್ಕೆ, ತಾವು ನಮಗೆ ವಿಧೇಯರಾಗುತೇವೆಂತ ಅರ್ಥ; ಹ್ಯಾಗೆಂ ದರೆ: ಇಲಿಯು ಭೂಮಿಯನ್ನು ಸೂಚಿಸುವುದು, ಯಾಕಂದರೆ ಅದು ನೆಲದಲ್ಲಿ ಬಿಲವನ್ನು ಮಾಡಿಕೊಂಡು ವಾಸಮಾಡುವುದು. ಮೀನು ನೀರನ್ನು ಸೂಚಿಸುವುದು, ಯಾಕೆಂದರೆ ಅದು ನೀರು ಅಥವಾ ಸಮುದ್ರ ದಲ್ಲಿ ವಾಸಮಾಡುವುದು. ಹಕ್ಕಿಯು ಆಕಾಶವನ್ನು ಸೂಚಿಸುವುದು, ಯಾಕೆಂದರೆ ಅದು ಅಂತರಿಕ್ಷದಲ್ಲಿ ಹಾರಾಡುವುದು. ಅಂಬುಗಳು ಶತ್ರುಗಳ ಆಯುಧ. ಅವರ ದೇಶದ ನೆಲ, ಜಲ, ಆಕಾಶ, ಇವೆಲ್ಲ ವನ್ನೂ ನಮಗೆ ಒಪ್ಪಿಸಿ, ತಾವೂ ನಮಗೆ ವಿಧೇಯರಾಗಿದೇವೆಂದು ತಿಳಿಯಪಡಿಸಿದಂತಾಯಿತು,—ಈ ಪ್ರಕಾರ ದೊರೆಯು ಅದಕ್ಕೆ ಅರ್ಥ ಮಾಡಿದನು.

ಆಗ ಸಮೀಪದಲ್ಲಿದ್ದ ಒಬ್ಬ ವೃದ್ಧ ಮಂತ್ರಿಯು ಹೇಳಿದ್ದೇ ನೆಂದರೆ:—ಜೀಯ, ಪರಾಕು. ಇದಕ್ಕೆ ಸ್ವಾಮಿ ಮಾಡಿದ ಅರ್ಥ ವಲ್ಲದೆ ಬೇರೆ ಅರ್ಥ ಉಂಟು. ಅಭಯವಾದರೆ ಅರಿಕೆ ಮಾಡು ತ್ತೇನೆ. ಈ ಘೋರಾರಣ್ಯದ ಮಧ್ಯೆ ನಾವು ಬಂದು ನಿಲ್ಲುವುದಕ್ಕೆ ನೆರಳಿಲ್ಲದೆ ಕುಡಿಯುವುದಕ್ಕೆ ನೀರಿಲ್ಲದೆ ಸೇನೆಯೆಲ್ಲಾ ನಷ್ಟ ಹೊಂದಿ, ನಮಗೆ ದಿಕ್ಕೇ ತೋಚದೆ ಇದೆ. ಶತ್ರುಗಳಲ್ಲಿ ಒಬ್ಬನಾದರೂ ನಮ್ಮ

ಕೈಗೆ ಸಿಕ್ಕಲಿಲ್ಲ. ನಷ್ಟವೆಲ್ಲಾ ನಮಗಾಗಿದೆಯೊ ಅವರಿಗಾಗಿದೆಯೊ? ಇದೇ ನಮಗೆ ಸೋಲೆಂದು ತಿಳಿಯಬೇಕು; ಸೋಲಿಗೆ ಇದಲ್ಲದೆ ಬೇರೆ ಎರಡು ಕೊಂಬು ಇದೆಯೆ? ಇಲಿಯಂತೆ ನೆಲವನ್ನು ಕೊರೆದುಕೊಂಡು ಹೋಗಬೇಕು; ಅಥವಾ ಮೀನಿನ ಹಾಗೆ ನೀರಿನಲ್ಲಿ ಮುಳುಗಿ ಹೋಗ ಬೇಕು; ಹೀಗೆ ಯಾವದಾದರೂ ಒಂದು ಮಾರ್ಗವಾಗಿ ನಾವು ತಪ್ಪಿಸಿ ಕೊಂಡು ಹೋದರೆ ಸರಿ, ಇಲ್ಲದಿದ್ದರೆ ನಾವು ಶಕರ ಅಂಬಿನಿಂದ ಸಾಯ ಬೇಕು. ಇದೇ ಶತ್ರುಗಳ ಉಪಹಾರಕ್ಕೆ ಅರ್ಥ,—ಎಂದು ಅರಿಕೆ ಮಾಡಿದನು. ಇದನ್ನು ಕೇಳಿ ದೊರೆಯ ಮನಸ್ಸು ಜೋಲುಬಿತ್ತು. ದರವೇಶನು ಅರ್ಥ ಮಾಡುವುದರಲ್ಲಿ ತಾನು ದುಡುಕಿದೆನೆಂದು ಒಪ್ಪಿ ಕೊಂಡು ತನ್ನ ದೇಶಕ್ಕೆ ಹಿಂತಿರುಗಿ ಹೊರಟು ಹೋದನು. ಅವನ ದಂಡೆಲ್ಲಾ ನಾಶವಾಯಿತು. ಶತ್ರುಗಳು ಒಬ್ಬನಾದರೂ ಇವರಿಂದ ಹತನಾಗಲಿಲ್ಲ.

ಇನ್ನೊಂದು ಕಾಲದಲ್ಲಿ ಲೋಲಾಕ್ಷನೆಂಬ ಮತ್ತೊಬ್ಬ ದೊರೆಯು ಶಕರನ್ನು ಜೈಸಬೇಕೆಂದು ಯತ್ನಿಸಲು ಅವರು ಇವನನ್ನು ಸೋಲಿಸಿ ಕೈಸೆರೆ ಹಿಡಿದರು. ಮಾರನೇ ದಿನ ಊಟದ ಹೊತ್ತು ಬಂತು. ಆಗ ಶಕರಾಜನು ಲೋಲಾಕ್ಷನನ್ನು ಒಳಗಿನಿಂದ ಕರೆದು ತಂದು, ಉತ್ತಮ ವಾದ ಪೀಠದಲ್ಲಿ ಕುಳ್ಳಿರಿಸಿ, ಆತನಿಗೆ ಭಕ್ಷ್ಯಭೋಜ್ಯಾದಿ ಶ್ರೇಷ್ಠವಾದ ಆಹಾರಗಳನ್ನು ಲೋಲಾಕ್ಷನಿಗೆ ಬಡಿಸಿಸಿ, ತಾನು ಮಾತ್ರ ದೂರವಾಗಿ ಕುಳಿತು ಎಂದಿನಂತೆ ತಮ್ಮ ಜನರ ಕಾಡುತಿಂಡಿಯನ್ನು ತಿನ್ನುತ್ತಾ ಹೇಳಿದ್ದೇನೆಂದರೆ :—

ಶಕರಾಜ—ಸ್ವಾಮಿ, ತಮಗೆ ನಮ್ಮ ಕಾಡತಿಂಡಿಯ ಮೇಲೆ ಇಷ್ಟವೆ? ಅಥವಾ ತಮಗೆ ಬಡಿಸಿರುವ ಆಹಾರದ ಮೇಲೆ ಇಷ್ಟವೆ?

ಲೋಲಾಕ್ಷ—(ಶಕರು ತನಗೆ ಮಾಡಿದ ಮರ್ಯಾದೆಗೆ ಸಂತೋಷ ದಿಂದಲೂ ಆಶ್ಚರ್ಯದಿಂದಲೂ ಒಡಗೂಡಿ) ನೀವು ಹೇಳಿದಂತೆ ತಮ್ಮ ತಿಂಡಿ ಕಾಡುತಿಂಡಿಯೇ ಸರಿ. ನನಗೆ ತಾವು ಅತ್ಯಂತ ಪ್ರೀತಿಯಿಂದ ತಂದು ಬಡಿಸಿರತಕ್ಕ ಷಡ್ರಸೋಪೇತವಾದ ಆಹಾರವು ನಮ್ಮ ಸೀಮೆಯ ತಿಂಡಿಯಾಗಿದೆ. ಇದಕ್ಕೆ ಸಮಾನ ಉಂಟೆ?

ಶಕರಾಜ— ಹಾಗಾದರೆ, ದೊರೆಯೆ, ಇಂಥಾ ಗತಿ ಇಲ್ಲದೆ ಅಸಹ್ಯ ವಾದ ಆಹಾರವನ್ನು ತಿಂದು ಜೀವಿಸತಕ್ಕ ನಮ್ಮನ್ನು ಯಾವ ಆಶೆ ಯಿಂದ ಜೈಸುವುದಕ್ಕೆ ದಯಮಾಡಿದಿರಿ? ನಮ್ಮ ತಿಂಡಿಯನ್ನು ತಿಂದು ನಮ್ಮ ಬಾಳನ್ನು ಬಾಳುವ ಕಷ್ಟಜೀವಿಗಳಾದ ನಮ್ಮ ಜನರನ್ನು ಪರಾ ಜಯ ಮಾಡುವುದು ಅಸಾಧ್ಯ. ಆದಕಾರಣ ಶಕರನ್ನು ಇನ್ನುಮೇಲೆ ನಿಮ್ಮ ಸ್ನೇಹಿತರಲ್ಲಿ ಗಣನೆಮಾಡಿಕೊಳ್ಳಿ. ನಿಮ್ಮ ಸೀಮೆಯ ತಿಂಡಿಯ ಸ್ವಾರಸ್ಯವು ನಮ್ಮ ಶಕರಿಗೆ ತಿಳಿಯಲೇಬೇಡ. ಅವರು ಅದನ್ನು ತಿಳಿದರೆ ನಿಮ್ಮ ದೇಶದ ಮೇಲೆ ಅವರು ಬಂದು ಬಿದ್ದು ನಿಮ್ಮನ್ನು ಜೈಸಿಯಾರು. ಆದ್ದರಿಂದ ನಿಮ್ಮ ಆಹಾರದ ರುಚಿಯನ್ನು ಅವರು ಅರಿಯದೇ ಇರಲೆಂದು ನೀವು ದೇವರಿಗೆ ಪ್ರಾರ್ಥನೆಮಾಡಿ.

ಶಕರಾಜನು ಈ ಪ್ರಕಾರ ಬುದ್ಧಿಯನ್ನು ಹೇಳಿ ಲೋಲಾಕ್ಷ ನನ್ನು ಸೆರೆಯಿಂದ ಬಿಡುಗಡೆಮಾಡಿ, ಹತಶೇಷವಾಗಿರುವ ಆತನ ದಂಡನ್ನು ಕರೆದುಕೊಂಡು ತನ್ನ ರಾಜ್ಯಕ್ಕೆ ಹೋಗಬಹುದೆಂದು ಹೇಳಿದನು.

ಈ ಶಕರ ಸ್ವಭಾವ ಇಂಥಾದ್ದು. ನಾನು (ಚಾರುದತ್ತ) ಅವರ ಪಾಳಯದಲ್ಲಿ ಹೋಗುತ್ತಿರುವಾಗ ಒಂದು ಕಡೆಯಲ್ಲಿ ಗಂಡಸರು ಗುಂಪು ಗುಂಪಾಗಿ ಸೇರಿಕೊಂಡು ಒಂದು ಗುಂಪಿನವರು ಇನ್ನೊಂದು ಗುಂಪಿನವರ ಮೇಲೆ ಕೃತಕ ಯುದ್ಧ ಮಾಡುವುದು, ಎದುರಾಳಿಗಳು ಅವರನ್ನು ಎದು ರಿಸುವುದು ; ಮತ್ತೊಂದು ಕಡೆಯಲ್ಲಿ ಹುಡುಗರು ಅಂಬು ಹೊಡೆಯುವು ದನ್ನು ಅಭ್ಯಾಸ ಮಾಡುವುದು, ಇನ್ನೊಂದು ಎಡೆಯಲ್ಲಿ ಹೆಂಗಸರು ಒಂದು ಒಡವೆಯೂ ಇಲ್ಲದೆ ಇದ್ದಾಗ್ಯೂ ಮನೆಗೆಲಸ ಮುಂತಾದ್ದನ್ನು ಯಾವಾಗಲೂ ಮಾಡುವುದು, ಸೌಂದರ್ಯವಿಲ್ಲದಿದ್ದಾಗ್ಯೂ ದೃಢಾಂಗ ರಾಗಿರುವುದು, ಹೀಗೆ ಇದ್ದರು.

ಕೊನೆಗೆ ನಾನು ಅರಸನ ಗುಡಾರದ ಬಳಿಗೆ ಹೋದೆ. ಅದು ಇತರ ಗುಡಾರಗಳಂತೆ ಸಾಧಾರಣವಾಗಿಯೇ ಇತ್ತು. ಅಲ್ಲಿ ಭಟರು ನನ್ನನ್ನು ರಾಜ ಸಂಮುಖಕ್ಕೆ ಕರೆದುಕೊಂಡು ಹೋಗಿ ಬಿಟ್ಟರು. ಶಕಾಧಿಪತಿಯು ನನ್ನನ್ನು ಬಹುಮರ್ಯಾದೆಯಿಂದ ಕಂಡನು.

ಅರ್ಧಾಸನದಲ್ಲಿ ಕುಳ್ಳಿರಿಸಿಕೊಂಡು ನಾನು ತಿರುಗಿದ ದೇಶ ದೇಶದ ವರ್ತಮಾನಗಳನ್ನೆಲ್ಲಾ ನನ್ನಿಂದ ಕೇಳುವುದಕ್ಕೆ ಮೊದಲು ಮಾಡಿದನು. ಅವನು ಸಂಸ್ಕಾರಿಯಲ್ಲದಿದ್ದಾಗ್ಯೂ ಅವನ ಬುದ್ಧಿಶಕ್ತಿಯೂ ಗ್ರಾಹಕಶಕ್ತಿಯೂ ಅನ್ಯಾದೃಶವಾಗಿ ತೋರಿಬಂತು. ಸಂಸ್ಕಾರಿಗಳಲ್ಲಿ ಇರಬೇಕಾದ ಕೌಶಲ್ಯವೆಲ್ಲಾ ಆತನಲ್ಲಿ ಸ್ವಭಾವವಾಗಿಯೇ ಇತ್ತು. ಮತ್ತೊಂದು ವಿಶೇಷವೇನೆಂದರೆ, ಆತನಿಗೆ ನಮ್ಮ ರೀತಿಗಳೂ ಪದ್ಧತಿಗಳೂ ವಿಶೇಷವಾಗಿ ಗೊತ್ತಾಗಿದ್ದವು. ಶರೀರವನ್ನೂ ಬುದ್ಧಿಯನ್ನೂ ಸಪ್ಪೆಮಾಡತಕ್ಕ ಕಾರ್ಯಗಳನ್ನೂ, ನಮ್ಮ ಅಧಿಕವಾದ ಅಪೇಕ್ಷೆಗಳನ್ನೂ, ಇಲ್ಲದ ನಾಜೋಕನ್ನೂ, ಕಂಡರೆ ಆತನಿಗೆ ಅತ್ಯಂತವಾಗಿ ತಿರಸ್ಕಾರ ಹುಟ್ಟಿತು.

ಇಂಥಾ ದುರ್ಗುಣಗಳು ಶತ್ರುಗಳ ಆಯುಧಕ್ಕಿಂತಲೂ ತೀಕ್ಷ್ಣವಾಗಿ ಮನುಷ್ಯನ ಪೌರುಷವನ್ನು ನಾಶಮಾಡುವವು ಎಂದು ಹೇಳುತ್ತಿದ್ದನು.

ಒಂದು ದಿನ ಆ ಶಕಾಧಿಪತಿಯ ಸಭೆಯಲ್ಲಿ ಸುಂದರಿಯಾದ ಒಬ್ಬ ಸೂಳೆಯು ಮೇಳವನ್ನು ಕಟ್ಟಿ ಮನೋಹರವಾಗಿ ಕುಣಿಯುತ್ತಿದ್ದಳು. ನೋಡಿದವರೆಲ್ಲರೂ ಆನಂದ ಪಡುತ್ತಿದ್ದರು. ಈ ದೊರೆಯು ಅದನ್ನು ನೋಡಿ ಇವಳು ಕಪಿಯಾಗಿ ಹುಟ್ಟಿದ್ದರೆ ಚೆನ್ನಾಗಿತ್ತು ಎಂದನು. ಮತ್ತೊಬ್ಬನು ಸಂಗೀತವನ್ನು ಬಹು ಚೆನ್ನಾಗಿ ಹಾಡುತ್ತಿರಲು, ದೊರೆಯು ಅವನನ್ನು ಕುರಿತು ಎಲೈ ಗಾಯಕನೆ, ನೀನು ಈ ಸಿಂಧುದೇಶೀಯರ ಸಭೆಯಲ್ಲಿ ಬೇಕಾದರೆ ಗಾನಮಾಡಿಕೊ, ನಮ್ಮ ಶಕರಪಾಳಯದಲ್ಲಿ ಗಾನಮಾಡೀಯೆ, ನಿನಗೆ ತಲೇಹುಯಿಸಿಯೇನು ಎಂದನು.

ತರುವಾಯ ಆ ಶಕಾಧಿಪನು ಊಟಕ್ಕೆ ಎದ್ದನು. ಒಣಗಿದ ಮಾಂಸದ ತುಂಡು ಸ್ವಲ್ಪ, ಗಟ್ಟಿಯಾಗಿ ಹೆತ್ತು ಇದ್ದ ಹುಳಿ ಮೊಸರು, ಬೇಯಿಸಿದ ಬೆರೆಕೆ ಸೊಪ್ಪು, ಯಾವುದೋ ಒಂದು ಬಗೆ ಒಣಕಲ ಹಿಟ್ಟು, ಇಷ್ಟನ್ನು ತಂದು ಬಡಿಸಿದರು. ದೊರೆಯು ಚಾರುದತ್ತನನ್ನು ಕುರಿತು

—ಅಯ್ಯಾ, ನೀನು ನಮ್ಮ ತಿಂಡಿಯನ್ನು ತಿನ್ನುವುದಿಲ್ಲವಷ್ಟೆ. ಸ್ವಲ್ಪ ಹುಳಿ ಮೊಸರನ್ನಾದರೂ ತೆಗೆದುಕೊಳ್ಳುವನಾಗ್ಯೆ, ಎಂದು ತರಿಸಿಕೊಟ್ಟು —ನಮ್ಮ ಆಹಾರ ನಿನಗೆ ಹ್ಯಾಗೆ ತೋರುತಿದೆ? ಎಂದು ಕೇಳಿದನು. ಆಗ ನಾನು ನನ್ನ ಮನಸ್ಸಿನಲ್ಲಿ ಈ ಶಕರು ಇಂಥಾ ಕಾಡತಿಂಡಿಯನ್ನು ತಿಂದು ದೇಹವನ್ನು ಗಟ್ಟಿಯಾಗಿ ಮಾಡಿಕೊಂಡಿದಾರೆ. ಆದ್ದರಿಂದಲೇ ಇಷ್ಟು ಪರಾಕ್ರಮಿಗಳಾಗಿ ಯಾರೂ ಲಕ್ಷ್ಯವಿಲ್ಲದೆ ರಾಜ್ಯಗಳನ್ನೆಲ್ಲಾ ಜೈಸಿದಾರೆ. ನಮ್ಮ ದೇಶದವರಾದರೋ, ಬೇಕಾದ ಪಕ್ವಾನ್ನಗಳನ್ನೂ ವಾಸನೆಕಟ್ಟಿರುವ ಬಗೆ ಬಗೆ ತಿಂಡಿಗಳನ್ನೂ ಮಾಡುವುದರಲ್ಲಿಯೂ ತಿನ್ನುವುದರಲ್ಲಿಯೂ ಬಹು ಚುರುಕರು. ಈ ಆಹಾರದಿಂದಲೇ ನಮ್ಮ ವರಿಗೆಲ್ಲಾ ಪೌರುಷ ಕಡಮೆಯಾಗಿ ಅನ್ಯರಿಗೆ ಅಧೀನರಾಗಿರುವುದು, ಹೀಗೆಂದು ಯೋಚಿಸಿ, ದೊರೆಯನ್ನು ಕುರಿತು—ಸ್ವಾಮಿ, ನೀವು ಕೇಳಿದ ಪ್ರಶ್ನೆಗೆ ನಾನು ಏನು ಉತ್ತರವನ್ನು ಹೇಳಲಿ? ನಿಮ್ಮ ಆಹಾರವು ನಿಮ್ಮ ಪುತ್ರರಿಗೆ ಅಷ್ಟು ಆಪ್ಯಾಯನವಲ್ಲದಿದ್ದಾಗ್ಯೂ ನಿಮ್ಮ ಶತ್ರುಗಳಿಗೆ ಹೃದಯವಿದಳನವಾಗಿದೆ, ಎಂದು ಹೇಳಿದೆನು. ದೊರೆಗೆ ನನ್ನ ಮಾತಿನಲ್ಲಿ ಏನೋ ಒಂದು ಪ್ರೀತಿ ತೋರಿ, ನನ್ನಲ್ಲಿ ವಿಶೇಷ ವಾಗಿ ಮೈತ್ರಿಯನ್ನು ಇಟ್ಟುಕೊಂಡು, ಯಾವಾಗಲೂ ಮಹತ್ಕಾರ್ಯ ಗಳನ್ನು ಕೈಕೊಳ್ಳಬೇಕಾದಾಗ ನನ್ನಲ್ಲಿ ಆಲೋಚನೆಯನ್ನು ಕೇಳುತ್ತಾ ನನ್ನನ್ನು ಎಡೆಬಿಡದೆ ಸಮೀಪದಲ್ಲಿಯೇ ಇರಿಸಿಕೊಂಡಿದ್ದನು. ಈತನ ಸ್ನೇಹದಿಂದ ನಾನು ಶಕರನ್ನು ಈ ಸೀಮೆಯಿಂದ ಹಿಂದಕ್ಕೆ ಕಳುಹಿಸಿ ನಮ್ಮ ದೇಶಸ್ಥರಿಗೆ ಸ್ವಾತಂತ್ರ್ಯ ದೊರೆಯುವಂತೆ ಮಾಡದಿದ್ದಾಗ್ಯೂ, ಸಮಯವರಿತು ನಾನು ಹೇಳುತಿದ್ದ ಮಂತ್ರಾಲೋಚನೆಯಿಂದ ನಮ್ಮ ದೇಶೀಯರಿಗೆ ಹಿಂಸೆ ಕಡಮೆಯಾಗಿ ಸೌಖ್ಯ ಹೆಚ್ಚಾಯಿತು. ಈ ಶಕರಾಜನ ದರ್ಪಕ್ಕೆ ಅವನಕಡೇ ಜನರೆಲ್ಲರೂ ನಡುಗುತಿದ್ದರು. ಯಾರಿಗೂ ಯಾವ ಕೆಟ್ಟಾಟಕ್ಕೂ ಆಸ್ಪದವಿರಲಿಲ್ಲ. ಈತನ ರಾಜ್ಯವು ರಾಮರಾಜ್ಯವಾಗಿತ್ತು. ಆದರೆ ಕಾಲಗತಿಯಿಂದ ಈತನು ದೈವಾಧೀನ ನಾಗಲು, ಇವನ ದಿವಸದಲ್ಲಿ ಅಡಗಿ ನಾಯಮರಿಯ ಹಾಗೆ ಬಿದ್ದಿದ್ದ ತುಂಟ ಪಾಳಯಗಾರರೆಲ್ಲರೂ ಎದ್ದು ಕೂತುಕೊಂಡರು. ಇವರನ್ನು

ಅಡಗವೊಟ್ಟುವುದಕ್ಕೆ ಹೊಸ ದೊರೆಗೆ ಸಾಮರ್ಥ್ಯವಿಲ್ಲದೆ ಹೋಯಿತು. ನಮ್ಮ ಸೀಮೆಯ ಜನರಿಗೆ ಒಂದಕ್ಕೆ ಹತ್ತರಷ್ಟು ಕಷ್ಟ ಪ್ರಾಪ್ತವಾಯಿತು. ಕೊನೆಗೆ ಒಬ್ಬ ಪುಂಡು ಪಾಳಯಗಾರನು ಒಂದು ದಿನ ನನ್ನ ತೋಟವನ್ನೂ ಹೊಲವನ್ನೂ ಹಾಳಮಾಡಿ ನನ್ನ ಗುಡಿಸಲಿಗೆ ಬೆಂಕಿ ಹತ್ತಿಸಿ, ನನಗೂ ನನ್ನ ಮಗಳಿಗೂ ಬೇಡೀಹಾಕಿ ನಮ್ಮನ್ನು ಕಾಡಿಗೆ ತಂದು ಮಾರಿಗೆ ಬಲೀ ಕೊಡುವದಾಗಿದ್ದನು. ಮುಂದಿನ ಸಂಗತಿಯೆಲ್ಲಾ ಶೂರನಾದ ನಿನಗೆ (ಮಲ್ಲನಿಗೆ) ತಿಳಿದೇ ಇದೆ.

ಈ ರೀತಿಯಲ್ಲಿ ಚಾರುದತ್ತನು ತನ್ನ ಕಥೆಯನ್ನು ಹೇಳಿ ಮುಗಿಸಿದನು.

ಇದನ್ನು ಮಲ್ಲನ ಮನೇ ಜನರೆಲ್ಲಾ ಗಮನವಿಟ್ಟು ಕೇಳಿದರು. ಅತಿ ವೃದ್ಧನಾದ ಮಲ್ಲನ ತಂದೆಯು ಎದ್ದು ಸಂತೋಷದಿಂದ ಚಾರುದತ್ತನನ್ನು ಅಪ್ಪಿಕೊಂಡು ತಮ್ಮ ಕೈಲಾದಮಟ್ಟಿಗೆ ಶತ್ರುಗಳ ಬಾಧೆಯನ್ನು ನಿವಾರಣ ಮಾಡುವದಾಗಿಯೂ ಚಾರುದತ್ತನ ಪ್ರಾಣಕ್ಕೆ ಬದಲಾಗಿ ತಮ್ಮ ಪ್ರಾಣವನ್ನು ಕೊಡುವುದಾಗಿಯೂ ವಾಗ್ದಾನ ಮಾಡಿದನು. ತಮ್ಮ ದೇಶದ ಮೇಲೆ ಬರುತ್ತಿದ್ದ ಶತ್ರುಗಳನ್ನು ಮಲ್ಲನ ಊರಿನವರು ಎಲ್ಲರೂ ಒಟ್ಟಾಗಿಸೇರಿ ಎದುರಿಸುವುದೆಂದು ನಿಶ್ಚೈಸಿಕೊಂಡರು. ಮಲ್ಲನು ತನ್ನ ಊರಿನ ಸುತ್ತಲೂ ಇದ್ದ ೮-೧೦ ಗ್ರಾಮಗಳಿಗೆ ಹೋಗಿ ಸಿಕ್ಕಿದ ಗಂಡಾಳುಗಳನ್ನೆಲ್ಲಾ ಕೂಡಹಾಕಿದನು. ಶಕರ ಬಾಧೆಯನ್ನು ಅನುಭವಿಸಿ ಸಾಕಾಗಿದ್ದ ಆ ಜನರೆಲ್ಲಾ ಒಗ್ಗಟ್ಟಾಗಿ, ಮಲ್ಲನ ಪ್ರಯತ್ನ ಉತ್ತಮವಾದದ್ದೆಂದು ತಿಳಿದು, ಜಗಳಕ್ಕೆ ಸಿದ್ಧವಾದರು. ವೃದ್ಧರು ತಮ್ಮ ಅನುಭವದಿಂದಲೂ, ಯೌವ್ವನಸ್ಥರು ಅಂಗಶಕ್ತಿಯಿಂದಲೂ ವಯಸ್ಸಿಗೆ ತಕ್ಕ ವೀರಾವೇಶದಿಂದಲೂ ತೆರಳಿದರು. ಎಲ್ಲರೂ ಐಕಕಂಠ್ಯವಾಗಿ ಮಲ್ಲನನ್ನು ತಮಗೆ ಮುಂದಾಳಾಗಿ ಮಾಡಿಕೊಂಡರು. ಅವ ಹೇಳಿದಂತೆ ತಾವೆಲ್ಲರೂ ನಡೆದುಕೊಳ್ಳತಕ್ಕದ್ದೆಂದು ವೃದ್ಧರಾದವರೆಲ್ಲರೂ ಒಂದು ಸಮಾಖ್ಯ ಮಾಡಿದರು.

ಆಗ ಚಾರುದತ್ತನು ಇದೆಲ್ಲವನ್ನು ನೋಡಿ, ಮಲ್ಲನನ್ನು ಒಂದು ಕಡೆಗೆ ಕರೆದುಕೊಂಡು ಹೋಗಿ ರಹಸ್ಯವಾಗಿ ಅವನ ಸಂಗಡ ಹೇಳಿ

ದ್ದೇನೆಂದರೆ :—

ಅಯ್ಯಾ ಮಗುವೆ, ಈಗ ಶತ್ರುಗಳನ್ನು ಎದುರಿಸಿ ಓಡಿಸುವುದಕ್ಕಾಗಿ ನಿನ್ನ ಜೊತೆಗೆ ಸೇರಿಕೊಂಡಿರುವ ಸಜ್ಜನರ ಸದ್ಗುಣವೂ, ನೀನು ನನಗೆ ಮಾಡಿದ ಮಹದುಪಕೃತಿಯೂ, ದುರಾಶೆಯಿಂದ ಉನ್ಮತ್ತರಾಗಿರುವ ದುಷ್ಟ ಶತ್ರುಗಳನ್ನು ಮಾರಾಂತು ಸೋಲಿಸಿ ಮೂಲೋತ್ಪಾಟನವನ್ನು ಮಾಡಬೇಕೆಂಬ ನನ್ನ ಕುತೂಹಲವೂ, ಇವುಗಳೆಲ್ಲಾ ಒಟ್ಟುಗೂಡಿಕೊಂಡು ನಾನು ತಿಳಿದಿರುವ ಕೆಲವು ರಹಸ್ಯಗಳನ್ನು ಹೊರಪಡಿಸೆಂದು ನೂಕುತ್ತಲಿವೆ. ನಾನು ಎಷ್ಟೋ ದೇಶಗಳನ್ನು ಸುತ್ತಿದೆ, ಎಷ್ಟೋ ಜನರನ್ನು ನೋಡಿದೆ, ಅನೇಕ ಗ್ರಂಥಗಳನ್ನು ಓದಿದೆ, ಎಷ್ಟೋ ಪದಾರ್ಥಗಳನ್ನು ಅವುಗಳ ಪ್ರಯೋಜನಗಳನ್ನು ಪರೀಕ್ಷೆಮಾಡಿ ತಿಳಿದುಕೊಂಡೆ. ಆದಾಗ್ಗೂ ನನಗೆ ತಿಳಿಯದೆ, ತಿಳಿಯತಕ್ಕ ಅಂಶಗಳು ಇನ್ನು ಅನೇಕವಾಗಿವೆ. ಆದರೂ ನನಗೆ ತಿಳಿದ ಒಂದು ಸಂಗತಿಯನ್ನು ಹೇಳುತ್ತೇನೆ, ಎಂದು ಕೆಲವು ರಹಸ್ಯಗಳನ್ನು ಮಲ್ಲನಿಗೆ ಹೇಳಿಕೊಟ್ಟನು.

ತರುವಾಯ ಹೊಲ್ಲನು ಹೆಚ್ಚಾದ ದಂಡಿನೊಡನೆ ಬಂದು ಜಗಳಕ್ಕೆ ಅನುವಾದನು. ಮತ್ತು ಕೂಡಲೆ ಮಲ್ಲ ಇದ್ದ ಕಡೆಗೆ ಹೊಲ್ಲನು ಸೇನಾಪತಿಯ ಉಡುಪನ್ನು ಹಾಕಿಕೊಂಡು ಬಹು ಡಂಭವಾಗಿ ಬಂದು—ಮಲ್ಲ, ನಿನಗೆ ಇನ್ನೂ ಬುದ್ಧಿ ಬರಲಿಲ್ಲವೆ? ಒಂದು ಗಳಿಗೆಯಲ್ಲಿ ದೇಶವನ್ನೆಲ್ಲಾ ಹಾಳುಮಾಡಿ ಈ ಊರ ಜನರನ್ನೆಲ್ಲಾ ಕೊಂದು ರಾಜ್ಯವನ್ನು ಕೈವಶಮಾಡಿಕೊಳ್ಳುತೇನೆ, ಎಂದನು. ಅದಕ್ಕೆ ಮಲ್ಲನು ಈ ಸೇನಾಪತಿಯು ಇಂಥವನೆಂದು ಅರಿಯದೆ ಅನುಮಾನಪಟ್ಟು ಕೊನೆಗೆ ಧ್ವನಿಯಿಂದ ಗೊತ್ತುಮಾಡಿಕೊಂಡು—ಹೊಲ್ಲ, ಈ ಡಂಭವನ್ನು ಬಿಡು. ನೀನು ಹುಟ್ಟಿದ ಊರನ್ನು ಜೈಸಿ ಜನರಿಗೆ ಹಿಂಸೆಯನ್ನುಂಟುಮಾಡಿದರೆ, ಅದು ದೊಡ್ಡತನವೂ ಅಲ್ಲ. ಪರಾಕ್ರಮ ಮೊದಲೇ ಅಲ್ಲ. ಲೋಕದಲ್ಲಿ ಜನರ ಕಷ್ಟವನ್ನು ನಿವಾರಣೆಮಾಡಿ ಲೋಕೋಪಕಾರ ಮಾಡುವುದು ಉತ್ತಮರ ಲಕ್ಷಣ. ನೀನು ಕೆಟ್ಟದಾರಿಗೆ ಹೋಗಿ ಜಗಳಕ್ಕೆ ನಿಲ್ಲುತೇನೆಂದು ಹಠ ಮಾಡಿದರೆ ನಾನು ಕೊನೆಗೂ ಕಾದಿಬಿಡು

ತೇನೆ. ಊರ ಜನರನ್ನು ಬೇರೇ ನಿನ್ನ ವಶಕ್ಕೆ ಬಿಟ್ಟುಕೊಡುವುದಿಲ್ಲ, ಎಂದನು. ಆಗ ಹೊಲ್ಲನು ಆಗ್ರಹದಿಂದ ಹೊರಟು ಹೋದನು. ಅವನ ಸೇನೆಗೂ ಮಲ್ಲನ ಜನರಿಗೂ, ಜಗಳ ಆರಂಭವಾಯಿತು. ಯುದ್ಧ ಮಾಡುವುದರಲ್ಲಿ ಚೆನ್ನಾಗಿ ನುರುಗಿದ್ದ ಹೊಲ್ಲನ ಭಟರು ಆ ಊರ ಮಂದಿಯನ್ನೆಲ್ಲಾ ಸಾಯಗೊಲೆಹಾಕಿ ಹುಡಿಬಡಿದರು. ಮಲ್ಲನ ಊರಿನ ರೈತರು ಎಂದಿಗೂ ಇಂಥಾ ಕದನಗಳಲ್ಲಿ ಕಾದಿದವರಲ್ಲವಾದ್ದರಿಂದ ಅವರು ಶತ್ರುಗಳ ಎದುರಿಗೆ ನಿಲ್ಲಲಾರದೆ ಓಡಿಹೋಗುವ ಹೊತ್ತು ಬಂತು. ಹೊಲ್ಲನಿಗೆ ಇನ್ನೇನು ಜಯವಾಯಿತು ಎಂದು ಶತ್ರುಗಳು ಸಂತೋಷವಾಗಿ ಕೂಗಿಕೊಂಡು ಎದುರಾಳುಗಳನ್ನು ಹಿಂದಟ್ಟಿ ಹೋಗುತಿರುವಾಗ ನೂರು ಸಿಡಿಲು ಏಕಕಾಲದಲ್ಲಿ ಹೊಡೆದ ಹಾಗೆ ಸದ್ದಾಯಿತು. ಸುತ್ತಲೂ ಇದ್ದ ಬೆಟ್ಟದ ಬಂಡೆಗಳೆಲ್ಲಾ ಹಾರಿ ಹೊಲ್ಲನ ಸೇನೆಯ ಮೇಲೆ ಬಿತ್ತು. ಭೂಮಿ ಬಿರಿದು ಹೋಗಿ ಹೊಲ್ಲನ ಸೇನೆ ಅದರಲ್ಲಿ ದೊಸಕೊಂಡುಹೋಯಿತು. ಅನೇಕರು ಸತ್ತು ಹೋದರು ; ಕೆಲವರು ಕೈಕಾಲು ಮುರಿದು, ಸಾಯುತಾ ಬಿದ್ದಿದ್ದರು. ಅಕಸ್ಮಾತ್ತಾಗಿ ದೇವರ ಕೃಪೆಯಿಂದ ಮಲ್ಲನ ಕಡೆಯವರಿಗೆ ಜಯವಾಯಿತು. ಆಗ ಆ ಊರ ಜನರೆಲ್ಲಾ ಮಲ್ಲನ ಎದುರಿಗೆ ಬಂದು ವಿಶೇಷವಾಗಿ ಮರ್ಯಾದೆ ಮಾಡಿ ಅವನಿಂದ ತಮ್ಮ ಊರೂ ತಮ್ಮ ಜನರೂ ಉಳಿದರೆಂದು ಅವನನ್ನು ಹೊಗಳಿದರು. ಆಗ ಮಲ್ಲನು ಹೊಲ್ಲನ ಗತಿ ಏನಾಯಿತೋ ನೋಡೋಣವೆಂದು ಹುಡುಕಿಸುವಾಗ ಅವನ ಅಂಗಗಳೆಲ್ಲಾ ಮುರಿದು ಮುಖವೆಲ್ಲಾ ಜಜ್ಜಿ ಹೋಗಿ ಸತ್ತು ಹೋಗಿದ್ದನು. ಅವನ ಮೇಲೆ ಅನೇಕ ಹೆಣಗಳು ಬಿದ್ದಿದ್ದವು. ಗುರುತು ಸಿಕ್ಕುವುದೇ ಕಷ್ಟವಾಯಿತು. ಮಲ್ಲನು ಅವನ ಹೆಣವನ್ನು ತೆಗೆಯಿಸಿ ಹೂಳಿಸಿದನು. ತರುವಾಯ ತಾನು ಗೌರವಶಾಲಿಯಾಗಿ ಊರಲ್ಲಿ ಜನರಿಗೆ ಬೇಕಾದ ಉಪಕಾರವನ್ನು ಮಾಡಿಕೊಂಡಿದ್ದನು.

ಚಾರುದತ್ತನು ಮಾಡಿದ ಉಪಕಾರಕ್ಕಾಗಿ ಗ್ರಾಮದವರೆಲ್ಲಾ ಸೇರಿ ಅವನಿಗೆ ಒಂದು ಭೂಮಿಯನ್ನು ಮಾಡಿಕೊಟ್ಟರು. ಅದನ್ನು ಗ್ರಾಮದ ರೈತರೇ ಉತ್ತು ಬಿತ್ತಿ ಬಂದ ಬೆಳೆಯನ್ನು ಚಾರುದತ್ತನ ಜೀವನಕ್ಕೆ

ಕೊಡುತ್ತಿದ್ದರು. ಚಾರುದತ್ತನ ಕಥೆ ಹೀಗೆ ಮುಗಿಯಿತು.

ಹೀಗೆ ಕಥೆಯನ್ನು ಲಲಿತೆಯು ಓದಿ ಪೂರೈಸಿದ ತರುವಾಯ

ಮದನ—ಬಂಡೆಗಳೆಲ್ಲಾ ಒಡೆದು ಭೂಮಿ ಎಲ್ಲಾ ಬಿರಿದು ದೊಡ್ಡ ಸೇನೆ ಮಡಿದು ಹೋಗಬೇಕಾದರೆ, ಆ ಶಕ್ತಿ ಎಂಥಾದ್ದು? ಆ ತ್ರಾಣ ಯಾವುದು?

ಜೋಯಿಸ—ಗಂಧಕ ಕಡ್ಡಿಯುಪ್ಪು ಮೊದಲಾದ ಪದಾರ್ಥಗಳನ್ನು ಸೇರಿಸಿ ಮಾಡಿರುವ ಪುಡಿಯ ತ್ರಾಣ.

ಮದನ—ಇದು ಮದ್ದು. ಇದನ್ನು ಸಾಧಾರಣವಾಗಿ ಕೋವಿಗಳಿಗೆ ಹಾಕಿ ಹಾರಿಸುತಾರಷ್ಟೆ? ಇಂಥಾ ವಿಪರೀತ ಅದರಿಂದ ಹೇಗೆ ಉಂಟಾದೀತು?

ಜೋಯಿಸ—ಅದು ಸಾಧಾರಣವಾದ ಶಕ್ತಿ. ಅದರಲ್ಲಿ ಇನ್ನೂ ಕೆಲವು ಕ್ರಮಗಳನ್ನು ನಡಸಿದರೆ ಒಂದಕ್ಕೆ ನೂರರಷ್ಟು ತ್ರಾಣ ಹುಟ್ಟುವುದು.

ಮದನ—ಚಾರುದತ್ತನು ಅಲ್ಪನಾಗಿ ಕಂಡರೂ ಅವನು ಎಂಥಾ ರಹಸ್ಯಗಳನ್ನು ಬಲ್ಲವನು? ಇವನು ಇಲ್ಲದಿದ್ದರೆ ಮಲ್ಲನ ಕಡೆಯವರಿಗೆ ಜಯವಾಗುತಿರಲಿಲ್ಲ. ನಾವು ದೊಡ್ಡವರು, ನಾವು ಐಶ್ವರ್ಯವಂತರು, ನಾವು ದೊರೆಮಕ್ಕಳು, ನಾವು ಅರಸಿತ್ತಿಯರು, ಹೀಗೆ ಹಾಗೆ ಎಂದು ಪ್ರತಿಷ್ಠೆಯನ್ನು ಕೊಚ್ಚಿಕೊಂಡು ಮೆರೆಯುವ ಮನುಷ್ಯರು ಈಗಲಾದರೂ ತಿಳಿದುಕೊಳ್ಳಲಿ. ಈ ಚಾರುದತ್ತನ ಕಥೆಯನ್ನು ಜೋಯಿಸರು ಆ ಜನರಿಗೆ ಓದಿ ಹೇಳಿದ್ದರೆ, ತಮಗಿಂತಲೂ ಎಷ್ಟೋ ಭಾಗದಲ್ಲಿ ಬುದ್ಧಿಶಾಲಿಯಾಗಿರುವ ಸುಮತಿಯನ್ನು ಅವರು ಅಷ್ಟೊಂದು ತಿರಸ್ಕಾರ ಮಾಡಿ ಅವನಿಗೆ ಅಷ್ಟು ಅವಮಾನ ಮಾಡುತಿರಲಿಲ್ಲ.

ದೊರೆ—ಇಷ್ಟು ದಿವಸವೂ ಜೋಯಿಸರು ನಿನಗೆ ಹೇಳಿಕೊಟ್ಟ ಬುದ್ಧಿವಾದವೂ, ಯೋಗ್ಯನಾದ ಸುಮತಿಯೊಡನೆ ನಿನಗೆ ಇದ್ದ ಇಷ್ಟು ದಿವಸದ ಸ್ನೇಹವೂ ಯಾವ ಉಪಯೋಗಕ್ಕೂ ಬಾರದೆ, ನಾಚಿಗೆ ಕೆಟ್ಟು ಸುಮತಿಯನ್ನು ನೀನು ಹೊಡೆಯುವ ಮಟ್ಟಿಗೆ ನಿನ್ನಲ್ಲಿ ದುಡುಕು ಇರುವಾಗ, ಜೋಯಿಸರು ಅರೆಗಳಿಗೆ ಓದಿ ಹೇಳಿದ ಕಥೆಯಿಂದ ಅವರೆ

ಲ್ಲರೂ ಬುದ್ಧಿಶಾಲಿಗಳಾಗುತಾರೆಂದು ನೀನು ಹೇಗೆ ಹೇಳಬಲ್ಲೆ ?

ಮದನ—(ನಾಚಿಕೆಯಿಂದ) ಅಪ್ಪಾಜಿ, ನನ್ನಿಂದ ಅಪರಾಧ ವಾಯಿತು. ಇಲ್ಲಿಗೆ ಕ್ಷಮಿಸಬೇಕು. ನಾನು ಇನ್ನು ಮೇಲೆ ಹೀಗೆ ಮಾಡಿದರೆ ನನ್ನ ಮುಖವನ್ನು ತಾವು ನೋಡಬೇಡಿ.

ಹೀಗೆ ಹೇಳಿ ಕೇವಲ ಲಜ್ಜೆಯಿಂದ ಮಾತನಾಡದೆ ಆ ಕೊಟ್ಟಡಿ ಯಿಂದ ಹೊರಟು ಹೋದನು.

ದೊರೆ—ಪ್ರಯೋಜನವೇನು ? ಗಾಳಿ ತಿರುಗಿದ ಹಾಗೆ ಈ ಹುಡುಗನ ಸ್ವಭಾವವೂ ತಿರುಗುವುದು.

ಜೋಯಿಸ—ಈಗ ಅವನ ಮನಸ್ಸಿಗೆ ಅಂಟಿದ ಸಂಗತಿಗಳಿಗಾಗಿ ಸಂತೋಷಪಡಬೇಕು. ಈ ಲೋಕದಲ್ಲಿ ಅನೇಕ ಜನರಿಗೆ ಒಂದೊಂದು ತಪ್ಪನ್ನೂ ಮಾಡಿ ಮಾಡಿ ಮನಸ್ಸು ಜಿತವಾಗಬೇಕು.

ಕೂಡಲೆ ಮದನನು ಮನೆಯೊಳಕ್ಕೆ ಹೋಗಿ ತನ್ನ ಡಂಭವಾದ ಬಟ್ಟೆಗಳನ್ನೂ ಒಡವೆಗಳನ್ನೂ ತೆಗೆದುಹಾಕಿ, ಬಡವರ ಹಾಗೆ ಬಟ್ಟೆ ಯನ್ನು ಹೊದ್ದು ಹೊರಕ್ಕೆ ಹೊರಟನು.

ರಾಣಿ—ಮಗು ಇದೇನು ಬಟ್ಟೆ ? ಇಂಥಾ ವೇಷ ದೊರೆ ಮಕ್ಕ ಳಿಗೆ ಯೋಗ್ಯವಾದದ್ದೆ ?

ಮದನ—ಅಮ್ಮಯ್ಯ, ನಿಮ್ಮ ಡಂಭದ ಬಟ್ಟೆಗಳು ಸಾಕು. ನಿಮ್ಮ ಆಭರಣಗಳೂ ಸಾಕು. ನನಗೆ ಇಷ್ಟರಮಟ್ಟಿನ ಬುದ್ಧಿ ಬಂದಿದ್ದರೆ ನಮ್ಮ ಮನೆಯಲ್ಲಿ ಪ್ರಸ್ತಕ್ಕಾಗಿ ಸೇರಿದ್ದ ಆ ಕೂಟದ ನಡತೆ ನನಗೆ ಬರುತಿರಲಿಲ್ಲ ; ಯೋಗ್ಯನಾದ ಸುಮತಿಯ ವಿಷಯದಲ್ಲಿ ನಾನು ಅಷ್ಟು ದುಡುಕನ್ನು ತೋರಿಸುತಲೂ ಇರಲಿಲ್ಲ.

ಹೀಗೆಂದು ಹೇಳಿದ ರಾಜಪುತ್ರನ ಮಾತನ್ನು ಕೇಳಿ ಕೆಲವರಿಗೆ ಆಶ್ಚರ್ಯವೂ ಕೆಲವರಿಗೆ ಸಂತೋಷವೂ ಉಂಟಾಯಿತು.

ಮಾರನೇ ದಿವಸ ಬೆಳಗ್ಗೆ ಮದನನು ಜೋಯಿಸರ ಬಳಿಗೆ ಹೋಗಿ ಅವರಿಗೆ ಎಂದಿನಂತೆ ಪ್ರಾತಃಕಾಲದ ನಮಸ್ಕಾರವನ್ನು ಮಾಡಿ, " ಜೋಯಿಸರೆ, ಸುಮತಿಯನ್ನು ನಾನು ನೋಡಬೇಕು. ಅವರ ಮನೆಗೆ ಹೋಗೋಣ " ಎಂದನು. ಅದರಂತೆ ಜೋಯಿಸನೂ ಮದ

ನನೂ ಸೂರ್ಯಭಟ್ಟರ ಮನೆಗೆ ಹೊರಟರು. ಮದನನು ಸುಮತಿಯ ಮೇಕೇಮರಿಯನ್ನು ಸಂಗಡ ಕರೆದುಕೊಂಡು ಹೋರಟನು. ಸಂಗಾತಿಯನ್ನು ನೋಡಲು ಕೇವಲ ಕುತೂಹಲನಾಗಿದ್ದ ಮದನನ ಕಣ್ಣಿಗೆ ಮೊದಲು ಸುಮತಿ ಕಾಣಿಸಿದನು. ಕೂಡಲೆ ದೊರೆ ಮಗನು ಅತಿ ವೇಗದಿಂದ ಮದನನ ಕಡೆಗೆ ನಗುತಾ ಓಡಿ ಬಂದನು. ಆಗ ಸುಮತಿಯು ಇವನ ಅಭಿಪ್ರಾಯವನ್ನು ತಿಳಿದುಕೊಂಡು ಮದನನನ್ನು ಬಾಚಿ ತಬ್ಬಿಕೊಂಡನು. ಈ ಪ್ರಕಾರ ಇಬ್ಬರೂ ಒಂದು ಗಳಿಗೆಯಲ್ಲಿ ಪೂರ್ವದಂತೆಯೇ ಸ್ನೇಹಿತರಾದರು.

ಅಷ್ಟರಲ್ಲಿಯೇ ರಾಮಜೋಯಿಸನೂ ಅಲ್ಲಿಗೆ ಬಂದು ಒದಗಿ, ಸುಮತಿಯನ್ನು ಕುರಿತು,

ಜೋಯಿಸ—ಸುಮತಿ, ನಿನ್ನ ಸ್ನೇಹಿತನನ್ನು ಕರೆದುಕೊಂಡು ಬಂದಿದೇನೆ. ತಾನು ಪರಿತಾಪಪಟ್ಟು ಅಪರಾಧ ಮಾಡಿದೆನೆಂದು ನಿನ್ನ ಮುಂದೆಯೇ ಒಪ್ಪಿಕೊಂಡು ಕ್ಷಮೆಯನ್ನು ಕೇಳಿಕೊಳ್ಳುವುದಕ್ಕೆ ಬಂದಿದಾನೆ.

ಮದನ—ಗುರುಗಳೇ, ಪರಿತಾಪವೇನೋ ನನಗೆ ಚೆನ್ನಾಗಿಯೇ ಉಂಟು. ಆದರೆ ನನ್ನ ದುರ್ನಡತೆಯನ್ನು ಸುಮತಿ ಕ್ಷಮಿಸಿಯಾನೆ?

ಸುಮತಿ—ಹಾಗೆ ಹೇಳಬೇಡ, ಮದನ, ನನ್ನಲ್ಲಿ ನಿನಗೆ ಇದ್ದ ಪ್ರೀತಿಯೊಂದು ಹೊರತು ನಿಂತದ್ದೆಲ್ಲವನ್ನೂ ಮರೆತುಬಿಟ್ಟೆ.

ಹೀಗೆ ಹೇಳಿದ ಕೂಡಲೆ ಮದನನು ಪೂರ್ವದಲ್ಲಿ ತಾನು ನಾಯಿಯಿಂದ ಕೊಲ್ಲಲ್ಪಡುತಿದ್ದ ಸುಮತಿಯ ಮೇಕೇಮರಿಯೊಂದನ್ನು ಬಿಡಿಸಿಕೊಂಡು ಇಷ್ಟು ದಿನವೂ ಬಹು ಜಾಗರೂಕತೆಯಿಂದ ಪೋಷಣೆ ಮಾಡಿ ತನ್ನ ಸಂಗಡಲೇ ಕರೆದುಕೊಂಡು ಬಂದದ್ದನ್ನು ಸುಮತಿಗೆ ಕೊಟ್ಟು, ಅದರ ಪೂರ್ವ ವೃತ್ತಾಂತವನ್ನೆಲ್ಲಾ ವಿಸ್ತಾರವಾಗಿ ಹೇಳಿದನು. ಆಗ ಸುಮತಿಗೆ ತನ್ನ ಮೇಕೇಮರಿ ಉಳಿಯಿತಲ್ಲಾ ಎಂದು ಸಂತೋಷ ಮತ್ತೂ ಹೆಚ್ಚಾಯಿತು. ಸುಮತಿಯು ಜೋಯಿಸನನ್ನೂ ದೊರೆ ಮಗನನ್ನೂ ತಮ್ಮ ಮನೆಗೆ ಕರೆದುಕೊಂಡು ಹೋದನು. ಆ ಮನೆ ಅಷ್ಟು ದೊಡ್ಡದಲ್ಲದಿದ್ದಾಗ್ಯೂ ಅನುಕೂಲವಾಗಿಯೂ ನೋಡುವು

ದಕ್ಕೆ ಬಹು ನಿರ್ಮಲವಾಗಿಯೂ ಇತ್ತು. ಸೂರ್ಯಭಟ್ಟನೂ ಆತನ ಹೆಂಡತಿಯೂ ಈ ಅತಿಥಿಗಳನ್ನು ನೋಡಿ ಬಹಳ ಸಂತೋಷದಿಂದ ಅವರನ್ನು ಉಪಚರಿಸಿದರು. ಸೂರ್ಯಭಟ್ಟನೂ ರಾಮಜೋಯಿಸನೂ ತಮ್ಮ ಸ್ನಾನಾಹ್ನಿಕಗಳನ್ನೂ ಪಾರಾಯಣ ದೇವತಾರ್ಚನೆ ಮೊದಲಾದ ನಿತ್ಯ ಕರ್ಮಗಳನ್ನು ತೀರಿಸಿಕೊಂಡು ಭೋಜನವನ್ನು ಮಾಡಿದರು. ಮದನನಿಗೂ ಸ್ನಾನವಾಯಿತು. ಮೈಯನ್ನು ಒರೆಸುತೇನೆಂದು ಜೋಯಿಸ ಕರೆದರೂ ಒಲ್ಲದೆ ರಾಜಪುತ್ರನು ತಾನೇ ಒರಸಿಕೊಂಡು— " ಜೋಯಿಸರೆ, ನಮ್ಮ ಕೆಲಸವನ್ನು ನಾವೇ ಮಾಡಿಕೊಳ್ಳಬೇಕಲ್ಲದೆ ಇತರರ ಸಹಾಯವನ್ನು ಅಪೇಕ್ಷಿಸಬಾರದೆಂದು ತಾವು ನನಗೆ ಹೇಳಿಲ್ಲವೆ ? ಆದ್ದರಿಂದ ನಾನೇ ವರಸಿಕೊಳ್ಳುತ್ತೇನೆ" ಎಂದನು. ಹಣೆಗೆ ವಿಭೂತಿಯನ್ನೂ ಚುಕ್ಕೀಬಟ್ಟನ್ನೂ ಇಡುತೇನೆ ಬಾ, ಎಂದು ಕರೆದರೆ, ಮದನನು " ಗುರುಗಳೆ, ಚುಕ್ಕೀಬಟ್ಟನ್ನು ಇಟ್ಟು ಶೃಂಗಾರ ಮಾಡಿಕೊಳ್ಳತಕ್ಕ ಸಿಸ್ತುಗಾರರ ಮಾತನ್ನು ಕೇಳಿ ನನಗೆ ಆಗಬೇಕಾದ್ದೆಲ್ಲಾ ಆಯಿತು. ಸಿಸ್ತನ್ನು ಒಲ್ಲೆ. ವಿಭೂತಿಯೇ ಸಾಕು" ಎಂದನು. ಸುಮತಿಯ ತಾಯಿಯು ಇವನಿಗೆ ಮಣೆಯನ್ನು ಹಾಕಿ ಮುಂದೆ ಅಗ್ರದ ಬಾಳೆ ಎಲೆಯನ್ನು ಹಾಕಿ ಊಟಕ್ಕೆ ಬಡಿಸಿದಳು. ಮದನನು ಮಣೆಯನ್ನು ಎತ್ತಿ ಗೋಡೆಗೆ ಒರಗಿಸಿ ಬರೀ ನೆಲದ ಮೇಲೆಯೇ ಕೂತುಕೊಂಡನು. ಊಟ ಮಾಡುತಿರುವಾಗ ಸುಮತಿಯ ತಾಯಿಯು—"ಅಯ್ಯಾ, ನಿನಗೇನು ಕಡಮೆ? ಯಾಕೆ ಒಂದು ಒಡವೆಯೂ ಮೈಮೇಲೆ ಇಲ್ಲದೆ ಇದ್ದೀಯೆ? ಎಂದು ಕೇಳಿದಳು. ಅದಕ್ಕೆ ರಾಜಕುಮಾರನು—" ತಾಯಿ, ಸುಮತಿ ಮೈ ಮೇಲೆ ಯಾವ ಒಡವೆಯೂ ಇಲ್ಲ. ಆದಾಗ್ಯೂ ಅವನು ಎಷ್ಟೋ ಬುದ್ಧಿಶಾಲಿಯಾಗಿಲ್ಲವೆ ? ಒಡವೆಯನ್ನು ಇಟ್ಟು ಮೆರೆದರೆ ಬಂದ ಭಾಗ್ಯವೇನು ? " ಎಂದನು.

ಊಟವಾದ ತರುವಾಯ ಎದ್ದು ಕೈ ತೊಳೆದುಕೊಂಡು ಬಾಗಿಲ ಜಗಲಿಯ ಮೇಲೆ ಕೂತಿದ್ದ ಹಬ್ಬಸಿಯವನನ್ನು ನೋಡಿ, ಗೂಳಿ ಹಾಯುತ್ತಿದ್ದಾಗ ಸುಮತಿಯ ಪ್ರಾಣವನ್ನು ಉಳಿಸಿದವನು ಇವನೇ ಎಂದು ಅರಿತು,

ಮದನ—ಅಯ್ಯಾ, ನೀನು ನಮ್ಮ ಸುಮತಿಯ ಪ್ರಾಣವನ್ನು ಕಾಪಾಡಿದ ಆಪದ್ಬಂಧುವಲ್ಲವೆ? ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡದೆ, ನಾನು ಅಲಕ್ಷ್ಯವಾಗಿದ್ದ ಸಂಗತಿಗಳಲ್ಲಿ ಇದು ಒಂದು ದೊಡ್ಡದು.

ಹಬ್ಬಸಿ—ಬುದ್ಧಿ, ನಾನು ಸುಮತಿಯ ಸಂಗಡ ಇವರ ಮನೆಗೆ ಬಂದಾಗಿನಿಂದ ಇದುವರೆಗೆ ಸಜ್ಜನರಾದ ಈ ಮನೆಯವರಿಂದ ನಾನು ಹೊಂದಿದ ಉಪಕಾರ ಎಷ್ಟೋ ಭಾರವಾಗಿ ನನ್ನ ತಲೆಯ ಮೇಲೆ ಕೂತಿದೆ. ನನಗೆ ಇನ್ನು ಬೇಕಾದ್ದು ಏನೂ ಇಲ್ಲ.

ಮದನ—ಆದರೆ ದೊರೆಮಗನಾದ ನಾನು ಮಾಡುವ ಉಪಕಾರದ ಸ್ವಭಾವವನ್ನು ಇನ್ನೂ ನೀನು ಅರಿಯೆ.

ಹೀಗೆಂದ ತರುವಾಯ ಮದನನು ಆ ದೊರೆಮಗ ಎನ್ನುವ ಸ್ವಪ್ರತಾಪದ ಮಾತು ಮತ್ತೆ ತನ್ನ ಬಾಯಲ್ಲಿ ಹೊರಟಿತಲ್ಲಾ ಎಂದು ಮನಸ್ಸಿನಲ್ಲಿಯೇ ಸಂಕೋಚಮಾಡಿಕೊಂಡು, ಪುನಃ ಹಬ್ಬಸಿಯುವ ನನ್ನು ಕುರಿತು—"ಅಯ್ಯಾ, ನಾನು ಉಪಕಾರ ಮಾಡುತೇನೆಂದು ಅಲ್ಲ, ನಮ್ಮ ಅಪ್ಪಾಜಿಗೆ ಹೇಳಿ ನಿನಗೆ ಬೇಕಾದ್ದನ್ನು ಕೊಡಿಸುತೇನೆ" ಎಂದನು.

ತರುವಾಯ ಹಬ್ಬಸಿಯುವನಿಗೂ ಊಟವಾಯಿತು. ಈ ಮಧ್ಯೆ ಮದನನು ಸುಮತಿಯ ಅಕ್ಕ ತಂಗಿ ಮೊದಲಾದವರಲ್ಲಿ ಯಾವ ಟೇಂಕಾರವೂ ಇಲ್ಲದೆ ಸಲಿಗೆಯಾಗಿ ಮಾತನಾಡುತಾ ಗರ್ವವನ್ನು ಲೇಶವೂ ತೋರಿಸದೆ ಇದ್ದನು. ರಾಜಪುತ್ರನ ನಡತೆಯನ್ನು ನೋಡಿ ಸೂರ್ಯಭಟ್ಟನ ಮನೆಯವರೆಲ್ಲರಿಗೂ ಬಹು ಸಂತೋಷವಾಯಿತು. ಹೀಗೆ ಐಶ್ವರ್ಯವಂತರು ನಿಗರ್ವಿಗಳಾಗಿದ್ದರೆ ಅವರಿಗೆ ಸುಲಭವಾಗಿ ಗೌರವವೂ ಸೌಜನ್ಯವೂ ದೊರೆಯುವವು. ಇದನ್ನು ಬಿಟ್ಟು ಅಹಂಕಾರ ದಿಂದ ಬಡವರ ಕಡೆಗೆ ತಿರುಗಿಯೂ ನೋಡದೆ ಆಡುವ ಮಾತುಗಳ ನ್ನೆಲ್ಲಾ ಘರ್ಜನೆಮಾಡಿ ಆಡುತಾ ಹೆಜ್ಜೆ ಹೆಜ್ಜೆಗೂ ಕೋಪವನ್ನು ಮಾಡಿಕೊಂಡು ಎಲ್ಲರನ್ನೂ ತಿರಸ್ಕರಿಸಿ ಮಾತನಾಡಿ ಮೆರೆಯುವರು.

ಆಗ ಮನೆಯವರೆಲ್ಲರಿಗೂ ಊಟವಾಗಿ ಎಲ್ಲರೂ ಸಾವಕಾಶದಿಂದ

ಮೂರನೇ ಹಜಾರದಲ್ಲಿ ಕೂತುಕೊಂಡಿರುವಾಗ ಮದನನು ಹಬ್ಬಸಿಯವನ ಪೂರ್ವೋತ್ತರವನ್ನು ವಿಚಾರಿಸಿದನು.

---

## ೨೫ನೆ ಅಧ್ಯಾಯ

ಆಗ ಮದನನು ಹಬ್ಬಸಿಯವನನ್ನು ಕುರಿತು—ಅಯ್ಯೋ, ನಿಮ್ಮ ದೇಶದವರಿಗೆ ಈ ಗೂಳೀ ಕಾಳಗದ ಅಭ್ಯಾಸ ಹೆಚ್ಚಾಗಿರುವಂತೆ ತೋರುತಿದೆ. ಇಲ್ಲದೇ ಇದ್ದರೆ ಉಗ್ರವಾದ ಆ ಗೂಳಿಯನ್ನು ಹಾಗೆ ಎದುರಿಸುವುದಕ್ಕಾದೀತೆ? ಕಾಡುಮೃಗಗಳನ್ನು ಸಾದಾಗಿ ಮಾಡುವುದಕ್ಕೆ ನನಗೂ ತಿಳಿಯುವುದು. ಆದರೆ ಅಂಥಾ ಭಯಂಕರವಾದ ಗೂಳಿಯನ್ನು ನಾನು ಯಾವಾಗಲೂ ನೋಡಿರಲಿಲ್ಲ. ಆ ದಿನ ನೀನು ಇಲ್ಲದಿದ್ದರೆ ನನ್ನ ಪ್ರಾಣವೇ ಉಳಿಯುತಿರಲಿಲ್ಲ. ಹೀಗೆಂದು ಮದನ ಹೇಳಿದನು. ಅದಕ್ಕೆ ಹಬ್ಬಸಿಯವನು—ಬುದ್ಧಿ, ಈ ಬಗೆ ಗೂಳಿಕಾಳಗ, ಕೋಣನ ಕಾಳಗ, ಟಗರಿನ ಕಾಳಗ ಮೊದಲಾದ್ದು ದೇಶ ದೇಶದಲ್ಲಿಯೂ ಉಂಟು; ನಮ್ಮ ದೇಶದಲ್ಲಿ ಒಂದು ಕಡೆಯೇ ಅಲ್ಲ. ಮೊನ್ನೆ ನಡೆದ ಕಾಳಗ ಅಷ್ಟರಲ್ಲಿಯೇ ಇದೆ. ಇದಕ್ಕಿಂತಲೂ ಅಧಿಕವಾದ್ದನ್ನು ಎಷ್ಟೋ ನೋಡಿದೇನೆ, ಎಂದನು.

ಕೂಡಲೆ ತಾನು ಕಾಡುಮೃಗಗಳನ್ನು ಸಾದುಮಾಡುವುದಕ್ಕೆ ಬಲ್ಲೆನೆಂತಲೂ ಇತರರಿಗಿಂತ ಹೆಚ್ಚಾಗಿ ಈ ವಿಷಯಗಳನ್ನು ತಿಳಿದು ಇದೇನೆಂತಲೂ ಮದನನು ತನ್ನ ಸ್ವಪ್ರತಾಪವನ್ನು ಹೇಳಿಕೊಳ್ಳುವ ದುರಭ್ಯಾಸ ತನಗೆ ಇನ್ನೂ ಹೋಗಲಿಲ್ಲವಲ್ಲಾ, ಎಂದು ಮನಸ್ಸಿನಲ್ಲಿಯೇ ಪೇಚಾಡಿಕೊಂಡು, ಹಬ್ಬಸಿಯವನನ್ನು ಕುರಿತು—ಅಯ್ಯಾ ಮಿತ್ರನೆ, ಇದೆಲ್ಲವನ್ನೂ ನೀನು ಎಲ್ಲಿ ವಿಶೇಷವಾಗಿ ನೋಡಿದ್ದೀಯೆ? ಹೇಳು, ಎಂದನು.

ಅದಕ್ಕೆ ಹಬ್ಬಸಿಯವನು—ಸ್ವಾಮಿ, ನಾನು ಎಷ್ಟೋ ದೇಶವನ್ನು ಸುತ್ತಿದೇನೆ. ಅನೇಕ ದ್ವೀಪಾಂತರಗಳಿಗೆ ಹೋಗಿದೇನೆ. ಒಂದಾನೊಂದು ಸೀಮೆಯಲ್ಲಿ ಜನರು ಕುದುರೆಯನ್ನು ಹತ್ತಿ ಕಾಡಿಗೆ ಹೋಗಿ

ಕಾಡಗೂಳಿಗಳನ್ನು ಹಿಡಿಯುವರು. ಅವರು ಬಲವಾಗಿ ಉದ್ದವಾಗಿ ರುವ, ಒಂದು ಹಗ್ಗದ ಕೊನೆಗೆ ಜೀರುಗುಣಿಕೇ ಹಾಕಿ ಅದನ್ನು ಕೈಲಿ ಹಿಡಿದುಕೊಂಡಿರುವರು. ಇವರನ್ನು ಕಂಡಕೂಡಲೆ ರೋಷದಿಂದ ಗೂಳಿಯು ಮೇಲೆ ಬೀಳುವುದಕ್ಕೆ ಬಂದು ನೆಗೆಯುವುದು. ಆಗ ಕುದುರೇ ಮೇಲೆ ಕೂತಿರುವ ಮನುಷ್ಯನು ತನ್ನ ಕೈಲಿರುವ ಜೀರು ಗುಣಿಕೆಯನ್ನು ಬಹು ಚಮತ್ಕಾರವಾಗಿ ಎಸೆಯುವನು. ಆ ಹಗ್ಗ ಹೋಗಿ ಗೂಳಿಯ ಕಾಲಿಗೆ ಬೀರಿಕೊಳ್ಳುವುದು. ಆ ಕ್ಷಣದಲ್ಲಿಯೇ ಕುದುರೆಯು ಗೂಳಿಯ ಸುತ್ತಲೂ ಪ್ರದಕ್ಷಿಣೆಯಾಗಿ ಅತಿವೇಗದಿಂದ ಸುತ್ತುವುದು. ಹಾಗೆಯೇ ಹಗ್ಗವು ಗೂಳಿಯ ಕಾಲಿಗೂ ಮೈಗೂ ಚೆನ್ನಾಗಿ ಸುತ್ತಿಕೊಳ್ಳುವುದು. ಆಗ ಅದರ ಯತ್ನ ತಪ್ಪಿಹೋಗಿ ಮೇಲಕ್ಕೆ ಏಳಲಾರದೆ ನೆಲಕ್ಕೆ ಬಿದ್ದುಬಿಡುವುದು; ಈ ಬೇಟೆಗಾರನು ಕುದುರೆಯ ಮೇಲಿನಿಂದ ಇಳಿದು ಕಠಾರಿಯನ್ನು ಹಿಡಿದು ಆ ಗೂಳಿಯ ಕೊಂಬಿನ ಹಿಂಭಾಗದಲ್ಲಿ ತಿವಿದು ಅದನ್ನು ಕೊಲ್ಲುವನು.

ಒಂದಾನೊಂದು ಸಮಯದಲ್ಲಿ ಒಂದು ವಿಚಿತ್ರ ನಡೆಯಿತು. ಒಂದು ಊರಿನಲ್ಲಿ ಒಬ್ಬ ಅಪರಾಧಿಯನ್ನು ಸೆರೆಮನೆಗೆ ಹಾಕಿದರು. ಅವನು ಆ ಊರ ದೊರೆಯನ್ನು ಕುರಿತು—ನನಗೆ ಮರಣದಂಡನೆ ಯನ್ನು ಕೊಟ್ಟಾಗ್ಯೂ ಸರಿಯೆ, ಸೆರೆಮನೆಗೆ ಮಾತ್ರ ಹಾಕಿಸಕೂಡದು. ನಾನು ಯಾವಾಗಲೂ ರಣದಲ್ಲಿ ಕತ್ತೀ ಹಿಡಿದು ಬಾಳಿದ ವೀರಭಟ. ಅಪಮಾನಕ್ಕೆ ಅಂಜುವೆನು, ಮರಣಕ್ಕೆ ಅಂಜುವುದಿಲ್ಲ. ನನ್ನ ಸಾಮರ್ಥ್ಯವನ್ನು ತೋರಿಸುವ ಒಂದು ವಿಚಿತ್ರವನ್ನು ಮಾಡುವುದಕ್ಕಾ ಗಲಿ ಅಥವಾ ಅದರಲ್ಲಿ ನನ್ನ ಪ್ರಾಣವನ್ನು ಒಪ್ಪಿಸುವುದಕ್ಕಾಗಲಿ ಅಪ್ಪಣೆಯಾಗಬೇಕು; ನನಗೆ ಇದಕ್ಕಾಗಿ ನನ್ನ ಕುದುರೆಯನ್ನೂ ಉದ್ದ ವಾದ ಹಗ್ಗವನ್ನೂ ಅಪ್ಪಣೇ ಕೊಡಿಸಬೇಕು, ಇನ್ನೇನೂ ಬೇಡ— ಎಂದನು. ದೊರೆಯು ಅದೇ ರೀತಿಯಲ್ಲಿ ಅಪ್ಪಣೆ ಮಾಡಿದನು. ಇವನ ಸಾಹಸವನ್ನು ನೋಡುವುದಕ್ಕಾಗಿ ಒಂದು ದಿನ ಎಲ್ಲರೂ ಸೇರಿ ದರು. ಸಾಹಸಗಾರನು ಕುದುರೆಯ ಮೇಲೆ ಏರಿ ಹೊರಡಲು ಎದುರಿಗೆ ಒಂದು ದೊಡ್ಡ ಗೂಳಿಯು ಅಬ್ಬರಿಸಿಕೊಂಡು ಬಂತು. ಈ ಮನುಷ್ಯನು

ತನ್ನ ಕುದುರೆಯನ್ನು ಹಿಂದಕ್ಕೂ ಮುಂದಕ್ಕೂ ಸೊಟ್ಟ ಸೊಟ್ಟನಾಗಿಯೂ ಓಡಿಸುತಾ ಬಂದನು. ಗೂಳಿಯು ಇವನ ಹಿಂದೆಯೇ ಹರಿಸಿಯಾಡುತಾ ಹೋಯಿತು. ಇವನು ಅದಕ್ಕೆ ಸಿಕ್ಕಲಿಲ್ಲ. ಕೊನೆಗೆ ಆ ವೃಷಭಕ್ಕೆ ಆಯಾಸವಾಗಿ ವೇಗವನ್ನು ಕಡಮೆಮಾಡಿತು. ಆಗ ತನ್ನ ಕೈಲಿದ್ದ ಹಗ್ಗವನ್ನು ಎಸೆದು ಅದು ಮುಗ್ಗರಿಸಿ ಬೀಳುವಂತೆ ಮಾಡಿ ಹತ್ತಿರಕ್ಕೆ ಬಂದು ಅದನ್ನು ಕಟ್ಟಿಹಾಕಿದನು. ಹೀಗೆ ಹಬ್ಬಸಿಯವನು ಹೇಳಿದ ಕೂಡಲೆ,

ಮದನ—ಅವನು ಎಂಥಾ ಸಮರ್ಥನಾಗಿರಬೇಕು! ನಾವೇ ಐಶ್ವರ್ಯವಂತರು, ನಾವೇ ದೊರೆಮಕ್ಕಳು, ನಮಗೆ ಯಾರೂ ಸಮಾನರಿಲ್ಲ, ಎಂದು ಮೆರೆಯತಕ್ಕವರೆಲ್ಲಾ ಬಂದು, ಅಂಥಾ ಗೂಳಿಯೊಂದನ್ನು ಕಟ್ಟಿಹಾಕಲಿ, ನೋಡೋಣ!

ಹಬ್ಬಸಿ—ಬುದ್ಧಿ ಒಬ್ಬೊಬ್ಬ ಪುರುಷನಲ್ಲಿ ಒಂದೊಂದು ಗುಣವಿರುತ್ತೆ. ಜನರ ಕ್ಷೇಮಕ್ಕಾಗಿ ದೇವರು ಒಂದೊಂದು ದೇಶದಲ್ಲಿ ಒಂದೊಂದು ಸಾಮರ್ಥ್ಯವನ್ನು ಮನುಷ್ಯನಿಗೆ ಕೊಟ್ಟಿದಾನೆ, ಆದರೆ ಯಾವ ಯೋಗ್ಯತೆಯೂ ಇಲ್ಲದೆ ಯಾವ ಕೆಲಸವನ್ನೂ ಮಾಡದೆ ಇತರರು ತಂದು ಹಾಕಿದ್ದನ್ನು ತಿಂದು ಹಾಕುತ್ತಾ ಕೂತ ಕಡೇ ಬಿಟ್ಟು ಏಳದೆ ಪ್ರತಿಷ್ಠೆ ಹತ್ತುವ ಜನರು ನಿಮ್ಮ ದೇಶದಲ್ಲಿ ಬೇಕಾದಷ್ಟಿದಾರೆ, ನಮ್ಮ ದೇಶದಲ್ಲಿ ಒಬ್ಬನೂ ಇಲ್ಲ. ಇವರು ಬಡವರನ್ನು ಬಹು ಅಲಕ್ಷ್ಯವಾಗಿ ಕಾಣುತಾರೆ. ಆ ಬಡವರು ಇಲ್ಲದಿದ್ದರೆ ಇವರು ಬದುಕುವುದು ಹೇಗೋ ಕಾಣೆ.

ಮದನ—ಹವುದಯ್ಯ, ನೀನು ಹೇಳುವುದು ನಿಜವಾದ ಮಾತು. ನಾನು ಓದುವುದಕ್ಕೆ ಮೊದಲ್ಮಾಡಿದಾಗಿನಿಂದಲೂ ನನ್ನ ಅಭಿಪ್ರಾಯವೂ ಹಾಗೆಯೇ. ಆಮೇಲೆ ಆ ಸಾಹಸಗಾರ ಏನುಮಾಡಿದ?

ಹಬ್ಬಸಿ—ತರುವಾಯ ಇನ್ನೊಂದು ವೃಷಭವು ತೆವರಿಕೊಂಡು ಇವನ ಮೇಲೆ ಬೀಳುವುದಕ್ಕೆ ಬಂತು. ಆಗ ಆ ಸಾಹಸಗಾರನು ಕುದುರೆಯನ್ನು ಬಿಟ್ಟು ಇಳಿದು, ಕೊನೆಗೆ ಕಬ್ಬಿಣದ ಮೊಳೆಯನ್ನು ಪೆಟ್ಟಿದ್ದ ಒಂದು ಕೋಲನ್ನು ಕೈಯಲ್ಲಿ ಹಿಡಿದು, ಒಮ್ಮೆ ಗೂಳಿಯ

ಮುಂದೆ ಒಮ್ಮೆ ಅದರ ಹಿಂದೆ ಒಮ್ಮೆ ಅದರ ಮಗ್ಗುಲಲ್ಲಿ ಹೀಗೆ ಹಾರಿ ನಿಲ್ಲುತಾ ಓಡುತಾ ನಿಂತಕಡೆಯಲ್ಲಿ ನಿಲ್ಲದೆ ಅದನ್ನು ಸುತ್ತಾಡಿಸುತಾ ಇದ್ದನು. ಒಂದು ಸಾರಿ ಗೂಳಿಯು ತನ್ನ ಕೊಂಬನ್ನು ತನ್ನ ಶತ್ರುವಿನ ಪೃಷ್ಠಭಾಗಕ್ಕೆ ಹಾಕಿ ಹಾದು ಕೊಲ್ಲುವ ಸಮಯ ಬಂತು. ಅವನು ಅಲ್ಲಿಗೆ ಸಮಾಪ್ತಿಯಾದನೆಂದು ಸಭೆಯೆಲ್ಲಾ ಗೊಳ್ಳನೆ ಕೂಗಿಕೊಂಡಿತು. ಆಗ ಆ ಸಾಹಸಿಯು ಹಿಂಗಣ್ಣ ಎಸೆದು ಅದರ ಬೆನ್ನಿನ ಮೇಲೆ ಕೂತುಕೊಂಡನು. ಅದು ರೋಷದಿಂದ ಓಡುವುದಕ್ಕೂ ನೆಗೆಯುವುದಕ್ಕೂ ಮೊದಲುಮಾಡಿತು. ಇವನು ಹೆದರದೆ ಒಂದು ಕೈಲಿ ಅದರ ಕೊಂಬನ್ನು ಹಿಡಿದು ಇನ್ನೊಂದು ಕೈಯಿಂದ ಕೋಲಿನ ಕೊನೇ ಮೊಳೆಯನ್ನು ಅದರ ಆಯಕ್ಕೆ ಚುಚ್ಚುತಾ ಬಂದನು. ಕಡೆಗೆ ಆ ಮಹಾ ವೃಷಭವು ಆಲಿ ಅಬ್ಬರಿಸಿ ಶಕ್ತಿ ಕುಂದಿ ಕೆಳಕ್ಕೆ ಬಿದ್ದು ಬಿಟ್ಟಿತು. ಈ ಸಾಹಸಿಯು ಅದರ ಮೇಲಿನಿಂದ ಇಳಿದುಬಂದು ದೊರೆಗೆ ನಮಸ್ಕಾರ ಮಾಡಿದನು. ಇವನ ಸಾಮರ್ಥ್ಯಕ್ಕೆ ಆಶ್ಚರ್ಯಪಟ್ಟು ಸಭೆಯವರೆಲ್ಲಾ ಮರದ ಮನುಷ್ಯರಂತೆ ತೋರಿದರು. ಇವನ ಸೆರೆ ಬಿಡುಗಡೆಯಾಯಿತು.

ಹಬ್ಬಸಿಯವನು ಈ ಪ್ರಕಾರ ಹೇಳಿದ ಮಾತನ್ನು ಕೇಳಿ ಮದನನೂ ಅತ್ಯಂತವಾಗಿ ಬೆರಗಾದನು. ಆಗ ರಾಮಜೋಯಿಸನು—ಅರಮನೆಗೆ ಹೊರಡೋಣ ಏಳೆಂದು ಹೇಳಲು, ಮದನನು—ಗುರುಗಳೆ, ನಾನು ಇಲ್ಲಿ ಕೆಲವು ದಿವಸ ಇದ್ದು ಬರುತೇನೆ. ನನ್ನ ಅವಿವೇಕವನ್ನೂ ಕೃತಘ್ನತೆಯನ್ನೂ ಯಾವಯಾವ ವಿಧದಲ್ಲಿ ಹೋಗಲಾಡಿಸಿಕೊಳ್ಳೋಣವೆಂದಾಗ್ಗೂ ಆಗದೆ ಇದೆ; ಅದರ ಪಾಪವನ್ನು ಇವರ ಸತ್ಸಹವಾಸದಲ್ಲಿ ಕಳೆಯಬೇಕೆಂದಿದೇನೆ. ಈ ಅರ್ಥವನ್ನು ಸುಮತಿಯಲ್ಲಿ ಹೇಳಿಕೊಂಡೂ ಇದೇನೆ, ಎಂದನು. ಆಗ ಸುಮತಿಯು ರಾಜಪುತ್ರನನ್ನು ತಬ್ಬಿಕೊಂಡು—ಮದನ, ಕಳೆದುಹೋದ ಸಂಗತಿಯನ್ನೆಲ್ಲಾ ಬಿಟ್ಟು ಬಿಡು, ನಾವಿಬ್ಬರೂ ಪೂರ್ವದಂತೆಯೇ ಸಂಗಾತಿಗಳೆಂದು ತಿಳಿ ಎಂದನು. ಸುಮತಿಯ ಮನೆಯವರೆಲ್ಲರೂ ರಾಜಕುಮಾರನ ಸದ್ಗುಣಗಳನ್ನು ಕಂಡು ಬೆಕ್ಕಸಬೆರಗಾಗಿ ಇವನನ್ನು ಕೊಂಡಾಡುತಿದ್ದರು. ರಾಮಜೋಯಿಸನು ದೊರೆಗೆ ತಾನು ಸಮಾಧಾನ ಹೇಳಿ ಮದನನು ಕೆಲವು ದಿವಸ ಇಲ್ಲಿ

ಇರುವುದಕ್ಕೆ ಆತನನ್ನು ಒಪ್ಪಿಸುತೇನೆಂದು ಹೇಳಿ ಅರಮನೆಗೆ ಹೊರಟು ಹೋದನು.

ಮದನನು ಆ ಬ್ರಾಹ್ಮಣರ ಮನೆಯಲ್ಲಿರುತಾ ಸುಮತಿಯ ಸಂಗಡ ಹೊಲ ಗದ್ದೆ ತೋಟಗಳಲ್ಲಿ ಓಡಿಯಾಡುತಾ, ಮನೆಗೆ ಬಂದು ಹೊಟ್ಟೆ ತುಂಬಾ ಊಟಮಾಡುತಾ, ಸಾಯಂಕಾಲವಾದಮೇಲೆ ಜಾಗ್ರತೆಯಾಗಿಯೇ ಮಲಗಿಕೊಂಡು ಚೆನ್ನಾಗಿ ಕಣ್ಣು ತುಂಬಾ ನಿದ್ರೆ ಮಾಡುತಾ ಬಂದನು. ಮೊದಲು ದಿನ ಸುಮತಿಯು ಬೆಳಗಿನ ಜಾವದಲ್ಲಿಯೇ ಇವನನ್ನು ಎಬ್ಬಿಸಲು ಈ ಅರಸುಮಗನಿಗೆ ಪಾಲುಮಾರಿಕೆ ಹೆಚ್ಚಾಗಿತ್ತು. ಏಳದೇ ಹೋದರೆ ತಮ್ಮ ತಂದೆಯೂ, ರಾಮಜೋಯಿಸರೂ, ಸುಮತಿಯೂ, ಅವರ ಮನೇ ಜನಗಳೂ ತನ್ನನ್ನು ಶುದ್ಧ ಜಡನೆಂದು ತಿಳಿದುಕೊಂಡಾರೆಂಬ ಭೀತಿಯು ಸುಮತಿಯು ಕೂಗಿದ ಕೂಡಲೆ ಎಚ್ಚೆತ್ತು ಮೇಲಕ್ಕೆ ಏಳುವಂತೆ ಮಾಡಿತು. ದೇವರ ನಾಮಸ್ಮರಣೆಯನ್ನು ಮಾಡುತಾ ಮದನನು ಝುಗ್ಗನೆ ಮೇಲಕ್ಕೆ ಎದ್ದನು. ಮಾರನೇ ದಿವಸ ಈ ಪಾಲುಮಾರಿಕೆಯೇ ಇರಲಿಲ್ಲ. ಈ ರೀತಿಯಲ್ಲಿ ಮದನನ ಚಟುವಟಿಕೆ ಹೆಚ್ಚಿತು. ಮೊದಲಿದ್ದ ಸಿಡುಕಲು ಹೋಯಿತು. ತೋಟದಲ್ಲಿಯಾಗಲಿ ಮನೆಯಲ್ಲಿಯಾಗಲಿ ಸುಮತಿ ಮಾಡುತಿದ್ದ ಕೆಲಸಕ್ಕೆಲ್ಲಾ ತಾನು ಹೊಕ್ಕು ಅವನ ಸರಿಗೂ ಕೆಲಸ ಮಾಡುತಾ ಬಂದನು. ಹೀಗೆ ಚಿಕ್ಕ ಹಳ್ಳಿಯಲ್ಲಿ ವಾಸವಾಗಿರುವಾಗ ಅನೇಕ ಬಡಜನರು ಮಾಡುವ ಕೆಲಸಗಳನ್ನು ನೋಡಿ, ಲೋಕದಲ್ಲಿ ಬಡವರೇ ಕೆಲಸ ಮಾಡತಕ್ಕವರೆಂತಲೂ ಅವರು ಇಲ್ಲದಿದ್ದರೆ ಭಾಗ್ಯವಂತರು ಒಂದು ನಿಮಿಷವೂ ಜೀವಿಸಲಾರರೆಂತಲೂ ರಾಜಪುತ್ರನಿಗೆ ಚೆನ್ನಾಗಿ ತೋರಿತು. ಈ ಮಧ್ಯ ಕಾಲದಲ್ಲಿ ರಾಮಜೋಯಿಸನು ಆಗಾಗ್ಗೆ ಬಂದು ದೊರೆಮಗನನ್ನು ವಿಚಾರಿಸಿಕೊಂಡು ಹೋಗುತಲೇ ಇದ್ದನು. ಆಗ ಒಂದು ದಿನ ಜೋಯಿಸನು ರಾಜಪುತ್ರನ ಒಳ್ಳೆ ಗುಣಗಳನ್ನು ಆಗಾಗ್ಗೆ ಕೊಂಡಾಡುತಾ ಒಂದು ಸಾರಿ ಅವನನ್ನು ಕುರಿತು—

ಮದನ, ಕೇಳು. ಲೋಕದಲ್ಲಿ ದೊಡ್ಡವರು ಎಂದು ಹೆಸರನ್ನು ಪಡೆದವರೆಲ್ಲಾ ಅರೆಗಳಿಗೆಯೂ ನಿರುದ್ಯೋಗಿಗಳಾಗಿದ್ದವರಲ್ಲ. ಯಾವ

ದಾದರೂ ಒಂದು ಕಾರ್ಯದಲ್ಲಿ ಉದ್ಯುಕ್ತರಾಗಿಯೇ ಇರುತಿದ್ದರು. ಮತ್ತು ಇಂಥಾ ಮಹಾತ್ಮರು ಡಂಭವನ್ನೇ ಅರಿಯರು. ಬಡತನವೇ ಸಿರಿತನವೆಂದು ತಿಳಿದಿದ್ದರು. ದೀನಾನಾಥರಲ್ಲಿ ಯಾವಾಗಲೂ ದಯಾ ಪರರಾಗಿ ಅನ್ಯರಿಗೆ ಉಪಕಾರವನ್ನೇ ಮಾಡುತಾ ಆತ್ಮಸೌಖ್ಯವನ್ನು ನೋಡದೆ ನಿರಂತರವಾಗಿ ಲೋಕೋಪಕಾರದಲ್ಲಿಯೇ ಮನಸ್ಸನ್ನು ಇಟ್ಟುಕೊಂಡು ಇರುತಿದ್ದರು.—ಈ ಪ್ರಕಾರ ಜೋಯಿಸನು ಬುದ್ಧಿ ಯನ್ನು ಹೇಳಿದನು. ಮದನನಿಗೂ ಸುಮತಿಗೂ ಸ್ನೇಹವು ಪೂರ್ವಕ್ಕೆ ಈಗ್ಗೆ ಹತ್ತರಷ್ಟು ವೃದ್ಧಿಯಾಯಿತು; ಮದನನು ಒಂದು ದಿನ ಸಾಯಂ ಕಾಲದಲ್ಲಿ ಮಾತನಾಡುತಾ ಕೂತುಕೊಂಡಿರುವಾಗ್ಗೆ ಹಬ್ಬಸಿಯವನು ತನ್ನ ಪೂರ್ವವೃತ್ತಾಂತವನ್ನು ಹೇಳಿಕೊಂಡನು.

---

## ೨೬ನೆ ಅಧ್ಯಾಯು

## ಹಬ್ಬಸಿಯುವನ ಚರಿತ್ರೆ

ಇವನು ಹೇಳಿದ್ದು ಹೇಗೆಂದರೆ—ನಾನು ಮಿಸ್ಟರ್, ಬರ್ಬರ ಹಬ್ಬಸಿ ಮೊದಲಾದ ರಾಜ್ಯದ ಕಡೆಯವನು. ಅಲ್ಲಿ ಶೆಖೆ ಬಹು ಹೆಚ್ಚು. ಎಲ್ಲಿನೋಡಿದರೂ ಮರಳು ಕಾಡು ಇರುವುದು. ಖರ್ಜೂ ರದ ಮರವೇ ಹೇರಳವಾಗಿರುವುದು. ಸಿಂಹ ಹುಲಿ ಆನೆ ಇವುಗಳೇ ಇಲ್ಲಿನ ಕ್ರೂರ ಜಂತುಗಳು. ಈ ದೇಶದಲ್ಲಿ ಚಳಿಗೂ ಗಾಳಿಗೂ ಲೇಶವೂ ವ್ಯಾಪನೆ ಇಲ್ಲದಂತೆ ಬಲವಾದ ಗೋಡೆಗಳನ್ನು ಹಾಕಿ ಮನೇ ಕಟ್ಟಿ ದಾರೆ. ಅಲ್ಲಿ ಇಂಥಾ ಮನೆಗಳನ್ನು ನಾವು ಕಾಣಲೇ ಕಾಣೆವು. ಹುಲ್ಲಿನ ಗುಡಿಸಿಲೇ ನಮ್ಮ ಮನೆಗಳು. ಇಂಥಾ ಗುಡಿಸಿಲು ೪೦–೫೦ ಇದ್ದರೆ ಒಂದುವೂರು. ನೀವು ಮನೆಗಳಲ್ಲಿ ಅಗತ್ಯವಿಲ್ಲದ ಏನೇನೋ ಸಾಮಾನುಗಳನ್ನು ಇರಿಸಿಕೊಂಡು ಇರುತೀರಿ. ನಿಮಗೆ ಏನು ಇದ್ದಾಗ್ಗೂ ನೀವು ತೃಪ್ತಿಯಾಗಿ ಸುಖವಾಗಿರುವಂತೆ ಕಾಣುವುದಿಲ್ಲ. ನಿಮ್ಮ ಬಾಗಿಲಿಗೆ ಯಾರಾದರೂ ಬಂದರೆ ಅವರನ್ನು ಆಚೆಗೆ ಅಟ್ಟಿ ಬಿಡುತೀರಿ. ನಮ್ಮ ಹತ್ತಿರ ಈ ವಿಪರೀತದ ಸಾಮಾನುಗಳು ಯಾವುದೂ

ಇಲ್ಲ. ಈ ಹೆಬ್ಬುಬ್ಬುಗಳನ್ನು ನಾವು ಅರಿಯಲೇ ಅರಿಯೆವು. ಯಾರಾದರೂ ಹೊಸಬರು ನಮ್ಮ ಗುಡಿಸಿಲಿಗೆ ಬಂದರೆ ಅವರನ್ನು ಬಹಳವಾಗಿ ಉಪಚರಿಸುತ್ತೇವೆ. ನಿಮ್ಮ ಸೀಮೆಯಲ್ಲಿ ಐಶ್ವರ್ಯವಂತರೆಂತಲೂ ಬಡವರೆಂತಲೂ ಭೇದವನ್ನು ಮಾಡಿಕೊಂಡಿದೀರಿ. ನಿಮ್ಮ ಐಶ್ವರ್ಯವಂತರು ಯಾವ ಬದುಕನ್ನೂ ಮಾಡದೆ ಕಾಲವನ್ನು ಕಳೆಯುತಾ, ತಾವು ದೊಡ್ಡವರೆಂದು ಮೆಡಮೆಟ್ಟಿ ಹತ್ತುತಾ, ಬಡವರನ್ನು ಬಹು ತಿರಸ್ಕಾರವಾಗಿ ಕಾಣುತಾ ಇದಾರೆ. ನಮ್ಮ ದೇಶದಲ್ಲಿ ಮನುಷ್ಯರೆಲ್ಲಾ ಒಂದೇ ಸಮ. ಹೆಚ್ಚು ಕಡಮೆಯೇ ಇಲ್ಲ. ದೇವರು ಎಲ್ಲ ಜಂತುಗಳನ್ನು ನಿರ್ಮಿಸಿದ ಹಾಗೆಯೇ ಮನುಷ್ಯರನ್ನು ನಿರ್ಮಿಸಿದನಲ್ಲವೆ? ಐಶ್ವರ್ಯದ ಕಪಿ ಬಡ ಕಪಿ, ಐಶ್ವರ್ಯದ ನಾಯಿ ಬಡನಾಯಿ, ಐಶ್ವರ್ಯದ ಕಾಗೆ ಬಡ ಕಾಗೆ—ಹೀಗೆ ಭೇದಗಳು ಉಂಟೆ? ಇಲ್ಲದ ಪಕ್ಷದಲ್ಲಿ ಮನುಷ್ಯವರ್ಗಕ್ಕೆ ಮಾತ್ರ ಈ ವ್ಯತ್ಯಾಸ ಹೇಗೆ ಬಂತು? ನಿಜವಾದ ಯೋಗ್ಯತೆಯೂ ಸದ್ಗುಣವೂ ಇರತಕ್ಕವರೇ ದೊಡ್ಡವರು; ಇಲ್ಲದವರು ಬಡವರು. ಹೀಗಿರುವಲ್ಲಿ ನಿಮ್ಮ ದೇಶದವರ ಚರ್ಯವು ನನ್ನ ಕಣ್ಣಿಗೆ ವಿಚಿತ್ರವಾಗಿ ಕಾಣುವುದು.

ಮದನ—ನೀನು ಹೇಳುವುದು ನಿಜವಾದ ಮಾತು. ನಿಮ್ಮ ಸೀಮೆಯ ಕಾಡುಮೃಗಗಳ ವಿಷಯವೇನು?

ಹಬ್ಬಸಿ—ಅಲ್ಲಿನ ಮೃಗಗಳಲ್ಲಿ ಸಿಂಹವೇ ಬಹು ಉಗ್ರವಾದದ್ದು. ಒಂದೊಂದು ಕಾಲದಲ್ಲಿ ನಮ್ಮ ಸೀಮೆಯ ಪ್ರಾಯದ ಆಳುಗಳೆಲ್ಲಾ ಒಟ್ಟಿಗೆ ಸೇರಿ ಕೈಯಲ್ಲಿ ಭರ್ಜಿಯನ್ನು ಈಟಿಯನ್ನು ಹಿಡಿದು ಸಿಂಹ ಇರುವ ಸ್ಥಳವನ್ನು ಅರಸಿಕೊಂಡು ಹೋಗುವರು. ಅದು ಸಿಕ್ಕಿದ ಕೂಡಲೆ ಅದರ ಸುತ್ತಲೂ ಸುತ್ತಿಕೊಂಡು ಅದನ್ನು ಅಬ್ಬರಿಸುತಾ ಅಟ್ಟುತಾ ಭರ್ಜಿಯಿಂದ ಹಿಂದುಗಡೆಯಲ್ಲಿ ತಿವಿಯುತಾ ಹೋಗುವರು. ಮೃಗರಾಜನು ತನಗೆ ಈ ಶತ್ರುಗಳು ಯಾವ ಲಕ್ಷ್ಯವೆಂದು ಉಪೇಕ್ಷೆಯಿಂದ ಮೆಲ್ಲಗೆ ನಡೆದುಕೊಂಡು ಹೋಗುವುದು. ಬಲವಾದ ಏಟನ್ನು ಅದಕ್ಕೆ ಯಾರು ಹೊಡೆಯುತಾರೆಯೋ ಅಂಥವನು ಅದರ ಕೈಗೆ ಸಿಕ್ಕಿ ಪ್ರಾಣವನ್ನು ಒಪ್ಪಿಸದೆ ಇರುವುದು ಅಪೂರ್ವ. ಆದಾಗ್ಗೂ ಅದರ

ಏಟಿಗೆ ಸಿಕ್ಕದೆ ನೆಗೆದು ತಪ್ಪಿಸಿಕೊಂಡು ಅದನ್ನು ಕೊಂದು ಹಾಕಿ ಊರಿಗೆ ಹೊತ್ತುಕೊಂಡು ಬರುವರು. ಊರ ಜನರೆಲ್ಲರೂ ಬೇಟೆ ಗಾರರಿಗೆ ಸನ್ಮಾನವನ್ನು ಮಾಡುವರು.

ಮದನ—ಅಯ್ಯೋ, ಇದೇನು ಭಯಂಕರವಾದ ಬೇಟೆ! ಕಾಡಿ ನಲ್ಲಿ ಒಬ್ಬೊಬ್ಬರೇ ಸಿಂಹವನ್ನು ಕಂಡರೆ ಎದುರಿಸುವುದು ಅಸಾಧ್ಯವೇ ತಾನೆ?

ಹಬ್ಬಸಿ—ಅದು ಯಾವಾಗಲೂ ಅಸಾಧ್ಯವೆಂದು ಹೇಳಕೂಡದು. ಇದಕ್ಕೆ ನಮ್ಮ ತಂದೆಯೇ ದೃಷ್ಟಾಂತ. ಆತನು ಕಾಡಿನಲ್ಲಿ ಹೋಗು ತಿರುವಾಗ ಒಂದು ಸಿಂಹವು ಮನುಷ್ಯನ ವಾಸನೆಯನ್ನು ತಿಳಿದು ಎದು ರಿಗೆ ಬಂತಂತೆ. ಒಂಟಿಯಾಗಿದ್ದ ನಮ್ಮ ತಂದೆಯು ಹೆದರದೆ ಆದ ವಿಧಿ ಯಾಗಲಿ ಎಂದು ನಿಶ್ಚೈಸಿಕೊಂಡು, ಸೊಂಟದಲ್ಲಿದ್ದ ಉದ್ದವಾದ ಚೂರಿ ಯೊಂದನ್ನು ಹಿರಿದುಕೊಂಡು ಅದರ ಅಪಾಯ ಸ್ಥಳಕ್ಕೆ ತಿವಿಯುತ್ತಾ ಬಂದನಂತೆ. ಅದರ ಕೈಗೆ ಸಿಕ್ಕದಂತೆ ಹಾರಿ ಹಾರಿ ಹೊಡೆಯುತಿದ್ದ ಈತನ ಪೆಟ್ಟು ಬಲವಾಗಿ ಬಳಲಿಕೆಯಿಂದ ಸಿಂಹವು ನೆಲಕ್ಕೆ ಬಿತ್ತು. ಕೂಡಲೆ ಇನ್ನೂ ನಾಲ್ಕು ಪೆಟ್ಟನ್ನು ಹಾಕಿ ಅದನ್ನು ನಮ್ಮ ತಂದೆಯು ಕೊಂದು ಹಾಕಿದನು. ಇದರಿಂದ ನಮ್ಮ ಅಯ್ಯನಿಗೆ ಆ ಊರಿನ ಜನ ರಲ್ಲಿ ಮಾನ ಹೆಚ್ಚಾಯಿತು ಆತನ ಪ್ರಖ್ಯಾತಿ ಆ ಪ್ರಾಂತ್ಯದಲ್ಲೆಲ್ಲಾ ಹರ ಡಿಕೊಂಡಿತು. ಈ ತಂದೆಯ ಕೈಕೆಳಗೆ ನನಗೆ ಬೇಟೆಯಾಡುವುದರಲ್ಲಿ ಬಹು ಚೆನ್ನಾಗಿ ಶಿಕ್ಷೆಯಾಯಿತು. ಮೊದಲು ಮೊದಲು ನನ್ನ ಕೈಲಿ ಜಿಂಕೆ ಮೊಲ—ಇವುಗಳನ್ನು ನಮ್ಮ ತಂದೆಯು ಬೇಟೆಯಾಡಿಸಿದನು. ತರುವಾಯ ಹುಲಿ ಮೊದಲಾದ್ದನ್ನು ಹಿಡಿಯಲು ಆರಂಭಿಸಿದೆ.

ಒಂದು ಸಮಯದಲ್ಲಿ ಇನ್ನೊಂದು ವಿಚಿತ್ರವಾದ ಕೆಲಸ ನಡೆ ಯಿತು. ನದೀ ತೀರದಲ್ಲಿರುವ ಗದ್ದೆಗಳನ್ನು ನೀರಿನಲ್ಲಿ ವಾಸಮಾಡುವ ನೀರಕುದುರೆ ಎಂಬ ಒಂದು ಜಂತುವು ಬಹಳವಾಗಿ ಹಾಳುಮಾಡು ವುದು. ಇದರ ಕೈಕಾಲು ಮೊಸಳೇದರ ಹಾಗೆ, ಮೂತಿ ಅಷ್ಟು ಉದ್ದ ವಲ್ಲ, ಬಾಯಲ್ಲಿ ಎರಡು ಕೋರೆ ಇರುವುದು. ಇದು ನೀರಿನಿಂದ ಈಚೆಗೆ ಬಂದು ತಡಿಯಲ್ಲಿ ಓಡಿಯಾಡುವುದು. ಈ ಜಂತುಗಳನ್ನು

ಬೆದರಿಸಿ ಓಡಿಸಿ ಪೈರನ್ನು ಕಾಯಲು ಹತ್ತಿಪ್ಪತ್ತು ಜನ ಪಡ್ಡೆಯಾದ ಹುಡುಗರೆಲ್ಲಾ ಸೇರಿ ಹೊರಟೆವು. ಒಂದು ದೊಡ್ಡ ನೀರ ಕುದುರೆಯು ಗದ್ದೆಗಳನ್ನು ತುಳಿದು ಪೈರನ್ನು ನಾಶಮಾಡುತಿತ್ತು. ಹಗಲೆಲ್ಲಾ ನೀರಿನಲ್ಲಿ ಇದ್ದು ರಾತ್ರೆ ಹಾವಳಿಗಾಗಿ ಈಚೆಗೆ ಬರುವುದು. ಅವರ ಸಂಗಡ ೮-೧೦ ರಾತ್ರೆ ಕಾದೆ. ಅದರ ಹಾವಳಿಯನ್ನು ತಪ್ಪಿಸುವುದಕ್ಕೆ ಆಗಲಿಲ್ಲ. ನಾವೆಲ್ಲರೂ ಒಂದು ಉಪಾಯ ಮಾಡಿದೆವು. ಅದು ನೀರಿನ ತಡಿ ಬಿಟ್ಟು ಪೈರಿನೊಳಕ್ಕೆ ಚೆನ್ನಾಗಿ ನುಗ್ಗಿ ಬರಲೆಂದು ನಾವೆಲ್ಲರೂ ಅವಿತುಕೊಂಡಿದ್ದೆವು. ಅದು ಗದ್ದೆಯೊಳಕ್ಕೆ ಬಹು ದೂರ ಬಂತು. ನಾವೆಲ್ಲರೂ ಎದ್ದು ಒಟ್ಟಿಗೆ ಕೂಗುವುದಕ್ಕೆ ಮೊದಲು ಮಾಡಿದೆವು. ಇದಕ್ಕೆ ಆ ಜಂತುವು ಹೆದರದೆ, ನಮ್ಮ ಗುಂಪಿನ ಮೇಲೆ ನುಗ್ಗಿತು. ನಾವು ಯಾತರಿಂದ ಹೊಡೆದರೂ, ಅದಕ್ಕೆ ಸ್ವಲ್ಪವೂ ಪೆಟ್ಟಾಗಲಿಲ್ಲ. ಅದರ ಚರ್ಮ ಅಷ್ಟು ಗಟ್ಟಿಯಾದ್ದು. ನಮ್ಮಲ್ಲಿ ಒಬ್ಬ ಧೈರ್ಯಶಾಲಿಯು ಅದರ ಸಮೀಪದಲ್ಲಿ ನಿಂತು ಅಪಾಯ ಸ್ಥಳಕ್ಕೆ ಹೊಡೆದು ನೋಡೋಣವೆಂದು ಹತ್ತಿರಕ್ಕೆ ಹೋದನು. ಆ ದುಷ್ಟಮೃಗವು ಬಾಯಲ್ಲಿ ಇವನ ದೇಹವನ್ನು ಎಳೆದುಕೊಂಡು ಕಾಲನ್ನು ತೊಡೆಯಿಂದ ಅಗಿದು ಶರೀರವನ್ನು ನುಂಗುವುದಕ್ಕಾಗಿ ಮೇಲಕ್ಕೆ ಎತ್ತಿತು. ಆಗ ನಾನು ರೋಷದಿಂದ ನನ್ನ ಅಂಬಿನ ಹೆದೆಗೆ ಒಳ್ಳೆ ಹರಿತವಾದ ಒಂದು ಬಾಣವನ್ನು ಸೇರಿಸಿ, ನಿಗನಿಗನೆ ಬೆಂಕಿಯ ಹಾಗೆ ಉರಿಯುತಿದ್ದ ಅದರ ಕಣ್ಣಿಗೆ ಸರಿಯಾಗಿ ಗುರಿಹಿಡಿದು ಚೆನ್ನಾಗಿ ತುಯಿದು ಬಾಣವನ್ನು ಹೊಡೆದೆನು. ಆ ಕ್ಷಣದಲ್ಲಿಯೇ ಆ ಜಲಚರನು ತಾನು ಹಿಡಿದಿದ್ದ ಮನುಷ್ಯನನ್ನು ಬಿಟ್ಟು ನೆಲದಮೇಲೆ ಬಿದ್ದು ಮಡಿಯಿತು. ನಮ್ಮ ಜೊತೆಗಾರರೆಲ್ಲರೂ ನನ್ನನ್ನು ಬಾಚಿ ತಬ್ಬಿಕೊಂಡರು. ಮೆರವಣಿಗೆ ಮಾಡಿಕೊಂಡು ಊರಿಗೆ ಕರೆದುಕೊಂಡು ಬಂದರು. ಆಗ ವೃದ್ಧನಾದ ನಮ್ಮ ತಂದೆಯು ಬಂದು ನನ್ನ ಕೈಹಿಡಿದು, " ಭಲ ! ನನ್ನ ಹುಡುಗ ಇಷ್ಟರಮಟ್ಟಿನ ಬಹುಮಾನವನ್ನು ಪಡೆಯುವ ತನಕ ದೇವರು ನನ್ನನ್ನು ಕಾಪಾಡಿದನಲ್ಲಾ ! " ಎಂದು ಹೇಳಿ, " ಇನ್ನು ಮೇಲೆ ನೀನು ಅಂಬು ಬಿಲ್ಲು ಹಿಡಿಯುವುದಕ್ಕೆ ಯೋಗ್ಯ " ಎಂದು ನನಗೆ ಹೇಳಿ ಬೆನ್ನನ್ನು ತಟ್ಟಿದನು. ನಮ್ಮ ಜನರ

ಲ್ಲೆಲ್ಲಾ ವಿಶೇಷ ಬಹುಮಾನವಾಯಿತು. ಹೀಗೆ ಹಬ್ಬಸಿಯುವನು ತನ್ನ ಕಥೆಯನ್ನು ಹೇಳಿ ಮುಗಿಸಿದನು.

---

## ೨೭ನೆ ಅಧ್ಯಾಯ

ಮದನನು ಇದೆಲ್ಲವನ್ನೂ ಕೇಳಿದನು. ಅವನ ಬುದ್ಧಿಯು ಈಚೆಗೆ ವಿಶೇಷವಾಗಿ ಪ್ರಚುರವಾಯಿತು. ಅವನ ಹೃದಯವು ದೊಡ್ಡ ದಾಯಿತು. ಈ ಅರಸುಮಗನು ತನ್ನ ಮನಸ್ಸಿನಲ್ಲಿ—ಈ ಲೋಕದಲ್ಲಿ ಒಬ್ಬೊಬ್ಬ ಒಂದೊಂದು ಕೆಲಸದಲ್ಲಿ ಸಮರ್ಥನಾಗಿರುತಾನೆ. ಯೋಗ್ಯತೆ ಯನ್ನು ತಿಳಿಯದೆ ಇವರು ಚಹ್ಚು ಇವರು ಕಡಮೆ, ಎಂದು ನಾವು ಭೇದವನ್ನು ಕಲ್ಪಿಸಿಕೊಂಡು ಇತರರನ್ನು ತಿರಸ್ಕರಿಸುವುದು ಶುದ್ಧವಾಗಿ ಕೆಟ್ಟದು ಎಂದು ತಿಳಿದುಕೊಂಡನು.

ಮಗನು ಈಚೆಗೆ ಬಹಳ ಬುದ್ಧಿಶಾಲಿಯಾಗಿದಾನೆಂದು ಕೇಳಿ ದೊರೆಯು ಸಂತೋಷಪಟ್ಟು ಅವನನ್ನು ಬನವಾಸಿಗೆ ಕರೆದುಕೊಂಡು ಹೋಗಬೇಕೆಂದು ತಾನೇ ಅಶ್ವಾರೂಢನಾಗಿ ಸೂರ್ಯಭಟ್ಟನ ಮನೆಯ ಸಮೀಪಕ್ಕೆ ಬಂದನು. ಆಗ ಸೂರ್ಯಭಟ್ಟನು ದೂರದಿಂದಲೇ ಅರಸ ನನ್ನು ನೋಡಿ ಎದುರಿಗೆ ಹೋಗಿ ಫಲ ಮಂತ್ರಾಕ್ಷತೆಯನ್ನು ಕೊಟ್ಟು ಹರಸಿ ಕುಶಲಪ್ರಶ್ನೆಯನ್ನು ಮಾಡಿ ತನ್ನ ಮನೆಗೆ ದಯಮಾಡಿಸಬೇ ಕೆಂದು ವಿನಯವಾಗಿ ಕೇಳಿಕೊಂಡನು. ದೊರೆ ಅದೇ ಪ್ರಕಾರ ಹೋಗಿ ಅಲ್ಲಿ ಕೂತುಕೊಂಡು, ಆ ಮನೇ ಜನರ ಕ್ಷೇಮಲಾಭವನ್ನೂ ಮುಖ್ಯ ವಾಗಿ ಸುಮತಿಯ ಕುಶಲವನ್ನೂ ವಿಚಾರಿಸಿ ತರುವಾಯ ತನ್ನ ಮಗನಿಗೆ ವಿವೇಕ ಬಂದುದಕ್ಕಾಗಿ ಅವನನ್ನು ಸ್ವಲ್ಪ ಸ್ತೋತ್ರ ಮಾಡಿದನು. ಮತ್ತು ಸೂರ್ಯಭಟ್ಟನನ್ನು ಕುರಿತು,

ದೊರೆ—ಸೂರ್ಯಭಟ್ಟರೆ, ತಾವು ಮಾಡಿದ ಉಪಕಾರವನ್ನು ನಾನು ಎಂದೆಂದಿಗೂ ಮರೆಯ ಕೂಡದು. ನಮ್ಮ ಮಗುವನ್ನು ತಮ್ಮ ಮನೆಯಲ್ಲಿ ಇರಿಸಿಕೊಂಡು ಪೋಷಿಸಿದಿರಿ. ಅನ್ವರ್ಥವಾದ ಹೆಸರನ್ನುಳ್ಳ ತಮ್ಮ ಮಗ ಸುಮತಿಯ ಸಹವಾಸದಿಂದ ನಮ್ಮ ಹುಡುಗನು

ಮಾರ್ಗಕ್ಕೆ ಬಂದನು. ಇದಕ್ಕೆ ಸರಿಯಾದ ಉಪಕಾರವನ್ನು ನಾನು ಮಾಡಲು ನನಗೆ ಯೋಗ್ಯತೆಯೇ ಇಲ್ಲ. ಆದರೂ ಇದನ್ನು ಸ್ವೀಕರಿಸ ಬೇಕು; ತಮ್ಮ ಅಪ್ಪಣೆಯಾದರೆ ನಮ್ಮ ಮಗನನ್ನು ಊರಿಗೆ ಕರೆದು ಕೊಂಡು ಹೋಗುತೇನೆ. ಹೀಗೆ ಹೇಳಿ ಒಂದು ಬೆಳ್ಳಿ ತಟ್ಟೆಯಲ್ಲಿ ತುಂಬಾ ಚಿನ್ನದ ಮೊಹರವನ್ನು ಹಾಕಿ ಕೊಡುವುದಕ್ಕೆ ಹೋದನು.

ಸೂರ್ಯಭಟ್ಟ—ದೊರೆಯೆ, ನಾನು ಅಷ್ಟಕ್ಕೆ ಶಕ್ತನಲ್ಲ. ಕ್ಷಮಿಸ ಬೇಕು.

ದೊರೆ— ಚಿಂತೆಯಿಲ್ಲ. ಇಪನ್ನು ತೆಗೆದುಕೊಳ್ಳಬೇಕು. ಸಂಕೋಚ ಬೇಡ. ನಾನು ಮನಃ ಪೂರ್ತಿಯಾಗಿ ಕೊಡುತೇನೆ.

ಸೂರ್ಯ—ಇದನ್ನು ನಾನು ತೆಗೆದುಕೊಂಡರೆ ನನ್ನ ಹೆಂಡತಿ ಸುಮ್ಮನೆಬಿಟ್ಟಾಳೆ? ಈ ಒಡವೇ ಮಾಡಿಸು, ಆ ಒಡವೇ ಮಾಡಿಸು ಎಂದು ವೇಧಿಸಿಯಾಳು. ನಮ್ಮ ಹೆಣ್ಣು ಹುಡುಗರೆಲ್ಲಾ ಪಟ್ಟೇ ಅಂಚಿನ ಸೀರೆಗೆ ಇಳಿಯುತಾರೆ. ನಮ್ಮ ಪಾತಿ ಪಾರ್ವತಮ್ಮನವರಾಗು ತಾಳೆ; ನಮ್ಮ ಅಚ್ಚಿ ಲಕ್ಷಮ್ಮನವರಾಗುತಾಳೆ. ಇವರೆಲ್ಲಾ ಶೃಂಗಾರ ವನ್ನು ಮಾಡಿಕೊಂಡು ಮೆರೆಯುವುದಕ್ಕೆ ಆರಂಭಿಸುತಾರೆ. ಆಮೇಲೆ ನಮ್ಮ ಮನೆಯಲ್ಲಿ ಕೆಲಸಮಾಡುವವರು ಯಾರು?

ದೊರೆ—ನೀವು ದೊಡ್ಡ ಸಂಸಾರಿಗಳು. ಮುಂದೆ ಅನೇಕ ಪ್ರಸ್ತ ಮುಂತಾದ ವೆಚ್ಚದ ಸಮಯ ಬಹಳವಾಗಿದೆ. ಅದಕ್ಕೆ ಈ ದ್ರವ್ಯ ಉಪಯೋಗಿಸಲು ತೆಗೆದುಕೊಳ್ಳಿ.

ಸೂರ್ಯಭಟ್ಟ—ರಾಜನೆ, ನಡೆಯತಕ್ಕ ಮಾತಲ್ಲ. ನಾವು ದುಡ್ಡು ಕಾಸನ್ನು ಹೀಗೆ ಓಡಾಡಿಸಿದರೆ ನಮ್ಮ ಮನೇ ಹೆಂಗಸರೂ ಗಂಡಸರೂ ಕೆಲಸಾ ಮಾಡಿಯಾರೆ? ನಮ್ಮ ತಾಯಿ ಮೊದಲ ಕೋಳಿ ಕೂಗುವಾಗ ಎದ್ದು ನಮ್ಮ ತಂದೆಗಳು ಪಂಚಪಂಚ ಉಷಃಕಾಲಕ್ಕೆ ಸ್ನಾನಕ್ಕೆ ಹೊರಡುವುದಕ್ಕೆ ಮುಂಚಿತವಾಗಿ ಮನೆ ಕೆಲಸಗಳನ್ನೆಲ್ಲಾ ಮುಗಿಸು ತಿದ್ದರು. ಈಗಿನವರು ಎರಡನೇ ಕೋಳಿ ಕೂಗಿದ ಮೇಲೆ ಏಳುತಾರೆ. ಕಾಲ ಕೆಟ್ಟುಹೋಯಿತು. ಹೀಗಿರುವಲ್ಲಿ ನಾವು ಒಡವೆವಸ್ತುಗಳನ್ನೂ ಪಟ್ಟೇ ಅಂಚಿನ ಸೀರೆಯನ್ನೂ ಮಾಡಿಕೊಟ್ಟರೆ ನಮ್ಮ ಸಂಸಾರ ನಡೆ

ಯುವುದು ಹೇಗೆ? ದೊರೆಯೆ, ಬೇಡ. ನಮ್ಮ ಸಂಸಾರದಲ್ಲಿ ವೈಮನಸ್ಯ ವನ್ನು ತಂದು ಹಾಕಬೇಡಿ. ವಿವಾಹಾದಿಗಳು ಆಗಬೇಕಾದ್ದು ನಿಜ. ಆದರೆ ಏನು? ನಮ್ಮ ಕಷ್ಟಾರ್ಜನೆಯಲ್ಲಿ ಇಂಥಾ ಸದ್ವ್ಯಯವನ್ನು ಮಾಡಬೇಕು. ಡಂಭದಿಂದ ನಮಗೆ ಪ್ರಯೋಜನವಿಲ್ಲ.

ದೊರೆ—ದ್ರವ್ಯರೂಪವಾಗಿ ತಾವು ಸ್ವೀಕರಿಸದಿದ್ದರೆ ಚಿಂತೆಯಿಲ್ಲ. ನಮ್ಮ ಅರಮನೆಯಿಂದ ಒಂದು ಉತ್ತಮವಾದ ಭೂಮಿಯನ್ನು ನಿಮಗೆ ಮಾನ್ಯವಾಗಿ ನಡಸಿಕೊಡುತೇನೆ. ಅದನ್ನಾದರೂ ಅಂಗೀಕರಿಸಬೇಕು.

ಸೂರ್ಯಭಟ್ಟ—ರಾಜನೆ, ನನ್ನಕೈಲಾದ ಮಟ್ಟಿಗೂ ಅರಿಕೇ ಮಾಡಿ ಕೊಂಡೆ. ನಾನು ಹೇಳುವುದರ ಧರ್ಮ ಸೂಕ್ಷ್ಮ ತಮಗೆ ಗೋಚರ ವಾಗಲಿಲ್ಲ. ಈಗ ವಿನಯವಾಗಿ ಅರಿಕೇ ಮಾಡಿಕೊಳ್ಳುತ್ತೇನೆ. ನಾವು ಸಪ್ತಪೌರುಷದಿಂದಲೂ ರಾಜಸ್ವತ್ತನ್ನು ಅಪೇಕ್ಷಿಸಿದವರಲ್ಲ. ಅದರಿಂದ ಜೀವನಮಾಡಿದವರಲ್ಲ. ಈಗಲೂ ಅದು ನಮಗೆ ಬೇಡ.

ಹೀಗೆ ಸೂರ್ಯಭಟ್ಟನು ಮೊದಲೆಲ್ಲಾ ಪ್ರಕಾರಾಂತರವಾಗಿ ಬೇಡ ವೆಂದು ದೊರೆಯ ಉಪಕಾರವನ್ನು ತಿರಸ್ಕರಿಸಿ, ಕೊನೆಗೆ ಅರಸನ ಬಲ ವಂತ ಹೆಚ್ಚಾಗಲು ತನ್ನ ಮನಸ್ಸಿನಲ್ಲಿದ್ದ ಮಾತನ್ನು ಸ್ಪಷ್ಟಪಡಿಸಿದನು. ಅರಸನು ಆತನ ನೀತಿಗೂ ನಿಸ್ಪೃಹತ್ವಕ್ಕೂ ಸಂತೋಷಪಟ್ಟು, ಅತ್ಯಂತ ಭಕ್ತಿಯಿಂದ ಆತನಿಗೂ ಆತನ ಹೆಂಡತಿಗೂ ನಮಸ್ಕಾರವನ್ನು ಮಾಡಿ —ಸ್ವಾಮಿ, ನೀವು ಮಹಾಪುರುಷರು; ಆಶೆಯೆಂಬ ಮಹಾಪಾಶದಲ್ಲಿ ಸಿಕ್ಕಿ ನರಳುವ ಈ ಲೋಕದಲ್ಲಿ ತಮ್ಮಂಥವರನ್ನು ಇದುವರೆಗೂ ನಾನು ನೋಡಿರಲಿಲ್ಲ. ಇಂದಿಗೆ ನನ್ನ ಜನ್ಮ ಸಾರ್ಥಕವಾಯಿತು, ಎಂದು ಕರ್ಮನಿಷ್ಠನಾದ ಆ ಬ್ರಾಹ್ಮಣನನ್ನು ಮನಃಪೂರ್ತಿಯಾಗಿ ಹೊಗ ಳುತಾ ಅರಮನೆಗೆ ಪ್ರಯಾಣ ಸನ್ನದ್ಧನಾದನು.

ಆಗ ಮದನನು ಎದ್ದು ಆ ದಂಪತಿಗಳಿಗೆ ನಮಸ್ಕಾರವನ್ನು ಮಾಡಿ, ಅವರ ಆಶೀರ್ವಚನವನ್ನು ಪಡೆದು, ಸುಮತಿಯ ಸಮೀಪಕ್ಕೆ ಬಂದು ಅವನನ್ನು ತಬ್ಬಿಕೊಂಡು—ಸುಮತಿ, ನಿನ್ನಿಂದ ನನಗಾದ ಪ್ರಯೋಜನಕ್ಕೆ ನನ್ನ ದೇಹವನ್ನು ಕುಯಿದು ಒಪ್ಪಿಸಿದರೂ ಸ್ವಲ್ಪವೇ ಇದೆ. ಅಪ್ಪಾಜಿ ಕೊಡುವುದಕ್ಕೆ ಯತ್ನಿಸಿದ ಅಲ್ಪವನ್ನು ಸೂರ್ಯಭಟ್ಟರು

ತಿರಸ್ಕರಿಸಿದರು. ನಮ್ಮ ಕೃತಜ್ಞತೆಯನ್ನು ನಾವು ತೋರಿಸುವುದಕ್ಕೆ ಅವರು ಆಸ್ಪದವನ್ನೇ ಕೊಡಲಿಲ್ಲವಲ್ಲಾ! ಎಂದು ಮನಸ್ಸಿಗೆ ಖೇದ ವಾಗಿದೆ. ಆದರೆ ನಮ್ಮ ಉಪಕಾರಸ್ಮರಣೆಯನ್ನು ನಾವು (ದೊರೆಯೂ ನಾನೂ) ಸಮಯವರಿತು ತೋರಿಸಲೇ ತೋರಿಸುತೇವೆ. ನಿನ್ನ ಸಂಗ ವನ್ನು ಬಿಟ್ಟು ನಾನು ವಿಶೇಷ ದಿವಸ ಇರಲಾರೆ. ನಾವಿಬ್ಬರೂ ಒಟ್ಟಿಗೇ ಇರುವುದಕ್ಕೆ ಏರ್ಪಾಡನ್ನು ಮಾಡುತೇನೆ. ನನ್ನ ನಡತೆಯು ವ್ಯತ್ಯಾಸ ವಾಗಿ ದುರ್ಮಾರ್ಗಕ್ಕೆ ಬೀಳುವ ಹಾಗಾದರೆ, ನಾನು ಇಲ್ಲಿಗೆ ಬಂದು ಸ್ವಲ್ಪ ದಿವಸ ಇದ್ದು ವಿವೇಕವನ್ನು ಕಲಿತುಕೊಂಡು ಹೋಗುತೇನೆ. ಹೀಗೆ ಹೇಳಿ ಕಣ್ಣಿನಲ್ಲಿ ನೀರತಂದುಕೊಳ್ಳುತಾ ಹಬ್ಬಸಿಯವನ ಕಡೆಗೆ ತಿರುಗಿ ಅಯ್ಯಾ, ನೀನು ನನಗೆ ಪರಮಾಪ್ತ, ಯಾವಾಗಲೂ ನನ್ನ ಸಮೀಪದಲ್ಲಿಯೇ ಇರು. ನಮ್ಮ ಸಂಗಡಲೇ ಬಾ, ಎಂದು ಹೊರಟನು. ಆಗ ಸುಮತಿಯೂ ಸೂರ್ಯಭಟ್ಟನೂ ರಾಜಪುತ್ರನನ್ನೂ ರಾಜನನ್ನೂ ಸಾಗಕಳುಹಿಸುವುದಕ್ಕೆ ಹೋದರು. ದೊರೆಯು ಅವರಿಗೆ ಉಪಚಾರೋಕ್ತಿಗಳನ್ನು ಹೇಳಿ, ದೂರವಾಗಿ ಬಂದಿರಿ, ಹಿಂದಕ್ಕೆ ದಯಮಾಡಿಸಿ ಎಂದು ನುಡಿದನು. ಪರಸ್ಪರ ಅಗಲಿ ಹೊರಟು ಹೋಗುವ ಸಮಯವೂ ಬಂತು. ಎಲ್ಲರ ಕಣ್ಣಿನಲ್ಲಿಯೂ ನೀರೂ ಬಂತು. ಕೊನೆಯಲ್ಲಿ ದೊರೆಯು ಸುಮತಿಯನ್ನು ಕರೆದು ಅಯ್ಯಾ, ಬುದ್ಧಿಶಾಲಿಯೇ, ಎಷ್ಟು ಬಗೆಯಲ್ಲಿ ಹೇಳಿಕೊಂಡಾಗ್ಯೂ ನಮ್ಮ ಕೃತ ಜ್ಞತಾ ಸೂಚಕವಾದ ಉಪಚಾರವನ್ನು ಅಲ್ಪ ಸ್ವಲ್ಪವಾಗಿಯಾದರೂ ಸ್ವೀಕರಿಸಲು ನಿಮ್ಮ ಯಜಮಾನರಿಗೆ ಮನಸ್ಸು ಬರದೇ ಹೋಯಿತು. ನಿನ್ನಿಂದ ನಮಗೆ ಆದ ಉಪಕಾರಕ್ಕಾಗಿ ನಮ್ಮ ಪ್ರತ್ಯುಪಕಾರವನ್ನು ಸೂಚಿಸುವುದಕ್ಕೆ ಏನಾದರೂ ಒಂದು ಗುರುತನ್ನು ನೀನಾದರೂ ಹಿಡಿ, ಎಂದನು. ಅದಕ್ಕೆ ಸುಮತಿಯು ಬುದ್ಧಿ, ಹಾಗೆ ಪ್ರತ್ಯುಪಕಾರ ಮಾಡ ಬೇಕೆಂದು ತಮ್ಮ ಮನಸ್ಸಿನಲ್ಲಿದ್ದರೆ ಈ ಸತ್ಪುರುಷನಾದ ಹಬ್ಬಸಿಯ ವನಿಗೆ ಸಹಾಯಮಾಡಬೇಕು. ಅವನನ್ನು ತಾವು ಸಂರಕ್ಷಿಸಿದರೆ ಅದೇ ನಮಗೆ ಪ್ರತ್ಯುಪಕಾರ, ಮತ್ತೆ ಯಾವುದೂ ಅಗತ್ಯವಿಲ್ಲ.

ದೊರೆಯೂ ರಾಜಪುತ್ರನೂ ಅವರನ್ನು ಕೊಂಡಾಡುತಾ ಅರಮನೆಗೆ

ಹೊರಟು ಹೋದನು. ರಾಮುಜೋಯಿಸನು ಅರಸನ ಉಪಚಾರವನ್ನು ತಿರಸ್ಕರಿಸಿದನು. ತರುವಾಯ ರಾಮುಜೋಯಿಸನನ್ನು ಆಗಾಗ್ಗೆ ಹೋಗಿ ನೋಡುತಾ, ಸುಮತಿಯನ್ನು ಪದೇ ಪದೇ ಕಾಣುತಾ ವಿವೇಕಶಾಲಿಯಾಗಿ ಮದನಕುಮಾರನು ರಾಜನ ಸಿಂಹಾಸನಕ್ಕೆ ನಿಜವಾದ ಭೂಷಣನಾಗಿದ್ದನು.

ಸಂಪೂರ್ಣಂ.

# ಈ ಗ್ರಂಥದ ವಿಷಯವಾಗಿ

೧೮ ನೆಯ ಶತಮಾನದಲ್ಲಿ ಥಾಮಸ್ ಡೇ ಎಂಬಾತನು ಇಂಗ್ಲಿಷಿನಲ್ಲಿ ಬರೆದ ' Sandford and Merton 'ಎಂಬ ಕೃತಿಯು ಮಾದರಿಯಲ್ಲಿ ಬರೆದದ್ದು ಈ ಕಾದಂಬರಿ--ಸುಮತಿ ಮದನ ಕುಮಾರರ ಚರಿತ್ರೆ. ಡೇ ರೂಸೌ ಎಂಬ ಫ್ರೆಂಚ್ ತತ್ತ್ವಜ್ಞಾನಿಯ ಶಿಷ್ಯ. ಶಾಲೆಗಳಲ್ಲಿ ಮಕ್ಕಳಿಗೆ ಕಥೆಗಳ ಮೂಲಕವೂ ಸ್ವಾರಸ್ಯವಾದ ಮಾತುಗಳ ಮೂಲಕವೂ ಸದ್ಗುಣಗ ಳನ್ನೂ ಸೈನ್ಸ್ ಮೊದಲಾದ ವಿಷಯಗಳನ್ನೂ ಸುಲಭವಾಗಿಯೂ ಸ್ವಾರಸ್ಯ ವಾಗಿಯೂ ಬೋಧಿಸಬಹುದೆಂಬುದನ್ನು ಸಮರ್ಥಿಸುವುದಕ್ಕಾಗಿಯೇ ' Sandford and Merton ' ಎಂಬ ಬೋಧಪ್ರದ ಕಾದಂಬರಿ ಯನ್ನು ರಚಿಸಿದ. ಅದು ಬಹುಕಾಲ ಜನಪ್ರಿಯವಾಗಿತ್ತು. ಪುಟ್ಟಣ್ಣ ನವರು ಆ ಕಥೆಯನ್ನು ಕನ್ನಡದಲ್ಲಿ ಎಷ್ಟು ರಸವತ್ತಾಗಿ ಕಟ್ಟಿದಾರೆ ಎಂಬುದು ಈ ಪುಸ್ತಕವನ್ನು ಓದಿದವರಿಗೆ ಮನವರಿಕೆಯಾಗದಿರದು.

ಪುಟ್ಟಣ್ಣನವರು (೧೮೫೪-೧೯೩೦) ಶ್ರೀ ಚಾಮರಾಜ ಒಡೆಯರವರ ಕಾಲದಲ್ಲಿ ಕನ್ನಡದ ಪುನರುಜ್ಜೀವನಕ್ಕಾಗಿ ಶ್ರಮಿಸಿದ ಉತ್ಸಾಹಿಗಳು. ಬಾಲಕರಿಗಾಗಿ ಅವರು ರೀಡರುಗಳನ್ನೂ ಹಿಂದೂ ದೇಶದ ಚರಿತ್ರೆಯನ್ನೂ ಬರೆದರು ; ' ನೀತಿಚಿಂತಾಮಣಿ ',' ಸುಮತಿ ಮದನಕುಮಾರರ ಚರಿತ್ರೆ' ಮೊದಲಾದ ನೀತಿಬೋಧಕ ಕಥೆಗಳನ್ನು ರಚಿಸಿದರು. ಷೇಕ್ಸ್‌ಪಿಯರ್ ಕವಿಯ ಕೆಲವು ನಾಟಕಗಳನ್ನು ನಾಟಕಕಥಾರೂಪಗಳಲ್ಲಿ ಕನ್ನಡಕ್ಕೆ ತಂದರು. ಪಾಳೆಯಗಾರರ ಚರಿತ್ರೆಗಳನ್ನು ಸಂಗ್ರಹಿಸಿದರು. ' ಕುಣಿಗಲ್ ರಾಮಾಶಾಸ್ತ್ರಿಗಳ ಚರಿತ್ರೆ ' ಮೊದಲಾದ ಜೀವನ ಚರಿತೆಗಳನ್ನೂ 'ಮಾಡಿ ದ್ದುಣ್ಣೋ ಮಹಾರಾಯ ', ' ಮುಸುಗ ತೆಗೆಯೇ ಮಾಯಾಂಗನೆ ' ಮೊದಲಾದ ಸ್ವತಂತ್ರ ಕಾದಂಬರಿಗಳನ್ನೂ ರಚಿಸಿದರು. ಕನ್ನಡಕ್ಕೆ ಪುಟ್ಟಣ್ಣನವರು ಮಾಡಿರುವ ಸೇವೆ ನೆನಸಿಕೊಳ್ಳಬೇಕಾದದ್ದು. ಪುಟ್ಟಣ್ಣ ನವರದು ಮನೆ ಮಾತಿನ ಶೈಲಿ. ಅವರ ಭಾಷೆ ಸುಲಭವಾದದ್ದು, ಸರಳವಾದದ್ದು ; ಜೀವರೂ ಸತ್ತ್ವದಿಂದ ಕೂಡಿದ್ದು. ಕನ್ನಡ ಪುಸ್ತಕಗಳ ಭಾಷೆ ಕೃತಕವಾಗುತ್ತಿರುವ ಈಗಿನ ಕಾಲದಲ್ಲಿ ಪುಟ್ಟಣ್ಣನವರ ಪುಸ್ತಕಗ ಳನ್ನು ನಮ್ಮ ಹುಡುಗ ಹುಡುಗಿಯರೂ ದೊಡ್ಡವರೂ ಪದೇ ಪದೇ ಓದು ವುದರಿಂದ ವಿಶೇಷ ಪ್ರಯೋಜನವುಂಟು : ಬರಹಗಾರರ ಭಾಷೆ ಸರಳವಾಗಿ, ಸುಲಭವಾಗಿ, ನಿಜವಾದ ಕನ್ನಡವಾಗಿ, ಅವರ ಕೃತಿಗಳು ಕನ್ನಡದ ಸಾಮಾನ್ಯ ಜನರನ್ನು ಒಲಿಸಿಕೊಳ್ಳುವ ಸಂಭವವುಂಟು.